# ನಮ್ಮ ಮಾತು

ನೂತನ ಅಭ್ಯಾಸ ಪತ್ರಿಕೆಯ ಮೇರೆಗೆ ಕನ್ನಡ ನಾಲ್ಕನೆಯ ವರ್ಗಕ್ಕಾಗಿ 'ಸಾಮಾಜಿಕ ಅಭ್ಯಾಸ'ದ ಈ ಪುಸ್ತಕವನ್ನು ರಚಿಸಲಾಗಿದೆ. ವಿಷಯ ನಿರೂಪಣೆಯು ನೂತನ ಅಭ್ಯಾಸ ಪತ್ರಿಕೆಯು ಹಾಕಿಕೊಟ್ಟಿರುವ ನಿರ್ದೇಶನಗಳಿಗೆ ಹೊಂದಿಕೊಂಡಿರುತ್ತದೆ. ನಾಲ್ಕನೆಯ ವರ್ಗದ ಎಳೆಯ ಮಕ್ಕಳ ವಯೋಮಾನವನ್ನು ಅನುಲಕ್ಷಿಸಿ, ವಿಷಯ ಸಂಗ್ರಹ, ಭಾಷೆ, ಶೈಲಿಗಳಲ್ಲಿ ಆದಷ್ಟು ಸರಳತೆಯನ್ನು ತರಲು ಯತ್ನಿಸಿರುವೆವು, ಕೆಲವು ಶಬ್ದಗಳು ರಾಜ್ಯದ ಬೇರೆ ಭಾಗಗಳಲ್ಲಿ ಅಪರಿಚಿತವೆನಿಸಬಹುದು. ಅಂಥವುಗಳಿಗೆ ಆ ಭಾಗದಲ್ಲಿ ಬಳಕೆಯಲ್ಲಿರುವ ಶಬ್ದಗಳನ್ನು ಕಂಸಿನಲ್ಲಿ ಕೊಟ್ಟಿದೆ. ಅಗತ್ಯವಿರುವ ಕೆಲವೊಂದು ಪಾರಿಭಾಷಿಕ ಶಬ್ದಗಳನ್ನು ಸಂದರ್ಭ-ಸನ್ನಿವೇಶಗಳ ಸಹಾಯದಿಂದ ಸುಲಭವಾಗಿ ತಿಳಿಯುವಂತೆ ಮಾಡಿದೆ.

ಪ್ರಾರಂಭದಲ್ಲಿ ಶಾಲೆಯ ಮಕ್ಕಳ ನಿತ್ಯ ಜೀವನದ ಒಂದೆರಡು ಸಂಗತಿಗಳಿಂದ ವಿಷಯದಲ್ಲಿ ಆಸ್ಥೆ-ಅಭಿರುಚಿಗಳನ್ನು ಹುಟ್ಟಿಸಿ, ಸಂಚಾರ ಕ್ರಮದಿಂದ ರಾಜ್ಯದ ಭೂರಚನೆ, ನಿಸರ್ಗ ಸಂಪತ್ತು, ಉದ್ದಿಮೆಗಳು, ಪ್ರೇಕ್ಷಣೀಯ ಸ್ಥಳಗಳು- ಇತ್ಯಾದಿಗಳ ಪರಿಚಯವನ್ನು ಅವರಿಗೆ ಮಾಡಿಕೊಟ್ಟಿದೆ. ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯ ಮಕ್ಕಳು ಅಲ್ಲಲ್ಲಿಯ ಜನಜೀವನವನ್ನು ತಮ್ಮದೇ ಆದ ಅನುಭವದ ಮಾತಿನಲ್ಲಿ ಹೇಳುವ ರೀತಿಯನ್ನು ಅನುಸರಿಸಲಾಗಿದೆ.

ನವ ಭಾರತವನ್ನು, ಮೈಸೂರು ರಾಜ್ಯವನ್ನು ಸರ್ವತೋಮುಖವಾಗಿ ನಿರ್ಮಿಸಲು ತಮ್ಮ ಜೀವನವನ್ನು ಮುಡುಪಾಗಿಟ್ಟಿರುವ ಮಹಾಪುರುಷರ ಅಲ್ಪ ಪರಿಚಯವನ್ನು ಕಾಲಾನುಕ್ರಮೇಣ ಇಲ್ಲಿ ಮಾಡಿಕೊಟ್ಟಿದೆ. ಹಾಗೂ ಆಡಳಿತದ ರೂಪರೇಷೆಯ ಕಲ್ಪನೆಯನ್ನು ಮಾಡಿಕೊಡಲಾಗಿದೆ.

ಜೀವನ ಕ್ರಮವು ಏಕೆ ಬದಲಾಗಿರುವದು? ಎಂಬುದನ್ನು ಮಕ್ಕಳು ಸರಿಯಾಗಿ ತಿಳಿದುಕೊಳ್ಳಬೇಕು, ಅದನ್ನು ಸಹಾನುಭೂತಿಯಿಂದ ಕಾಣಬೇಕು. ಭಾರತದ ಬಗ್ಗೆ, ಮೈಸೂರು ರಾಜ್ಯದ ಬಗ್ಗೆ ಉಚಿತವಾದ ಪ್ರೀತಿ-ಗೌರವಗಳು ಅವರಲ್ಲಿ ಉಂಟಾಗಬೇಕು. ಜೀವನದ ಈ ದೃಷ್ಟಿಯನ್ನು ಮಕ್ಕಳಲ್ಲಿ ಮೂಡಿಸುವಂತೆ ಈ ಪುಸ್ತಕದಲ್ಲಿ ಪ್ರಯತ್ನ ಮಾಡಲಾಗಿದೆ.

— ಲೇಖಕರು

# ಪರಿವಿಡಿ

## ವಿಭಾಗ 1—ಭೂಗೋಲ

(ಮೈಸೂರು ರಾಜ್ಯ)



## ವಿಭಾಗ 2— ಜೀವನ ಚರಿತ್ರೆಗಳು



## ವಿಭಾಗ 3—ಮೈಸೂರು ರಾಜ್ಯದ ಆಡಳಿತ

# ನಕಾಶೆ-ಚಿತ್ರಗಳ ಸೂಚಿ

ಪುಟ



ಟೀಪು:— ಭೂಗೋಲದ ಈ ಚಿತ್ರಗಳಲ್ಲದೆ ಇತಿಹಾಸದಲ್ಲಿ ಎರಡನ್ನುಳಿದು ಉಳಿದೆಲ್ಲ ಚರಿತ್ರೆಗಳೂ ಸಚಿತ್ರವಾಗಿವೆ; ಆಡಳಿತದಲ್ಲಿ ಮೈಸೂರು ರಾಜ್ಯಪಾಲರ, ವಿಧಾನಸೌಧದ ಚಿತ್ರಗಳಿವೆ.

# ವಿಭಾಗ 1 — ಭೂಗೋಲ

. : : : : : ಶಿವು ಪುಟ್ಟೂನಿಗೆ ಬರೆದ ಪತ್ರ

‖ ಓಂ ‖

ವಿಜಯಪೂರ,
ರಾಮಪ್ರಸಾದ ಓಣಿ
ದಿ. 10-11-59

ಪ್ರೀತಿಯ ಪುಟ್ಟೂಗೆ,

ವಂದನೆಗಳು. ನೀನು ಬರೆದ ಪತ್ರ ಇದೇ ಕೈಸೇರಿತು. ನೀನು ಇಷ್ಟು ಬೇಗ ಪತ್ರ ಬರೆಯಬಹುದೆಂದು ನಾನು ನಿರೀಕ್ಷಿಸಿರಲಿಲ್ಲ. ನಾನು ಕೊಡೆ ಮರೆತು ಹೋಗಿರುವೆನೆಂದು ತಿಳಿಸಲು ಇಷ್ಟು ಅವಸರದಿಂದ ಪತ್ರ ಬರೆದೆಯಾ ?

ಪುಟ್ಟೂ, ನಿನಗೆ ಗೊತ್ತಿಲ್ಲವೇ ? ನಾವು ಬೆಳವಲ ನಾಡಿನವರು. ಹೋದಲ್ಲೆಲ್ಲ ನಾವು ಹೀಗೆಯೇ ಕೊಡೆ ಮರೆತು ಬರುವೆವು. ಏಕೆ ? ಹೇಳಲಿಯಾ ? ನಮಗೆ ಮಳೆರಾಯನ ಭೀತಿಯೇ ಇಲ್ಲ. ಯಾವಾಗಲೋ ನಮಗೆ ತಿಳಿಯದಂತೆ ಆತನು ಬಂದು ಹೋಗಿಬಿಡುವನು. ಒಮ್ಮೊಮ್ಮೆ ಯಂತೂ ಬಹಳೇ ಅಪರೂಪವಾಗಿ ಬರುವನು. ನಮಗೆ ಕೊಡೆಯ ಉಪ ಯೋಗವೇ ತೀರ ಕಡಿಮೆ. ಅಬ್ಬಾ ! ನಿಮ್ಮ ಮನೆಯಲ್ಲಿಯ ಆ ತಾಳದ ಗರಿಯ ಕೊಡೆ! ಎಂಥಾ ದಪ್ಪ ಅದು ! ನಮ್ಮ ತಂದೆಗೆ ಆ ಕೊಡೆಯ ಬಗ್ಗೆ ಹೇಳಿದೆ. 'ಶಿವೂ, ಇಂದು ನಾಳೆ ನಮಗೂ ಆ ಮಲೆನಾಡಿನ ಒಂದು ಊರಿಗೆ ವರ್ಗವಾಗಿ ಹೋಗಬೇಕಾದೀತು. ಆಗ್ಗೆ, ನೀನೂ ಅಂಥ ಕೊಡೆ ಯನ್ನೇ ಹಿಡಿಯಬೇಕಾದೀತು !' ಎಂದು ನಗೆಯಾಡಿದರು.

ಅದಿರಲಿ ಪುಟ್ಟೂ, ಮೊನ್ನೇ ದಿನ ನಮ್ಮ ಮನೆಯಲ್ಲಿ ಒಂದು ಸ್ವಾರಸ್ಯ ನಡೆಯಿತು. ನೋಡು ಅಂದು ನವೆಂಬರ 1 ನೆಯ ದಿನಾಂಕ. ನಮ್ಮ ತಂದೆ ತಮ್ಮ ಅನೇಕ ಗೆಳೆಯರನ್ನು ಬರಮಾಡಿಕೊಂಡಿದ್ದರು. ನಮ್ಮ ಒಳಮನೆ ನೋಡಿರುವೆಯಲ್ಲ ? ಅದು ಖಾಲಿಯಾಗಿತ್ತು. ಅಲ್ಲಿಗೆ ಕಾರವಾರದಿಂದ ಹೆಗಡೆ

ಯೆಂಬುವವರು ಬಂದಿದ್ದಾರೆ. ಪಕ್ಕದ ಮನೆಗೆ ಎಚ್. ರಾಚಯ್ಯ ಎನ್ನುವವರು ಕಲಬುರ್ಗಿಯಿಂದ ವರ್ಗವಾಗಿ ಇಲ್ಲಿಗೆ ಬಂದಿದ್ದಾರೆ. ಇಲ್ಲಿಯ ಪಾಟೀಲ ಎನ್ನುವ ಅಧಿಕಾರಿಗಳಿಗೆ 'ಮಡಿಕೇರಿ' ಎಂಬ ಊರಿಗೆ ವರ್ಗವಾಗಿದೆ. ಇವರೆಲ್ಲರೂ ಆ ದಿನ ನಮ್ಮ ಮನೆಗೆ ಬಂದಿದ್ದರು—ಇನ್ನೂ ಎಷ್ಟೋ ನಮ್ಮ ತಂದೆಯ ಗೆಳೆಯರೂ ಕೂಡ.

ತಿಂಡಿ ತಿನಿಸುಗಳು ಮುಗಿದವು. ಚಿಕ್ಕ ಮಕ್ಕಳಾದ ನಮಗೂ ಅದರಲ್ಲಿ 'ಹೊಟ್ಟೆತುಂಬ' ಪಾಲು ಸಿಕ್ಕಿತು. ಅದೇ ಹಿಗ್ಗು ನಮಗೆ. ಪುಟ್ಟೂ ಇರಬೇಕಾಗಿತ್ತು—ಎಂದು ನಿನ್ನನ್ನು ನೆನೆಸಿದೆ. ನಮ್ಮ ತಂದೆಯವರು ಮೇಜಿನ ಮೇಲೆ ಒಂದು ಚಿತ್ರವನ್ನು ಇಟ್ಟಿದ್ದರು. ಅದಕ್ಕೆ ಹೂಮಾಲೆ ಹಾಕಿದ್ದರು. ಊದಬತ್ತಿಯನ್ನು ಹಚ್ಚಿದ್ದರು. ಹೋಗುವಾಗ್ಗೆ ಅತಿಥಿಗಳು ಆ ಚಿತ್ರಕ್ಕೆ ಹೂ ಏರಿಸಿ, ವಂದಿಸಿ ಹೋದರು.

'ಇಂದಿನದು ಏನು ಸಮಾಚಾರ?' ಎಂದು ನಮ್ಮ ತಂದೆಯವರನ್ನು ನಾನು ಕೇಳಿಯೆಬಿಟ್ಟೆ. ಅವರು ಹೇಳಿದರು:—

'ಶಿವೂ, ಚೆನ್ನಾಯಿತು ನೀನೇ ಕೇಳಿದ್ದು. ನಾನೇ ಹೇಳಬೇಕೆಂದು ಮಾಡಿದ್ದೆ' ತಂದೆಯವರು ತುಸು ವಿವರ ವಿವರವಾಗಿಯೆ ಹೇಳಿದರು.

'ಪುಟ್ಟೂ, ನನ್ನ ಪತ್ರ ದೊಡ್ಡದಾಗಬಹುದು. ನಿನಗೆ ಬೇಜಾರು ಬರುವದಿಲ್ಲವಷ್ಟೆ! ತಾವು ಹೇಳಿದ ಮಾತು ನಿನಗೂ ನನಗೂ ಬಹಳೇ ಉಪಯುಕ್ತವಾದವುಗಳಂತೆ. ಈ ಪತ್ರದಲ್ಲಿ ಅವನ್ನೆಲ್ಲವೂ ಬರೆಯಲು ತಂದೆಯವರು ಹೇಳಿದರು:—

'ಶಿವೂ, ಇಂದು ನವ್ಹೆಂಬರ 1 ನೆಯ ದಿನಾಂಕ 1956 ರಿಂದ ಪ್ರತಿ ವರುಷವೂ ಈ ದಿನವನ್ನು ಒಂದು ಹಬ್ಬವಾಗಿ ನಾವು ಆಚರಿಸುವೆವು—ಒಂದೊಂದು ವರುಷ ಒಬ್ಬೊಬ್ಬರ ಮನೆಯಲ್ಲಿ. ಈ ವರುಷದ ಈ ಹಬ್ಬ ನಮ್ಮ ಮನೆಯಲ್ಲಿ ನಡೆಯಿತು. ಹಬ್ಬವೆಂದರೆ ಬರೀ ಹೋಳಿಗೆ ಊಟದ ದಿನವೆಂದು ತಿಳಿಯಬೇಡ. ನವ್ಹೆಂಬರ 1ನೆಯ ದಿನಾಂಕವು ನಮಗೆ ಬಹಳೇ ಸಂತೋಷದ ದಿನ. 1956 ರ ನವ್ಹೆಂಬರ 1ನೆಯ ದಿನಾಂಕದಲ್ಲಿ ನಮ್ಮ 'ನವಮೈಸೂರು ರಾಜ್ಯ' ದ ಉದಯವಾಯಿತು. ಇಂದು ನಮ್ಮ ಮನೆಗೆ ಅತಿಥಿಗಳು ಬಂದಿದ್ದರಲ್ಲ! ಅವರೆಲ್ಲ ನಮ್ಮಂತೆ ಕನ್ನಡಿಗರು. ಆದರೆ, ನವಮೈಸೂರು ರಾಜ್ಯದ ಉದಯವಾಗುವ ಮೊದಲು ಆಡಳಿತದ

ಬೇರೆ ಬೇರೆ 'ಪ್ರಾಂತ'ಗಳಿಗೆ ಅವರು ಸೇರಿದ್ದರು. ಇಂದು ನಾವೂ, ಅವ ರೆಲ್ಲರೂ ಒಂದೇ ಮೈಸೂರು ರಾಜ್ಯದ ಪ್ರಜೆಗಳಾಗಿರುವೆವು. ಶ್ರೀ. ಹೆಗಡೆ ಯವರು ಕಾರವಾರದಿಂದ ಬಂದಿರುವರು. ಅವರ ಜಿಲ್ಲೆಯಾದ ಕಾರವಾರ (ಉತ್ತರ ಕನ್ನಡ) ಮೊದಲು ಮುಂಬಯಿ ರಾಜ್ಯದ ಒಂದು ಜಿಲ್ಲೆ ಯಾಗಿತ್ತು. ಕಾರವಾರ, ಬೆಳಗಾಂವಿಯ ಬಹು ದೊಡ್ಡ ಭಾಗ, ಧಾರವಾಡ ಹಾಗೂ ನಮ್ಮ ಜಿಲ್ಲೆಯಾದ ವಿಜಾಪೂರ ಇಂದು ಮೈಸೂರ ರಾಜ್ಯಕ್ಕೆ ಸೇರಿವೆ. ಈ ನಾಲ್ಕು ಜಿಲ್ಲೆಗಳಿಗೆ 'ಮುಂಬಯಿ ಕರ್ನಾಟಕ'ದ ಜಿಲ್ಲೆ ಗಳೆಂದು ಹೇಳುವರು. ಶ್ರೀ. ರಾಚಯ್ಯನವರು ಕಲಬುರ್ಗಿಯಿಂದ ಬಂದಿ ದ್ದಾರೆ. ಅವರ ಜಿಲ್ಲೆಯಾದ ಕಲಬುರ್ಗಿ ಮೊದಲು ಹೈದರಾಬಾದ ರಾಜ್ಯಕ್ಕೆ ಸೇರಿತ್ತು. ಇಂದು ಕಲಬುರ್ಗಿ, ಬಿದರ ಹಾಗೂ ರಾಯಚೂರ ಜಿಲ್ಲೆ ಗಳು ಮೈಸೂರು ರಾಜ್ಯದ ಜಿಲ್ಲೆಗಳಾಗಿರುವವು. ನನ್ನ ಗೆಳೆಯರೊಬ್ಬರಿಗೆ ಮಡಿಕೇರಿಗೆ ವರ್ಗವಾಗಿದೆ. ಮಡಿಕೇರಿಯು ಕೊಡಗಿನ ಮುಖ್ಯ ಪಟ್ಟಣ. ಕೊಡಗು ಮೊದಲು ಒಂದು ಚಿಕ್ಕ ರಾಜ್ಯದಂತಿತ್ತು. ಇಂದು ಅದೂ ಮೈಸೂರಿನ ಒಂದು ಜಿಲ್ಲೆಯಾಗಿದೆ. ಇದಲ್ಲದೆ ಮದ್ರಾಸ ರಾಜ್ಯದ ಭಾಗ ಗಳಾಗಿದ್ದ ಆಲೂರು, ಆದವಾನಿ, ರಾಯದುರ್ಗ ತಾಲೂಕುಗಳನ್ನು ಬಿಟ್ಟು ಬಳ್ಳಾರಿ ಜಿಲ್ಲೆಯೂ, ಕಾಸರಗೋಡು ಎಂಬ ತಾಲೂಕನ್ನು ಬಿಟ್ಟು ದಕ್ಷಿಣ ಕನ್ನಡ ಜಿಲ್ಲೆಯೂ, ಕೊಯಮುತ್ತೂರ ಜಿಲ್ಲೆಯ ಕೊಳ್ಳೆಗಾಲ ತಾಲೂಕೂ ನಮ್ಮ ರಾಜ್ಯಕ್ಕೆ ಸೇರಿವೆ; ಹಳೆಯ ಮೈಸೂರು ರಾಜ್ಯವಂತೂ ಸರಿಯೆ...."

ತಂದೆ ಇನ್ನೂ ಏನೋ ಹೇಳುವವರಿದ್ದರು. ನಾನು ನಡುವೇ ಪ್ರಶ್ನೆ ಮಾಡಿದೆ, 'ಅಪ್ಪಾಜಿ, ನೀವು ಹೇಳಿದ ಈ ಭಾಗಗಳು ಅಲ್ಲೊಂದು ಇಲ್ಲೊಂದು ಏಕೆ ಹರಡಿದ್ದವು ? ಈಗೇಕೆ ಅವುಗಳನ್ನು ಒಟ್ಟುಗೂಡಿಸಿದರು?'

ತಂದೆ ತಮ್ಮ ಮಾತು ಮುಂದುವರಿಸಿದರು— 'ಶಿವೂ, ಒಳ್ಳೇ ಪ್ರಶ್ನೆ ಮಾಡಿದೆ. ನೀನು ಕೇಳಿದ ಸಂಗತಿಯು ನಿನಗೆ ತಿಳಿಯಬೇಕಾದ್ದೆ ಸರಿ. ಈ ಭಾಗಗಳೆಲ್ಲ ಬೇರೆ ಬೇರೆ ರಾಜ್ಯಗಳಿಗೆ ಸೇರಿದವುಗಳು. ಭಾರತವು ಸ್ವತಂತ್ರವಾಗುವ ಮೊದಲು ಬ್ರಿಟಿಷರು ಇಲ್ಲಿ ಆಳಿದರು. ದೇಶದ ಬೇರೆ ಬೇರೆ ಭಾಗಗಳು ಅವರ ಕೈವಶವಾಗುತ್ತ ಬಂದವು. ಆಡಳಿತದ ಅನು ಕೂಲತೆಗಾಗಿ ಸಮೀಪದ ಪ್ರಾಂತಗಳಿಗೆ ಅವುಗಳನ್ನು ಜೋಡಿಸಿ ಬಿಡು ತ್ತಿದ್ದರು. ಭಾಷೆ ನೋಡಲಿಲ್ಲ, ಇತಿಹಾಸದ ಕಡೆಗೆ ಗಮನ ಕೊಡಲಿಲ್ಲ. ಇದರಿಂದ ನಮ್ಮ ಕನ್ನಡ ನಾಡು ಬಹಳೇ ಹಾನಿಗೊಳಗಾಯಿತು. ಕನ್ನಡ

ವರ್ಗಕ್ಕೆ ಬಂದರು. ನಾಲ್ಕನೆಯ ವರ್ಗದ ಹೊಸ ಪುಸ್ತಕಗಳನ್ನೆಲ್ಲ ತಂದೆಯವರಿಂದ ಎಲ್ಲರೂ ತರಿಸಿಕೊಂಡರು. ನಮ್ಮ ಮೈಸೂರು ರಾಜ್ಯದ ಭೂಗೋಲ ಪುಸ್ತಕವೂ ಅವುಗಳಲ್ಲಿ ಒಂದಾಗಿತ್ತು. ಹೊಸ ಪುಸ್ತಕವೆಂದರೆ ಅವರಿಗೆ ಬಹಳೇ ಹುರುಪು, ಬಹಳೇ ಹೌಸು. ಕೈಗೆ ಬರುವುದೊಂದೇ ತಡ, ಪುಟಗಳನ್ನು ತಿರುವಿ ಹಾಕಿದರು. ಭೂಗೋಲ ಪುಸ್ತಕದಲ್ಲಿ ನಕ್ಷೆ ಚಿತ್ರಗಳು ಬಹಳ. ಅದು ಅವರ ಮನಸ್ಸನ್ನು ಹೆಚ್ಚಾಗಿ ಸೆಳೆಯಿತು.

ಹೊಸ ವರುಷದ ಪ್ರಾರಂಭದ ದಿನ. ವೇಳೆಗಿಂತ ತುಸು ಮುಂಚಿತವಾಗಿಯೇ ಶಿವು ಶಾಲೆಗೆ ಹೋದನು. ಹಿಂದಿನ ವರುಷದ ಮೂರನೆಯ ವರ್ಗದ ಕೋಣೆಯನ್ನು ಆತನು ಬಿಡಬೇಕಾಯಿತು. ಮೇಲಿನ ಇಯತ್ತೆಗೆ ಆತನು ಬಂದಿರುವನು. ಆ ವರ್ಗದ ಕೋಣೆಯೂ ಹೊಸದು. ವರ್ಗದ ಗುರುಗಳೂ ಹೊಸಬರು. ಹೊಸವರುಷದಲ್ಲಿ ಎಲ್ಲವೂ ಹೊಸತು, ಎನ್ನುವಂತಿತ್ತು. ಆದರೆ ಗೆಳೆಯರು ಮಾತ್ರ ಗೊತ್ತಿದ್ದವರು. ಶಿವು ಕೂಡಲೇ ಅವರಲ್ಲಿ ಬೆರೆತುಕೊಂಡು ಬಿಟ್ಟನು.

ನಿತ್ಯವೂ ನಡೆಯುವಂತೆ ಶಾಲೆಯ ಪ್ರಾರ್ಥನೆ ಸುರುವಾಯಿತು. ಮಕ್ಕಳೆಲ್ಲ ಸಾಲಾಗಿ ನಿಂತರು. ಗುರುಗಳೂ ಅವರನ್ನು ಕೂಡಿಕೊಂಡರು. 'ವಂದೇ ಮಾತರಂ' ಹಾಗೂ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಇವೆರಡು ಗೀತಗಳನ್ನು ಮಕ್ಕಳೆಲ್ಲ ಕೂಡಿಕೊಂಡು ಹೇಳಿದರು. ಪ್ರಾರ್ಥನೆ ಮುಗಿಯಿತು. ಮಕ್ಕಳೆಲ್ಲ ತಮ್ಮ ವರ್ಗಗಳಿಗೆ ಶಿಸ್ತಿನಿಂದ ತೆರಳಿದರು. ಶಿಕ್ಷಕರೂ ಅವರನ್ನು ಹಿಂಬಾಲಿಸಿದರು.

ಶಿವು ತನ್ನ ವರ್ಗಕ್ಕೆ ಬಂದನು. ಆತನ ವರ್ಗದ ಶಿಕ್ಷಕರು ಅಂದಿನ ಪಾಠವನ್ನು ಭೂಗೋಲ ವಿಷಯದಿಂದಲೇ ಪ್ರಾರಂಭಿಸಿದರು. ಅವರು ಮೊದಲು ಭಾರತದ ಹೊಸ ರಾಜಕೀಯ ಭೂಪಟವನ್ನು ವರ್ಗದ ಎದುರು ತೂಗು ಹಾಕಿದರು.

'ಮಕ್ಕಳೇ, ಇದು ಭಾರತದ ಭೂಪಟ (ನಕಾಶ). ಬೇರೆ ಬೇರೆ ಬಣ್ಣಗಳಿಂದ ಇದರಲ್ಲಿ ವಿಭಾಗಗಳನ್ನು ತೋರಿಸಿರುವರು. ಇವುಗಳಲ್ಲಿ ದೊಡ್ಡ ಭಾಗಗಳು ಎಷ್ಟಿವೆ ? ಎಣಿಸಿ ಹೇಳಿರಿ.'

'ಹದಿನಾಲ್ಕು.'

'ಸರಿಯಾಗಿ ಹೇಳಿದಿರಿ. ಈ ಹದಿನಾಲ್ಕು ದೊಡ್ಡ ವಿಭಾಗಗಳಿಗೆ 'ರಾಜ್ಯಗಳೆನ್ನುವರು. ಇವುಗಳಲ್ಲದೆ ಇನ್ನೂ ಆರು ವಿಭಾಗಗಳಿವೆ. ಪೂರ್ವದ

ತುದಿಯಂಚಿನಲ್ಲಿ ನೋಡಿರಿ. ಅಲ್ಲಿ ಎರಡು ಚಿಕ್ಕ ವಿಭಾಗಗಳನ್ನು ತೋರಿಸಿರುವರು. ನೋಡಿ ಹೇಳಿರಿ. ಅವು ಯಾವವು?

'ಮಣಿಪೂರ, ತ್ರಿಪುರಾ'.

'ಸರಿಯಾಗಿ ಹೇಳಿದಿರಿ. ಉತ್ತರದ ತುದಿಯಲ್ಲಿ ಇನ್ನೊಂದು ಚಿಕ್ಕ ವಿಭಾಗವನ್ನು ತೋರಿಸಿದೆ. ಅದು ಯಾವುದು?

'ಹಿಮಾಚಲ ಪ್ರದೇಶ'.

ನಿಜ. ನಮ್ಮ ದೇಶದ ಪೂರ್ವ-ಪಶ್ಚಿಮಗಳಲ್ಲಿ ಕೆಲವು ನಡುಗಡ್ಡೆಗಳನ್ನು ತೋರಿಸಿರುವರು. ಅವುಗಳ ಹೆಸರು ಓದಿ ಹೇಳಿರಿ.

ಪಶ್ಚಿಮದಲ್ಲಿ ಲಕದೀವ, ಮಿನಿಕಾಯ ನಡುಗಡ್ಡೆಗಳು. ಪೂರ್ವದಲ್ಲಿ ಅಂದಮಾನ, ನೀಕೊಬಾರ ನಡುಗಡ್ಡೆಗಳು.

‘ ನಿಜ. ಇವು ಐದು ಚಿಕ್ಕ ರಾಜ್ಯಗಳು. ಭಾರತದ ರಾಜಧಾನಿ ನಿಮಗೆ ಗೊತ್ತಿದೆಯಲ್ಲವೆ? ’

‘ ದಿಲ್ಲಿ’.

‘ ಹೌದು. ಸುತ್ತಲಿನ ತುಸು ಪ್ರದೇಶದೊಡನೆ ಕೂಡಿಕೊಂಡು ದಿಲ್ಲಿಯೂ ಒಂದು ಚಿಕ್ಕ ರಾಜ್ಯವಾಗಿದೆ. ಹಾಗಾದರೆ ಒಟ್ಟು ಚಿಕ್ಕರಾಜ್ಯಗಳೆಷ್ಟು ?

‘ಆರು’.

‘ ದೊಡ್ಡ ರಾಜ್ಯಗಳೆಷ್ಟು ? ’

‘ ಹದಿನಾಲ್ಕು’.*

‘ ಭಾರತದ ಈ ಹದಿನಾಲ್ಕು ದೊಡ್ಡ ರಾಜ್ಯಗಳಲ್ಲಿ ನಮ್ಮ ಮೈಸೂರು ರಾಜ್ಯವೂ ಒಂದು. ವಿಶಾಲವಾದ ಭಾರತದಲ್ಲಿ ನಮ್ಮ ಮೈಸೂರು ರಾಜ್ಯವೂ ಒಂದು ವಿಭಾಗ. ಅಂತೆಯೇ ಪ್ರಾರ್ಥನೆಯಲ್ಲಿ ನಾವು ಮೊದಲು ‘ ವಂದೇ ಮಾತರಂ’ ಎಂದು ಭಾರತ ಮಾತೆಯನ್ನು ವಂದಿಸುವೆವು. ಭಾರತ ಮಾತೆಯು ‘ ಸುಜಲಾಂ’ ಆಗಿರುವಳು. ಅನೇಕ ನದಿಗಳು ನಮ್ಮ ದೇಶದಲ್ಲಿ ಹರಿಯುವವು. ನದಿಗಳಿಗೆ ನಾವು ನಮ್ಮ ಮಾತೆಯೆಂದು ಹೇಳುವೆವು. ಗಂಗಾನದಿಯು ನಮಗೆ ಪೂಜ್ಯ ‘ ಗಂಗಾಮಾಯಿ’ಯಾಗಿರುವಳು. ತಾಯಿಯಂತೆ ನದಿಗಳು ನಮಗೆ ಅನ್ನ ನೀರುಗಳನ್ನು ಪೂರೈಸುವವು. ಭಾರತವು ‘ಸುಜಲಾಂ’ ‘ಸಸ್ಯಶಾಮಲಾಂ’ ಆಗಿದೆ. ಭಾರತದಲ್ಲಿ ಭತ್ತ, ಗೋದಿ, ಹತ್ತಿ ಮುಂತಾದ ಅನೇಕ ಪೈರುಗಳು ಬೆಳೆಯುವವು. ಅಡವಿಗಳು ಉಪಯುಕ್ತವಾದ ಗಿಡಗಳಿಂದ ತುಂಬಿರುವವು. ಮೇಲಿನ ವರ್ಗಗಳಲ್ಲಿ ಭಾರತದ ಬಗ್ಗೆ ಎಲ್ಲ ವಿವರಗಳನ್ನು ನೀವು ತಿಳಿದುಕೊಳ್ಳುವಿರಂತೆ.

‘ ಅದಿರಲಿ, ‘ಉದಯವಾಗಲಿ, ಚೆಲುವ ಕನ್ನಡ ನಾಡು’ ಎಂದು ಹೇಳುವೆವಲ್ಲವೆ? ಆ ‘ಚೆಲುವ ಕನ್ನಡ ನಾಡು’ ಯಾವುದು ?’

‘ನಮ ಮೈಸೂರು ರಾಜ್ಯ’

ಸರಿಯಾಗಿ ಹೇಳಿದಿರಿ. ಕವಿಯು ಬಯಸಿದನು. ನಮ್ಮ ನಾಡಿನ ಹಿರಿಯರು ಅದಕ್ಕಾಗಿ ದುಡಿದರು. ಕನ್ನಡದ ಬಹುಭಾಗಗಳನ್ನೆಲ್ಲ ಕೂಡಿಸಿ

* ಕಳೆದ 1–5–1960 ರಿಂದ ಮುಂಬಯಿ ರಾಜ್ಯವು ಅಸ್ತವಾಗಿ ಮಹಾರಾಷ್ಟ್ರ ಹಾಗು ಗುಜರಾಥ ಎಂಬೆರಡು ರಾಜ್ಯಗಳುದಯವಾದುದರಿಂದ ಈಗ ದೊಡ್ಡ ರಾಜ್ಯಗಳು 15 ಆಗಿವೆ.

ಕೊಂಡು ಹೊಸ ಮೈಸೂರು ರಾಜ್ಯದ ಉದಯವಾಯಿತು.

ನವಮೈಸೂರು ರಾಜ್ಯದಲ್ಲಿ ಸೃಷ್ಟಿ[illegible] ಸೊಬಗು ಕಣ್ಣಿಗೆ ಹಬ್ಬವಾಗಿದೆ.




ಇದೋ, ಇದು ನಮ್ಮ ನವ ಮೈಸೂರು ರಾಜ್ಯದ ಭೂಪಟ. ಈ ರಾಜ್ಯದ

ಸ್ಥಾನಮಾನಗಳನ್ನು ನೀವು ಗುರುತಿಸಬೇಕು. ಭೂರಚನೆಯನ್ನು ನಿರೀಕ್ಷಿಸ ಬೇಕು. ಅಂದ ಕೇಂದಗಳನ್ನು ನೋಡಿ ಆನಂದಪಡಬೇಕು.

'ಚೆಲುವು' ಮಾತ್ರವಲ್ಲ. ನಮ್ಮ ಕನ್ನಡ ನಾಡು 'ಬದುಕುಬಲುಹಿನ ಬೀಡು' ಆಗಿದೆ. ನಮ್ಮ ಮೈಸೂರು ರಾಜ್ಯವು ನಿಸರ್ಗದ ಪೂರ್ಣ ಕೃಪೆಯನ್ನು ಪಡೆದಿರುವದು. ಈ ರಾಜ್ಯದಲ್ಲಿ ಒಳ್ಳೇ ಫಲವತ್ತಾದ ಭೂಸಂಪತ್ತಿದೆ. ಪೂರ್ವ—ಪಶ್ಚಿಮಗಳೆರಡೂ ದಿಕ್ಕಿನಲ್ಲಿ ಹರಿಯುವ ನದೀ ಸಂಪತ್ತಿದೆ. ಹಳವುಗಳಲ್ಲಿ ಅರಣ್ಯ ಸಂಪತ್ತಿದೆ. ಬೆಟ್ಟಗಳಲ್ಲಿ ಭೂಮಿಯ ಒಡಲಿನಲ್ಲಿ ಖನಿಜ ಸಂಪತ್ತಿದೆ. ಸಮಗ್ರ ಭಾರತದಲ್ಲಿ ಮೈಸೂರು ಒಂದೇ 'ಚಿನ್ನದ ನಾಡು'. ನಿಸರ್ಗದ ಈ ಸಂಗತಿಗಳು ಈ ನಾಡಿನ ಬದುಕಿಗೆ ಕಾರಣ ವಾಗಿವೆ, ಇವುಗಳ ನೆರವಿನಿಂದ ಇಲ್ಲಿಯ ಜನಜೀವನ ಹೇಗೆ ಸಾಗಿದೆ ಎಂಬುದನ್ನು ನೀವು ತಿಳಿಯಬೇಕು.

ಈ ವರುಷದ 'ನವಮೈಸೂರು ರಾಜ್ಯ'ದ ಭೂಗೋಲ ಪುಸ್ತಕವು ನಿಮಗೆ ಇವೆಲ್ಲವನ್ನೂ ತಿಳಿಸಿಕೊಡುವದು. ಭೂಗೋಲ ವಿಷಯವು ಜಾದು ವಿನ ಒಂದು ಗಾಡಿಯಿದ್ದಂತೆ. ಏನೂ ವೆಚ್ಚವಿಲ್ಲದೆ, ಏನೂ ಆಯಾಸವಿಲ್ಲದೆ ನಿಮ್ಮನ್ನು ಈ ಪ್ರದೇಶವಲ್ಲಿ ಅದು ಸುತ್ತಾಡಿಸಿಕೊಂಡು ಬರುವದು.

ಗಂಟೆಯಾಯಿತು. ಗುರುಗಳ ಮಾತು ಮಕ್ಕಳ ಮನಸ್ಸಿನಲ್ಲಿ ನಾಟಿತು. ತಮ್ಮ ಮೈಸೂರು ರಾಜ್ಯದ ಬಗ್ಗೆ ಎಲ್ಲವನ್ನೂ ತಿಳಿದುಕೊಳ್ಳಬೇಕೆನ್ನುವ ಲವ ಲವಿಕೆಯು ಅವರಲ್ಲಿ ಉಂಟಾಯಿತು.

## 3. : : : : : : : : : ಸ್ಥಾನ—ಸೀಮೆಗಳು

ಭಾರತದ ಹದಿನಾಲ್ಕು (ಈಗ 15 ) ಮುಖ್ಯ ರಾಜ್ಯಗಳಲ್ಲಿ ನಮ್ಮ ನವ ಮೈಸೂರು ರಾಜ್ಯವೂ ಒಂದಾಗಿದೆ. ಈ ಮಾತು ಈಗಾಗಲೇ ನಿಮಗೆ ಗೊತ್ತಾ ಗಿದೆ. ಭಾರತದ ನಕಾಶದಲ್ಲಿ ಮೈಸೂರು ರಾಜ್ಯವು ಯಾವ ಭಾಗದಲ್ಲಿ ನೆಲ ಸಿದೆ ? ದಕ್ಷಿಣ ಭಾರತದಲ್ಲಿ ಎಂಬುದು ನಕಾಶದ ಮೇಲಿಂದ ನಿಮಗೆ ತಿಳಿ ಯುವದು. ದಕ್ಷಿಣ ಭಾರತದ ದೊಡ್ಡ ರಾಜ್ಯಗಳಲ್ಲಿ ನಮ್ಮ ರಾಜ್ಯವೂ ಒಂದಾಗಿದೆ. ದಕ್ಷಿಣ ಭಾರತದ ಯಾವ ಅಂಚಿಗೆ ಈ ರಾಜ್ಯವು ಹೊಂದಿ ಕೊಂಡಿದೆ? ಪಶ್ಚಿಮದ ಅಂಚಿಗೆ, ಅಲ್ಲವೆ ? ಪಶ್ಚಿಮ ಅಂಚಿನ 200 ಮೈಲು ಗಳಷ್ಟು ಕರಾವಳಿಯು ( ಸಮುದ್ರ ದಂಡೆಯು ) ನಮ್ಮ ರಾಜ್ಯದ

ಸೀಮೆಯಾಗಿದೆ.

ನಮ್ಮ ರಾಜ್ಯದ ಆಕಾರ ಹೇಗಿದೆ? ನಮ್ಮ ಶರೀರದ ಯಾವ ಭಾಗವನ್ನು ಅದು ಹೋಲುವುದು? ಹೇಳಿರಿ ನೋಡುವಾ. ನಮ್ಮ ರಾಜ್ಯದ ಆಕಾರ 'ಹೃದಯ' ದಂತಿರುವದು. ನಮ್ಮ ಶರೀರದಲ್ಲಿ ಹೃದಯವೆ ಮುಖ್ಯ ವಾದುದು. ನಮಗೂ ನಮ್ಮ ರಾಜ್ಯವೇ ಹೃದಯದಂತಿದೆ. ಹೃದಯದಷ್ಟೇ ಅದೂ ನಮಗೆ ಮಹತ್ವವಾದುದು. ನಾವು ಜೀವಿಸುವದು ಹೃದಯದ ಸುಸ್ಥಿತಿ ಯನ್ನೇ ಅವಲಂಬಿಸಿರುವದು. ಇದೇ ಮೇರೆಗೆ, ನಮ್ಮ ಜೀವನವು ರಾಜ್ಯದ ಸುಸ್ಥಿತಿಯನ್ನೇ ಅವಲಂಬಿಸಿರುವದು.

ನಮ್ಮ ಚಿಕ್ಕ ಮನೆಯ ಸುತ್ತು ಮುತ್ತು ಇರುವವರು ನಮ್ಮ 'ನೆರೆ ಹೊರೆ' ಯವರು. ಆಚೆಯ ಮನೆ ಯಾರದು? ಈಚೆಯ ಮನೆಯಲ್ಲಿ ಯಾರು ಇರುವರು? ಮುಂದಿನ ಬೀದಿ ಯಾವುದು? ಹಿಂದಿನ ಓಣಿ ಯಾರ ಮನೆಗೆ ಹೊಂದಿದೆ? ಹೀಗೆ ನಮ್ಮ ಮನೆಯ ಸುತ್ತಲಿನ ಸ್ಥಳಗಳನ್ನು ನಾವು ಗೊತ್ತು ಮಾಡಿಕೊಳ್ಳುವೆವು. ನಮ್ಮ ರಾಜ್ಯವು ನಾವೆಲ್ಲರೂ ವಾಸಿಸುವ ದೊಡ್ಡ ಮನೆ. ನಮ್ಮ ದೊಡ್ಡ ಮನೆಯಂತಿರುವ ನಮ್ಮ ರಾಜ್ಯದ ಸುತ್ತುಮುತ್ತು ಯಾವ ಪ್ರದೇಶಗಳಿವೆ? ದಕ್ಷಿಣ ಉತ್ತರ ದಿಕ್ಕುಗಳಲ್ಲಿ ಯಾವ ರಾಜ್ಯಗಳು ಹೊಂದಿ ಕೊಂಡಿವೆ? ಪೂರ್ವ—ಪಶ್ಚಿಮಗಳಲ್ಲಿ ಏನಿವೆ? ಇವುಗಳನ್ನೂ ನಾವು ತಿಳಿದುಕೊಳ್ಳಬೇಕು. ಇವುಗಳಿಗೆ ರಾಜ್ಯದ ಮೇರೆಗಳೆನ್ನುವರು. ಇಲ್ಲವೆ ಸೀಮೆಗಳೆನ್ನುವರು.

ಭಾರತದ ರಾಜಕೀಯ ವಿಭಾಗಗಳ ನಕಾಶವನ್ನು ನಿರೀಕ್ಷಿಸಿರಿ. ನಮ್ಮ ರಾಜ್ಯದ ಉತ್ತರಕ್ಕೆ ಮುಂಬಯಿ ರಾಜ್ಯ*ವಿದೆ. ಇಂದು ನಮ್ಮ ರಾಜ್ಯದ ಭಾಗಗಳಾದ ಬೆಳಗಾವಿ (ಬಹುಭಾಗ), ಧಾರವಾಡ, ಕಾರವಾರ, ವಿಜಾ ಪೂರ, ಜಿಲ್ಲೆಗಳು ಹಿಂದೆ ಇದೇ ಮುಂಬಯಿ ರಾಜ್ಯದ ಜಿಲ್ಲೆಗಳಾಗಿದ್ದವು. ದಕ್ಷಿಣಕ್ಕೆ ಮದ್ರಾಸ ರಾಜ್ಯವಿದೆ. ಮೊದಲು ಮದ್ರಾಸ ರಾಜ್ಯದಲ್ಲಿದ್ದ ಕೆಲವು ಭಾಗಗಳೂ ನಮ್ಮ ರಾಜ್ಯದಲ್ಲಿ ಸೇರಿಕೊಂಡಿವೆ. ಪೂರ್ವಕ್ಕೆ ಆಂಧ್ರ ಪ್ರದೇಶವಿದೆ. ಹಿಂದಿನ ಹೈದರಾಬಾದ ರಾಜ್ಯವನ್ನು ಒಡೆದು ತೆಲುಗು ಜಿಲ್ಲೆಗಳನ್ನು ನಮ್ಮ ನೆರೆಯ ಆಂಧ್ರ ಪ್ರದೇಶಕ್ಕೆ ಸೇರಿಸಿದರು. ಮರಾಠಿ ಭಾಗಗಳು ಮುಂಬಯಿ ರಾಜ್ಯದ ಪಾಲಿಗೆ ಹೋದವು. ಕನ್ನಡ ಜಿಲ್ಲೆಗಳು

* 'ಈಗ ಮಹಾರಾಷ್ಟ್ರ ರಾಜ್ಯ' ವೆಂದು ಹೇಳಬೇಕು.

ನಮ್ಮ ಮೈಸೂರು ರಾಜ್ಯದಲ್ಲಿ ಒಂದುಗೂಡಿದವು. ನಮ್ಮ ರಾಜ್ಯದ ಪಶ್ಚಿಮಕ್ಕೆ ಅರಬೀ ಸಮುದ್ರವಿದೆ. ನಿಸರ್ಗವೆ ಈ ಸೀಮೆಯನ್ನು ರಚಿಸಿದೆ. ಪಶ್ಚಿಮ ಸೀಮೆಯ ಮೇಲ್ಭಾಗದಲ್ಲಿ ಗೋವೆ ಹಾಗೂ ಕೆಳಭಾಗದಲ್ಲಿ ಕೇರಳ ರಾಜ್ಯವು ಹೊಂದಿಕೊಂಡಿವೆ.

ನಮ್ಮ ಮಾತು ಕನ್ನಡ. ನಮ್ಮ ರಾಜ್ಯದ ಮುಖ್ಯ ಭಾಷೆ ಕನ್ನಡ. ಆದರೆ ನಮ್ಮ ನೆರೆಹೊರೆಯವರಲ್ಲಿ ಕೆಲವರು ಮರಾಠೀ ಭಾಷೆಯನ್ನಾಡುವವರು, ಕೆಲವರು ತೆಲುಗು, ಕೆಲವರು ತಮಿಳು, ಮತ್ತೆ ಕೆಲವರು ಮಲೆಯಾಳೀ ಭಾಷೆಯನ್ನಾಡುವವರು. ಇವರೆಲ್ಲ ನಮಗೆ ನೆರೆಹೊರೆಯವರು. ಗಡಿನಾಡುಗಳಲ್ಲಿ




ಇವೆಲ್ಲ ಭಾಷೆಯನ್ನಾಡುವ ಕೆಲವು ಜನರು ನಮ್ಮ ರಾಜ್ಯದಲ್ಲಿ ನೆಲೆಸಿರುವರು. ದಕ್ಷಿಣ ಭಾರತದಲ್ಲಿ ನಮ್ಮ ರಾಜ್ಯದ ಸ್ಥಾನವೂ ಆಯಕಟ್ಟಿನದಾಗಿದೆ. ಭಾರತದ ಕೆಲವು ಮುಖ್ಯವಾದ ಹೆದ್ದಾರಿಗಳು ನಮ್ಮ ರಾಜ್ಯದಲ್ಲಿ ಹಾದು ಹೋಗಿವೆ. ರಾಜಧಾನಿಯಾದ ಬೆಂಗಳೂರು, ಮುಂಬೈ, ಮದ್ರಾಸು, ಕೋಚಿನಗಳೊಡನೆ ವಿಮಾನ ಮಾರ್ಗದ ಸಂಪರ್ಕವನ್ನಿಟ್ಟುಕೊಂಡಿದೆ. ನಮ್ಮ ಕರಾವಳಿಯು ದಕ್ಷಿಣ ಭಾರತದ ಕರಾವಳಿಯಲ್ಲಿ ನಟ್ಟನಡುವಿನ ಸ್ಥಾನವನ್ನು ವ್ಯಾಪಿಸಿದೆ. ಇಲ್ಲಿ ಸ್ಥಾಪಿತವಾಗಲಿರುವ ಮಂಗಳೂರು ಬಂದರವು ವಿದೇಶಗಳ ಕೂಡ ವ್ಯಾಪಾರಕ್ಕೆ ಪಡಿಮೂಲೆಯಾಗಲಿದೆ.

ನಮ್ಮ ರ್ಯಾಜದ ದಕ್ಷಿಣೋತ್ತರವಾದ ಉದ್ದಳತೆ ಸುಮಾರು 450 ಮೈಲುಗಳು; ಪೂರ್ವಪಶ್ಚಿಮಗಳ ಅಗಲಳತೆ ಸರಾಸರಿ 280 ಮೈಲುಗಳು. ರಾಜ್ಯದ ಒಟ್ಟು ವಿಸ್ತಾರಕ್ಕೆ ಕ್ಷೇತ್ರಫಲವೆನ್ನುವರು. ನಮ್ಮ ರಾಜ್ಯದ ಕ್ಷೇತ್ರಫಲವು ಸುಮಾರು 74,860 ಚದರು ಮೈಲುಗಳಷ್ಟಿರುವದು. ಕ್ಷೇತ್ರಫಲ ಮಾನದಿಂದ, ವಿಜಾಪೂರ ಜಿಲ್ಲೆಯೆ ಈ ರಾಜ್ಯದಲ್ಲಿ ಎಲ್ಲಕ್ಕೂ ದೊಡ್ಡದು.

ರಾಜ್ಯದ ಒಟ್ಟು ಕ್ಷೇತ್ರಫಲವು ವಿಜಾಪೂರ ಜಿಲ್ಲೆಯ 12 ಪಟ್ಟಾಗಬಹುದು, ಧಾರವಾಡ ಜಿಲ್ಲೆಯ 14 ಪಟ್ಟಾಗಬಹುದು. ಮೈಸೂರು ರಾಜ್ಯದಲ್ಲಿ ಕೊಡಗು ಕ್ಷೇತ್ರಫಲದಲ್ಲಿ ತೀರ ಚಿಕ್ಕದು. ಸಮಗ್ರ ಭಾರತದ ಕ್ಷೇತ್ರಫಲವನ್ನು ತೆಗೆದುಕೊಂಡರೆ, ಮೈಸೂರು ರಾಜ್ಯದ ಕ್ಷೇತ್ರಫಲವು ನೂರಕ್ಕೆ 6 ರಷ್ಟು ಆಗುವದು.

### ಅಭ್ಯಸನಗಳು

1. ಭಾರತದಲ್ಲಿ ಮುಖ್ಯ ರಾಜ್ಯಗಳೆಷ್ಟು ? ಚಿಕ್ಕ ರಾಜ್ಯಗಳೆಷ್ಟು ?
2. "ನಮ್ಮ ರಾಜ್ಯ ನಮ್ಮ ಹೃದಯದಂತೆ" ಏಕೆ ?
3. ಭಾರತದಲ್ಲಿ ನಮ್ಮ ಮೈಸೂರು ರಾಜ್ಯ ಎಲ್ಲಿ ನೆಲಸಿದೆ ?
4. ಮೈಸೂರು ರಾಜ್ಯದ ಒಂದು ಸ್ವಾಭಾವಿಕ ಮೇರೆಯು ಯಾವುದು ?

## 4 : : : : : ಪ್ರಾಕೃತಿಕ ಸ್ವರೂಪ

ಭಾರತದ ಭೂಪಟ (ನಕಾಶ)ದಲ್ಲಿ ನಮ್ಮ ರಾಜ್ಯದ ಸ್ಥಾನವನ್ನು ನೀವು ಗುರುತಿಸಿರುವಿರಿ. ನಮ್ಮ ರಾಜ್ಯದ ಸೀಮೆಗಳು ಭಾರತದ ಯಾವ ಭಾಗಗಳಿಗೆ ಹೊಂದಿಕೊಂಡಿವೆಯೆಂಬುದನ್ನೂ ನೀವು ನೋಡಿರುವಿರಿ. ಇನ್ನು ನಮ್ಮ ರಾಜ್ಯದ ಒಳಗೆ ಪ್ರವೇಶಿಸಿ ಎಲ್ಲ ವಿವರಗಳನ್ನೂ ತಿಳಿದುಕೊಳ್ಳೋಣ.

ನೀವು ಒಂದು ವಿಶಾಲವಾದ ಬಯಲಿನಲ್ಲಿ ನಿಂತು ನೋಡಿರಿ. ಭೂಮಿಯು ಒಂದೇ ಸಮನಾಗಿ ಕಾಣುವುದಿಲ್ಲ. ಅಲ್ಲಿ ಏರು, ಇಲ್ಲಿ ಇಳಿತ, ಹೀಗೆ ಏರಿಳಿತಗಳಿಂದ ಕೂಡಿರುವದು. ಮಲೆನಾಡು ಎನ್ನುವಲ್ಲಿ ಗಿರಿಕಂದರಗಳ ಸಾಲೇ ಪಸರಿಸಿರುವದು. ವಿಶಾಲವಾದ ಬಯಲುಗಳಲ್ಲಿ ಕಣ್ಣು ಹರಿಯುವವರೆಗೆ ಸಮ ಭೂಮಿಯು ಕಾಣುವದು. ನಮ್ಮ ಭೂಮಿಯ ಮೇಲ್ಭಾಗವೆಲ್ಲ ಹೀಗೆಯೇ ಏರಿಳಿತಗಳಿಂದ ತುಂಬಿದೆ. ಪೃಥ್ವಿಯ ಮೇಲ್ಮೈಗೆ 'ಪೃಥ್ವಿಯ ಕವಚ'ವೆನ್ನುವರು. ಪೃಥ್ವಿಯ ಕವಚವು ಸ್ಥಿರವಾಗಿರುವದಿಲ್ಲ. ಬೆಟ್ಟವು ಸಮುದ್ರದ ತಳಕ್ಕೆ ಇಳಿಯಬಹುದು. ಸಮುದ್ರದ ತಳವು ಬೆಟ್ಟವಾಗಿ ಎದ್ದು ನಿಲ್ಲಬಹುದು. ನೀವು ಒಮ್ಮೆಗೆಲೆ ನಂಬಲಿಕ್ಕಿಲ್ಲ. ಆದರೆ ಶಾಸ್ತ್ರಜ್ಞರು ಆಧಾರಗಳನ್ನು ಕೊಟ್ಟು ಹೇಳುತ್ತಾರೆ—ಜಗತ್ತಿನಲ್ಲಿಯ ಇಂದು ಅತಿ ಉನ್ನತವಾದ ಹಿಮಾಲಯ ಪರ್ವತವು ಒಂದು ಕಾಲಕ್ಕೆ ಸಮುದ್ರದ

ತಳವಾಗಿತ್ತಂತೆ. ಹೀಗೆ ಆಗಲು ಕಾರಣವೇನು ?--ಎನ್ನುವ ಹೆಚ್ಚಿನ ಜ್ಞಾನ ವನ್ನು ಮೇಲಿನ ವರ್ಗಗಳಲ್ಲಿ ನೀವು ಮಾಡಿಕೊಳ್ಳುವಿರಿ. ಭೂಭಾಗದ ಈ ಏರಿಳಿತಗಳಿಗೆ ಪ್ರಕೃತಿ ಮಾತೆಯ ಶಕ್ತಿಗಳೆ ಕಾರಣಗಳು. ಅದಕ್ಕಾಗಿ ಇವು ಗಳನ್ನು ಒಟ್ಟಾರೆ ಭೂಮಿಯ 'ಪ್ರಾಕೃತಿಕ ಸ್ವರೂಪ'ವೆಂದು ಹೇಳುವರು.

ನಮ್ಮ ರಾಜ್ಯದ ಪ್ರದೇಶದಲ್ಲಿ ಏರಿಳಿತಗಳು ಎಲ್ಲಿವೆ ? ಬೆಟ್ಟಬಯಲುಗಳು ಯಾವು ? ಸಾಮಾನ್ಯವಾಗಿ ನಮ್ಮ ರಾಜ್ಯದ ಭೂರಚನೆ ಹೇಗಿದೆ ? ಅಥವಾ ಅದರ 'ಪ್ರಾಕೃತಿಕ ಸ್ವರೂಪ' ಎಂತಹದು ? ಎಂಬದನ್ನು ನೀವು ತಿಳಿದು ಕೊಳ್ಳಬೇಕು.

ಮೈಸೂರು ರಾಜ್ಯದ ಪ್ರಾಕೃತಿಕ ಸ್ವರೂಪ (ಭೂರಚನೆ)ದಲ್ಲಿ, ಮುಖ್ಯ ವಾಗಿ ಮೂರು ಪ್ರಕಾರಗಳನ್ನು ನೀವು ಕಾಣಬಹುದು:- (1) **ಕರಾವಳಿಯ** (ಸಮುದ್ರದಂಡೆಯ) ಬಯಲು; (2) **ಮಲೆನಾಡು** (ಘಟ್ಟದ ಪ್ರದೇಶ) (3) **ಪೂರ್ವದ ತಪ್ಪಲು** (ಎತ್ತರ) ಪ್ರದೇಶ.

ಇವುಗಳಲ್ಲಿ ಕರಾವಳಿಯ ಬಯಲನ್ನೆ ಮೊದಲು ತೆಗೆದುಕೊಳ್ಳಿರಿ. ಸಮುದ್ರ ದಂಡೆಯಿಂದ ಪೂರ್ವದ ಕೊನೆಯಂಚಿನ ವರೆಗೂ ನಾವು ಮುಂದೆ ಸಾಗೋಣ. ಹಿಂದೆ ಹೇಳಿದುದು ನಿಮಗೆ ನೆನಪಿದೆಯಷ್ಟೆ ? ಮೈಸೂರು ರಾಜ್ಯಕ್ಕೆ 200 ಮೈಲುಗಳಷ್ಟು ಕರಾವಳಿಯ ಪ್ರದೇಶವಿದೆ. ಒಳ್ಳೇ ಆಯ ಕಟ್ಟಿನ ದಾಗಿದೆ. ನಮ್ಮ ರಾಜ್ಯದ ಕರಾವಳಿಯ ಭಾಗವು ಕಾರವಾರದ ನೆರೆಯಲ್ಲಿರುವ ಸದಾಶಿವಗಡದಿಂದ ಪ್ರಾರಂಭಿಸುವದು; ಮುಂದೆ ದಕ್ಷಿಣಕ್ಕೆ ಉಲ್ಲಾಳದ ವರೆಗೆ ಹಬ್ಬಿರುವದು. ಇದರ ಉದ್ದಳತೆ 200 ಮೈಲುಗಳು. ಆದರೆ, ಅಗಲಳತೆ ಮಾತ್ರ ಒಂದೇ ಸಮನಾಗಿರುವದಿಲ್ಲ. ಉತ್ತರದ ಭಾಗದಲ್ಲಿ ಅದು ಬಹಳೇ ಕಿರಿಯದಾಗಿದೆ. ಸುಮಾರು 8 ರಿಂದ 20 ಮೈಲುಗಳಷ್ಟು ಅದು ಅಗಲವಾಗಿದೆ. ಉತ್ತರ ಕನ್ನಡ ಜಿಲ್ಲೆ ಸುಮಾರು 20 ಮೈಲುಗಳಷ್ಟು ಅಗಲವಾಗಿದೆ. ದಕ್ಷಿಣಕ್ಕೆ ಈ ಬಯಲು ಬಹು ವಿಶಾಲವಾಗುತ್ತ ಹೋಗಿದೆ. ಸುಮಾರು 30 ರಿಂದ 40 ಮೈಲುಗಳಷ್ಟು ಅದು ಅಗಲವಾಗಿದೆ. ದಕ್ಷಿಣ ಕನ್ನಡ ಜಿಲ್ಲೆ ಸುಮಾರು 50 ಮೈಲುಗಳಷ್ಟು ಅಗಲವಾಗಿದೆ. ಕೆಲವೆಡೆಗೆ ಸಹ್ಯಾದ್ರಿಯು ಸಮುದ್ರದವರೆಗೆ, ಒಳಗೆ ಕೂಡ, ಕಾಲು ಚಾಚಿರುವದು. ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಗೋಕರ್ಣದಿಂದ ದಕ್ಷಿಣಕ್ಕೆ ಇರುವ ಕರಾವಳಿಯ ಕಿರಿಯಗಲಾದ ಬಯಲಿಗೆ ಪರುಶುರಾಮ ಕ್ಷೇತ್ರವೆಂದು ಕರೆಯುವರು. ಏಕೆಂಬುದು ನಿಮಗೆ ಗೊತ್ತುಂಟೆ ? ಪರಶು

ರಾಮನು 21 ಸಲ ಭೂಮಿಯ ಮೇಲೆ ಕ್ಷತ್ರಿಯರು ಇಲ್ಲದಂತೆ ಮಾಡಿದನು. ಅವರಿಂದ ಗೆದ್ದು ರಾಜ್ಯವನ್ನೆಲ್ಲ ಕಶ್ಯಪನೆಂಬ ಋಷಿಗೆ ದಾನ ಮಾಡಿಬಿಟ್ಟನು.




ಮುಂದೆ ಪರಶುರಾಮನಿಗೆ ಇರಲು ಸ್ಥಳ ಇಲ್ಲದಂತಾಯಿತು. ಅರಬೀ

ಸಮುದ್ರದ ತೆರೆಗಳು ಪಶ್ಚಿಮ ಘಟ್ಟಗಳ ಬಂಡೆಗಲ್ಲುಗಳಿಗೆ ಅಗ್ಗೆ ಬಡೆಯುತ್ತಿದ್ದವು. ತನಗೆ ನಿಲ್ಲಲು ಸ್ಥಳ ಬೇಕೆಂದು ಸಮುದ್ರವನ್ನು ಪರಶುರಾಮನು ಪ್ರಾರ್ಥಿಸಿದನು. 'ಕೊಡಲಿ ರಾಮನ ಸಿಡಿಲಿಗಳುಕಿ ಸಮುದ್ರವು ಹಿಂದೆ ಸರಿದು ಆತನಿಗೆ ಸ್ಥಳ ಮಾಡಿಕೊಟ್ಟಿತಂತೆ. ಇದು ಪುರಾಣದಲ್ಲಿ ಹೇಳಿದ ಕಥೆಯಾಗಿದೆ. ಭೂಕವಚದ ಸ್ಥಿತ್ಯಂತರಗಳಲ್ಲಿ ಸಮುದ್ರವೂ ಹಿಂದೆ ಸರಿಯುವದುಂಟು. ಒಂದೆಡೆಗೆ ಅರಬ್ಬೀಸಮುದ್ರದ ಅಪಾರವಾದ ಜಲರಾಶಿ. ಮತ್ತೊಂದೆಡೆಗೆ ಎತ್ತರ ಎತ್ತರವಾಗಿ ಹಬ್ಬಿರುವ ಸಹ್ಯಾದ್ರಿಯ ಸಾಲುಗಳು. ಇವುಗಳ ನಡುವೆ ಉಸುಕು ರೇವೆಗಳಿಂದ ಕೂಡಿದ ಈ ಕಿರಿಯಗಲಾದ ಭೂಮಿಯು ನೆಲೆಸಿದೆ. ಇದುವೆ ಕರಾವಳಿಯ ಬಯಲು.

ಉನ್ನತವಾದ ಬೆಟ್ಟಗಳ ಮೇಲೆ ಬಿದ್ದ ಮಳೆಯ ನೀರು ಎರಡೂ ಬದಿಗಳಲ್ಲಿ ಪ್ರವಾಹಗಳಾಗಿ ಹರಿಯುವದು. ಮಳೆಯ ನೀರನ್ನು ಹೀಗೆ ವಿಭಾಗಿಸುವದರಿಂದ ಬೆಟ್ಟಗಳಿಗೆ 'ಜಲಚ್ಛೇದ' ಇಲ್ಲವೆ 'ನೀರನೆತ್ತಿ'ಗಳೆಂದು ಹೇಳುವದುಂಟು. ಮೇಲಿನಿಂದ ಬೀಳುವ ಮಳೆಯ ನೀರು ನಿಮ್ಮ ಕೊಡೆಯ ಕಡ್ಡಿಗಳ ಗುಂಟ ಹರಿಯುವದಿಲ್ಲವೆ? ಬೆಟ್ಟಗಳೂ ಅದೇ ರೀತಿಯಾಗಿ ಮಳೆಯ ನೀರನ್ನು ಎರಡೂ ಬದಿಗಳಲ್ಲಿ ಹರಿಯುವಂತೆ ಮಾಡುವವು. ಈ ಝರಿಗಳೇ ಕೂಡಿಕೊಂಡು ಬೆಳೆದು ನದಿಗಳಾಗಿ ಹರಿಯುವವು. ಹೀಗೆ ನದಿಗಳು ಹುಟ್ಟುವ ಸ್ಥಳಕ್ಕೆ 'ಉಗಮಸ್ಥಳ'ವೆನ್ನುವರು. ನದಿಗಳ ಉಗಮಸ್ಥಾನಗಳೆಲ್ಲ ಹೆಚ್ಚಾಗಿ ಬೆಟ್ಟಗಳಲ್ಲಿಯೆ ಇರುವವು. ಬೆಟ್ಟಗಳ ಅನೇಕ ಉಪಯೋಗಗಳಲ್ಲಿ ಇದೂ ಒಂದಾಗಿದೆ. ಸಹ್ಯಾದ್ರಿಯಲ್ಲಿ ಉಗಮವಾಗಿ ಪಶ್ಚಿಮದ ಇಳುಕಲಿನ ಗುಂಟ ಕೆಲವು ಚಿಕ್ಕ ನದಿಗಳು ಹರಿದಿರುವವು. ಕಾಳೀ, ಗಂಗಾವಳಿ, ಶರಾವತಿ, ಅಘನಾಶಿನಿ ಮುಂತಾದ ಕೆಲವು ಚಿಕ್ಕ ನದಿಗಳು ಕರಾವಳಿಯ ಬಯಲಿನಲ್ಲಿ ಹರಿದಿರುವವು. ಕರಾವಳಿಯ ಕಿರಿಯಗಲಾದ ಪ್ರದೇಶದಲ್ಲಿ ಇವು ಹರಿಯುವದರಿಂದ ಈ ನದಿಗಳ ಉದ್ದಳತೆ ಕಡಿಮೆಯಾಗಿದೆ. ನಮ್ಮ ಕರಾವಳಿಯ ನದಿಗಳಲ್ಲಿ ಶರಾವತಿಯೆ ಮುಖ್ಯವಾದುದು. ಈ ನದಿಯಿಂದ ಉಂಟಾದ ಗೆರಸೊಪ್ಪೆಯ ತಡಸಲು (ಜೋಗದ ಜಲಪಾತ) ಜಗತ್ ಪ್ರಸಿದ್ಧವಾದುದು. ಭೂಮಿಯು ಇಳುಕಲಾಗಿರುವದರಿಂದ ಈ ನದಿಗಳೆಲ್ಲ ವೇಗವಾಗಿ ಸರಿದು ಕೂಡಲೆ ಪಶ್ಚಿಮದ ಅರಬೀಸಮುದ್ರವನ್ನು ಸೇರುವವು. ಈ ನದಿಗಳು ಹರಿಯುವ ಪ್ರದೇಶದಲ್ಲಿ ಕೆಳಗಿನ ನೆಲವು ಕಲ್ಲು ಬಂಡೆಗಳಿಂದ ಕೂಡಿರುವದು. ಆದುದರಿಂದ, ಈ ನದಿಗಳ ನೀರು ಭೂಮಿಯಲ್ಲಿ ಹೆಚ್ಚಾಗಿ

ಇಂಗುವದಿಲ್ಲ. ಇವುಗಳ 'ಮುಖ'ದ ಹತ್ತಿರ ಸಮುದ್ರದ ಭರತಿಯ ನೀರು ಕೆಲವು ಅಂತರದ ವರೆಗೆ ಒಳಸೇರುವದು. ನದಿಗಳ ಮುಖಕ್ಕೆ ಸಮೀಪವಾಗಿ



ರುವ ಈ ಭಾಗಕ್ಕೆ '**ಖಾಡಿ**' ಎನ್ನುವರು. ಈ '**ಖಾಡಿ**'ಗಳಲ್ಲಿ ನಾವೆ-ಡೋಣಿಗಳು ಸಂಚರಿಸುವವು. ಈ ಖಾಡಿಗಳ ಇಬ್ಬದಿಗಳಲ್ಲಿ ಸೃಷ್ಟಿಯ ಸೊಬಗು ನೋಡುವಂತಹದು. ಕಾರವಾರದ ಬಳಿಯ ಕಾಳೀನದಿಯ ಮುಖದ ಸೃಷ್ಟಿ ಸೌಂದರ್ಯವನ್ನು ಕವಿ ರವೀಂದ್ರರು ಮನವಾರೆ ಮೆಚ್ಚಿದಾರೆ. ಈ ನದಿಗಳ ಮುಖದ ಬಳಿಯಲ್ಲಿಯೆ ನಮ್ಮ ಕರಾವಳಿಯ ಬಂದರಗಳಾದ ಕಾರವಾರ, ಕುಮಟಾ, ಹೊನ್ನಾವರ, ಅಂಕೋಲಾ, ಭಟಕಳ, ಮಲ್ಪೆ, ಮಂಗಳೂರ ಇವು ನೆಲಸಿರುವವು.

ಸಮುದ್ರ ದಂಡೆಯ ಈ ಪ್ರದೇಶದಿಂದ ಪೂರ್ವಕ್ಕೆ ಮುಂದೆ ಸಾಗಿರಿ. 4-5 ಸಾವಿರ ಅಡಿಗಳಷ್ಟು ಎತ್ತರವಾಗಿರುವ ಅಖಂಡವಾದ ಸಹ್ಯಾದ್ರಿಯ ಗೋಡೆ ನಿಮಗೆ ಅಡ್ಡವಾಗಿ ನಿಲ್ಲುವದು ಈ ಗೋಡೆಗೆ ನಾವು ಸಹ್ಯಾದ್ರಿ ಇಲ್ಲವೆ ಪಶ್ಚಿಮ ಘಟ್ಟವೆಂದು ಹೇಳುವೆವು. ನಿಜವಾಗಿ ನೋಡುವರೆ ಸಹ್ಯಾದ್ರಿಯು ಒಂದೇ ಪರ್ವತವಾಗಿರದೆ ಅನೇಕ ಬೆಟ್ಟಗಳ ಸಾಲೇ ಸರಿ. 'ದಕ್ಷಿಣದ ತಪ್ಪಲು' ಎಂದು ಹೇಳುವ ಉನ್ನತ ಪ್ರದೇಶದ ಪಶ್ಚಿಮದ ತುದಿಯಂಚೆ ಸಹ್ಯಾದ್ರಿಯಾಗಿರುವದು. ಕೆಳಗಿನ ಬಯಲಿನಲ್ಲಿ ನಿಂತು ನೋಡಿದರೆ ನಮಗೆ ಈ ತುದಿಯಂಚು ಬೆಟ್ಟದ ಹಾಗೆ ತೋರುವದು. ಸಹ್ಯಾದ್ರಿಗೆ 'ಪಶ್ಚಿಮ ಘಟ್ಟ'ವೆಂಬುದು ಬೇರೊಂದು ಹೆಸರು.

ಪಶ್ಚಿಮ ಘಟ್ಟಗಳು ದಕ್ಷಿಣ ಭಾರತದ ಪಶ್ಚಿಮ ದಂಡೆಗುಂಟ ಬಹು ದೂರದವರೆಗೆ ಸಾಲಾಗಿ ನೆಲೆಸಿವೆ. ಆದರೆ ಮೈಸೂರು ರಾಜ್ಯದ ಬೆಳಗಾಂವಿಯ ಖಾನಾಪೂರ ತಾಲೂಕಿನಲ್ಲಿ ಈ ಬೆಟ್ಟಗಳು ನಮಗೆ ಮೊದಲು ಕಾಣಿಸಿಕೊಳ್ಳುವವು. ಅಲ್ಲಿಂದ ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರಿನ ಹತ್ತಿರ

ಇವು ಪೂರ್ವಕ್ಕೆ ತಿರುಗುವವು. ಆ ಜಿಲ್ಲೆಯ ಮೇರೆಗಳಾಗಿ ಸಾಗಿ ಕೊಡಗು ಜಿಲ್ಲೆಯಲ್ಲಿ ಸೇರುವವು. ಶ್ರೀಮಂಗಲವು ನಮ್ಮ ರಾಜ್ಯದಲ್ಲಿ ಪಶ್ಚಿಮ ಘಟ್ಟಗಳ ಕೊನೆಯ ಬೆಟ್ಟವಾಗಿದೆ. ಇವುಗಳ ಎತ್ತರವು ಒಂದೇ ಸಮನಾಗಿಲ್ಲ. ಕೆಲವೆಡೆಗೆ ಈ ಬೆಟ್ಟಗಳ ಎತ್ತರ ಕೇವಲ ಒಂದು ಸಾವಿರ ಇಲ್ಲವೆ ಎರಡು ಸಾವಿರ ಅಡಿಯಷ್ಟು. ಕೆಲವೆಡೆ 'ಕುದುರೆಯ ಮುಖ' ವೆಂದು ಕರೆಯುವ ಬೆಟ್ಟದ ಭಾಗವು 6000–3000 ಅಡಿಗಳಷ್ಟು ಉನ್ನತವಾಗಿದೆ. ಕೊಡಚಾದ್ರಿ, ವರಾಹಪರ್ವತ, ಸುಬ್ರಹ್ಮಣ್ಯ ಶ್ರೇಣಿ, ಬ್ರಹ್ಮಗಿರಿ, ಕೋಳಿಬೆಟ್ಟ: ನಮ್ಮ ರಾಜ್ಯದಲ್ಲಿ ನೆಲೆಸಿರುವ ಪಶ್ಚಿಮ ಘಟ್ಟದ ಬೇರೆ ಬೇರೆ ಭಾಗಗಳಿಗೆ ಇವೆಲ್ಲ ಬೇರೆ ಬೇರೆ ಹೆಸರುಗಳು.

ಈ ಬೆಟ್ಟಗಳು ದೇಶದ ಬೇರೆ ಬೇರೆ ಭಾಗಗಳ ನಡುವೆ ನಿಲ್ಲಿಸಿದ ಗೋಡೆಗಳಂತೆ ಕಾಣುವದಿಲ್ಲವೆ? ನಿಜ. ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸಾರಿಗೆ ಸಂಚಾರಗಳಿಗೆ ಇವುಗಳಿಂದ ತಡೆಯಾಗುವದು. ರೇಲು ಮಾರ್ಗ, ರಾಜ ಮಾರ್ಗಗಳನ್ನು ರಚಿಸುವದಕ್ಕೂ ತೊಂದರೆಯಾಗುವದು ಇದಕ್ಕಾಗಿಯೆ ಪಶ್ಚಿಮದ ತೀರ ಪ್ರದೇಶಕ್ಕೂ ಮೇಲಿನ ತಪ್ಪಲು ಪ್ರದೇಶಕ್ಕೂ ರೇಲು ಸಂಪರ್ಕವು ಇಲ್ಲದಂತಾಗಿದೆ. ಆದರೆ ಸೃಷ್ಟಿಯು ಇಲ್ಲಿಯೂ ನಮಗೆ ಒಂದು ಅನುಕೂಲತೆಯನ್ನು ಮಾಡಿಕೊಟ್ಟಿರುವದು. ಗೋಡೆಯಂತಿರುವ ಈ ಬೆಟ್ಟಗಳಲ್ಲಿ ಅಲ್ಲಲ್ಲಿ ಬಿರುಕುಗಳಿವೆ, ಕಿಂಡಿಗಳಿವೆ. ಇವುಗಳಿಗೆ ಕಣಿವೆ ಗಳೆನ್ನುವರು. ಈ ಕಣಿವೆಗಳಲ್ಲಿ ರಚಿಸಿದ ಮಾರ್ಗಗಳಿಗೆ ಘಟ್ಟದ ಮಾರ್ಗ ಗಳೆನ್ನುವರು ಬೆಟ್ಟಗಳನ್ನೇರಿ ಹೋಗಲು ಈ ಘಟ್ಟಗಳು ಸೋಪಾನ ಗಳಿದ್ದಂತೆ. ನದಿಗಳಿಗೆ ಪಾವಟಿಗೆಗಳನ್ನು ಕಟ್ಟಿರುವದನ್ನು ನೀವು ಕೆಲವು ಕಡೆಗೆ ನೋಡಿರಬಹುದು. ನೀರಿನ ವರೆಗೆ ಕಟ್ಟಿರುವ ಇಂಥ ಪಾವಟಿಗೆಗಳಿಗ 'ಘಾಟು' ಗಳೆನ್ನುವರು. ಬೆಟ್ಟಗಳಿಂದ ಮೆಟ್ಟಲು ಮೆಟ್ಟಲುಗಳಾಗಿ ಕೆಳಗೆ ಇಳಿದು ಬರುವ ಮಾರ್ಗಗಳೆ 'ಘಟ್ಟಗಳು' ಸೃಷ್ಟಿಯು ತಾನೇ ರಚಿಸಿದ ಇಂಥ ಘಟ್ಟಗಳು ಇರದಿದ್ದರೆ ಬೆಟ್ಟಗಳನ್ನು ಕೊರೆದು ಮಾರ್ಗ ರಚಿಸುವದೂ ಉಂಟು. ಇವುಗಳಿಗೆ ಸುರಂಗಮಾರ್ಗಗಳೆನ್ನುವರು. ಈ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶಿಸಲು ಚಾರ್ಮಾಡಿ, ಆಗುಂಬೆ ಘಟ್ಟಗಳಿ ರುವವು. ಉತ್ತರ ಕನ್ನಡ ಜಿಲ್ಲೆಗೆ ಹೋಗಿಬರಲು ತಿನೈಘಟ್ಟ, ಅ[illegible] ಘಟ್ಟ, ದೇವಿಮನೆಘಟ್ಟ, ಅಣಸೀ ಘಟ್ಟ ಎಂಬ ಘಟ್ಟದ ಮಾರ್ಗ ಗಳಿರುವವು.

ಕಣಿವೆ ಮಾರ್ಗದಿಂದಲಿ ಆಗಲಿ, ಬೆಟ್ಟಗಳನ್ನು ಏರಿ ಹೋಗುವದು ಎಂಥ ಪ್ರಯಾಸ! ಹುಲಿ ಚಿರ್ಚಗಳ ಭಯ ಬೇರೆ! ಏಕಿರಬೇಕಾಗಿತ್ತು ಈ ಬೆಟ್ಟಗಳು? ಎಂದು ನೀವು ಬೇಸರಪಟ್ಟುಕೊಳ್ಳುವಿರಲ್ಲವೆ? ಛೀ! ಹಾಗೆನ್ನ ಕೂಡದು. ಬೆಟ್ಟಗಳಿಂದ ನಮಗೆ ಬಗೆಬಗೆಯ ಉಪಯೋಗಗಳುಂಟು. ನಾವು ಉಪಯೋಗಿಸುವ ಉರುವಲುಕಟ್ಟಿಗೆ, ಮನೆ ಕಟ್ಟಲು ಬೇಕಾಗುವ ತೇಗು ಮತ್ತಿತರ ಕಟ್ಟಿಗೆ, ಬೆಟ್ಟಗಳ ಕಾಡುಗಳಿಂದಲಿ ನಮಗೆ ದೊರಕುವದು. ಕಬ್ಬಿಣ ಮುಂತಾದ ಅನೇಕ ಉಪಯುಕ್ತವಾದ ಲೋಹಗಳೂ ಬೆಟ್ಟಗಳಲ್ಲಿಯೆ ದೊರಕುವವು. ಬೆಟ್ಟಗಳ ಇದಕ್ಕೂ ಹೆಚ್ಚಿನ ಪ್ರಯೋಜನವು ನಿಮಗೆ ಈಗಾಗಲೆ ಗೊತ್ತಿದೆ—ಬೆಟ್ಟಗಳು 'ಜಲಚ್ಛೇದ' ಗಳಾಗಿ ಅನೇಕ ನದಿಗಳಿಗೆ ಉಗಮಸ್ಥಾನಗಳಾಗಿವೆಯೆಂದು.

ನಮ್ಮ ರಾಜ್ಯದ 'ಪರ್ವತ ಪ್ರದೇಶ' ದಲ್ಲಿ ಬೆಟ್ಟಗಳ ವಿಲಾಸ-ವೈಭವ ಗಳನ್ನು ನೀವು ನೋಡಬೇಕು. ಕಾಲುಚಾಚಿ ಒರಗಿದ ಬಂಡೆಗಳ ಸಾಲು ಒಂದೆಡೆಗೆ. ಆಡಕಿಲಿನಂತೆ ಒಂದನ್ನೊಂದು ಹೊತ್ತು ನಿಂತ ಬಂಡೆಗಳ ರಾಶಿ ಗಳು ಒಂದೆಡೆಗೆ. ಆಗಲಿ ನಿಂತು ದರಿಕಂದರಗಳನ್ನು ರಚಿಸಿದ ಬೆಟ್ಟಗಳ ಸಾಲು ಮತ್ತೊಂದೆಡೆಗೆ. ಬೆರಳು ಬೆರಳಿನಲ್ಲಿ ತಳಕುವಂತೆ ಬೆಟ್ಟ ಬೆಟ್ಟಗಳು ಬೆರೆತುಕೊಂಡಿರುವ ನೋಟ ಬೇರೆ ಕಡೆಯಲ್ಲಿ. ಇವುಗಳ ನಡುವೆ ಉನ್ನತ ವಾಗಿ ತಲೆಯೆತ್ತಿ ನಿಂತಿರುವ ಗಿರಿಶಿಖರಗಳು ಅಲ್ಲಲ್ಲಿ ಪಶ್ಚಿಮದ ಬೆಟ್ಟಗಳ ಇಳುಕಲಿನಲ್ಲಿ ಸದಾ ಹಸಿರಿನಿಂದ ಕೂಡಿದ ಕಾಡುಗಳು ಕಣ್ಣಿಗೆ ಹಬ್ಬ ವನ್ನುಂಟು ಮಾಡುವವು. ಕೊಳ್ಳಗಳಲ್ಲಿ ಕಾಣಬರುವ ಅಡಿಕೆ-ತೆಂಗಿನ ಬನ ಗಳು ಭತ್ತದ ಗದ್ದೆಗಳು ಬೆಟ್ಟಗಳ ಸೊಬಗನ್ನು ಮತ್ತಷ್ಟು ಹೆಚ್ಚಿಸುವವು. ಉನ್ನತವಾದ ಬೆಟ್ಟಗಳ ಎದುರಿನಲ್ಲಿ ನಿಂತರೆ, ದೇವರ ಸೃಷ್ಟಿಯಲ್ಲಿ 'ನಾವು ಎಷ್ಟು ಚಿಕ್ಕವರು' ಎಂಬ ಭಾವನೆ ಉಂಟಾಗುವದು.

ಪಶ್ಚಿಮ ಘಟ್ಟಗಳನ್ನು ಕಣಿವೆಮಾರ್ಗಗಳಿಂದ ಏರಿ ಮೇಲಕ್ಕೆ ಬನ್ನಿರಿ. ಮೇಲ್ಭಾಗವೇ ತಪ್ಪಲುಪ್ರದೇಶವಾಗಿದೆ. ಪ್ರಸ್ಥಭೂಮಿಯೆಂತಲೂ ಇವಕ್ಕೆ ಕರೆಯುವರು. ತ್ರಿಕೋಣಾಕೃತಿಯಾದ ಈ ಉನ್ನತ ಪ್ರದೇಶಕ್ಕೆ ದಕ್ಷಿಣ ಭಾರತದ ತಪ್ಪಲು ಎನ್ನುವರು. ಈ ತಪ್ಪಲಿನ ಪೂರ್ವದ ಅಂಚಿಯಂತೆ ಪೂರ್ವ ಘಟ್ಟಗಳು. ಪೂರ್ವ ಘಟ್ಟಗಳು ಆಂಧ್ರ ರಾಜ್ಯದಲ್ಲಿ ದಕ್ಷಿಣದ ತುದಿಯಂಚು ಗಳಾಗಿ ಹಬ್ಬಿವೆ. ಪಶ್ಚಿಮ ಘಟ್ಟಗಳಂತೆ ಇವು ಅಖಂಡವಾಗಿಲ್ಲ. ತಪ್ಪಲಿನ ಇಳುಕಲಿನಲ್ಲಿ ಹರಿಯುವ ನದಿಗಳು ಪೂರ್ವ ಘಟ್ಟಗಳಲ್ಲಿ ಅನೇಕ ಖಿಂಡಿ

ಗಳನ್ನು ಮಾಡಿರುವವು. ಮಳೆ ಕಡಿಮೆಯಾಗುವದರಿಂದ ಇವುಗಳ ಮೇಲೆ ದಟ್ಟವಾದ ಕಾಡುಗಳು ಬೆಳೆಯುವದಿಲ್ಲ.

ಚಿಕ್ಕವರು, ವಯಸ್ಸಾದವರು, ಎಂದು ಹೆಚ್ಚು ಕಡಿಮೆ ವಯೋಮಾನದ ಜನರು ನಮ್ಮಲ್ಲಿ ಇರುವದಿಲ್ಲವೇ? ಭೂಮಿ ಹಾಗೂ ಬೆಟ್ಟಗಳಲ್ಲಿಯೂ ವಯೋಮಾನದ ಹೆಚ್ಚು ಕಡಿಮೆಗಳು ಇರುವವು. ದಕ್ಷಿಣದ ತಪ್ಪಲು ಬಹಳೇ ಪ್ರಾಚೀನವಾದುದು. ಉತ್ತರ ಭಾರತದ ಬಯಲಿಗಿಂತಲೂ ಬಹಳೇ ಹಿಂದಿನದು. ಪ್ರಾಚೀನತೆಯಲ್ಲಿ ಪಶ್ಚಿಮ ಘಟ್ಟಗಳು ಪಿತಾಮಹ (ಮುತ್ತಜ್ಜ)ನಂತೆ, ಹಿಮಾಲಯವು ಚಿಕ್ಕಹುಡುಗನಂತೆ; ಇತ್ತೀಚಿನದು! ಈ ತಪ್ಪಲಿನಲ್ಲಿ ಹರಿಯುವ ಗೋದಾವರಿಯು ಉತ್ತರ ಭಾರತದ ಗಂಗಾನದಿಗಿಂತಲೂ ಪ್ರಾಚೀನವಾದುದು. ಮೊದಲೇ ಹುಟ್ಟಿದುದು. ಅಂತೆಯೇ ಗೋದಾವರಿಯನ್ನು 'ವೃದ್ಧಗಂಗೆ'ಯೆಂದು ಗೌರವಿಸುವರು. 'ಕಾವೇರಿಯಿಂದ ಗೋದಾವರಿ' ವರೆಗೆ ನಮ್ಮ ಕನ್ನಡ ನಾಡು ನೆಲೆಸಿತ್ತೆಂದು ರಾಜಕವಿಯೊಬ್ಬನು ಹೇಳಿರುವನು.

ನಿಸರ್ಗದ ಶಕ್ತಿಗಳಿಂದ ಭೂಕವಚದಲ್ಲಿ ಆಗಾಗ್ಗೆ ಬದಲಾವಣೆಗಳಾಗುವವು—ಎಂದು ಹಿಂದೆ ಹೇಳಿದ ಮಾತು ನೆನಪಿದೆಯಲ್ಲವೆ? ಇಂದಿನ ತಪ್ಪಲಿನ ಉತ್ತರ ಭಾಗಕ್ಕಿರುವ ಭೂಮಿಯು ಒಂದು ಕಾಲಕ್ಕೆ ಬಿರುಕು ಬಿಟ್ಟಿತು. ಈ ಬಿರುಕುಗಳಿಂದ ಹೊರಗೆ ಉಕ್ಕಿ ಬಂದ 'ಲಾವಾ'ರಸವು ಕೆಳಗಿನ ಭೂಮಿಯ ಮೇಲೆ ಹರಡಿಕೊಂಡಿತು. ಆರಿ ಗಟ್ಟಿಯಾದ ಈ ಲಾವಾರಸದಿಂದಲೇ ದಕ್ಷಿಣ ಭಾರತದ ತಪ್ಪಲಿನ ನಿರ್ಮಾಣವಾಯಿತು.

ದಕ್ಷಿಣ ಭಾರತ ತಪ್ಪಲಿನ ಭಾಗವೇ ಆಗಿರುವ ಮೈಸೂರ ರಾಜ್ಯದ ತಪ್ಪಲು ಪೂರ್ವಕ್ಕೆ ಇಳುಕಲಾಗಿರುವದು. ಈ ಇಳುಕಲು ತುಸು ಕಡಿದಾಗಿಯೇ ಇರುವದು. ಅಂತೆಯೇ ಈ ತಪ್ಪಲಿನ ಪ್ರದೇಶದಲ್ಲಿ ಹರಿಯುವ ನದಿಗಳ ಪ್ರವಾಹವು ವೇಗವುಳ್ಳದ್ದಾಗಿರುವದು. ಈ ನದಿಗಳ ಒಡಲುಗಳು ಆಳವಾದ ಕೊರಕಲುಗಳಾಗಿರುವವು. ಅವುಗಳ ಎರಡೂ ದಂಡೆಗಳು ಎತ್ತರವಾಗಿರುವವು. ಈ ತಪ್ಪಲಿನ ಯಾವ ಭಾಗವೂ 1,000 ಅಡಿಗಿಂತ ಕಡಿಮೆ ಎತ್ತರವಾಗಿಲ್ಲ. ತುಂಗಭದ್ರೆಯ ಉತ್ತರದ ಭಾಗವು ತಪ್ಪಲಿನ ಉತ್ತರ ಭಾಗವು, ದಕ್ಷಿಣಕ್ಕಿರುವದು ತಪ್ಪಲಿನ ದಕ್ಷಿಣ ಭಾಗವು.

ಈ ತಪ್ಪಲು ಪ್ರದೇಶದ ಪೂರ್ವ ಪಶ್ಚಿಮ, ದಕ್ಷಿಣ ಭಾಗಗಳಲ್ಲಿ ಕೆಲವು ಬಿಡಿ ಗುಡ್ಡಗಳುಂಟು. ಪೂರ್ವದ ಬೆಟ್ಟಗಳಲ್ಲಿ ಪಾವಗಡದ ಸಾಲು

ದಕ್ಷಿಣಕ್ಕೆ ಹಬ್ಬಿದೆ. ಈ ಸಾಲಿನಲ್ಲಿ ಬಾಲಘಾಟ, ಯಮುನಗುಡ್ಡ, ಮಧುಗಿರಿ, ದೇವರಾಯನ ದುರ್ಗ, ಚೆನ್ನರಾಯನದುರ್ಗ, ಕಬ್ಬಾಳದುರ್ಗ, ಶಿವಗಂಗೆ, ನಂದಿದುರ್ಗ ಮೊದಲಾದ ಬೆಟ್ಟಗಳಿರುವವು. ಮಧುಗಿರಿಯ ಮೇಲೆ ಒಂದು ಹಳೆಯ ಕೋಟೆ, ಒಂದು ನೀರಿನ ಸೆಲೆ ಇರುವವು. ನಂದಿದುರ್ಗವು 4800 ಅಡಿ ಎತ್ತರವಾಗಿದೆ. ಇದು ಒಂದು ಆರೋಗ್ಯಧಾಮ. ಗಾಂಧೀಜಿಯವರು ಕೆಲಕಾಲ ಇಲ್ಲಿ ವಿಶ್ರಾಂತಿ ಪಡೆದಿದ್ದರು. ದಕ್ಷಿಣಕ್ಕೆ ಹಬ್ಬಿರುವದು ಕೋಲಾರ ಬೆಟ್ಟಗಳ ಸಾಲು. ಅಂಬಾಜಿ ದುರ್ಗ ಮುಂತಾದ ಈ ಸಾಲಿನಲ್ಲಿಯ ಬೆಟ್ಟ ಗಳು ಅಷ್ಟು ಎತ್ತರವಾಗಿರುವುದಿಲ್ಲ. ಕೋಲಾರ ಬೆಟ್ಟಗಳಲ್ಲಿ ಚಿನ್ನದ ಗಣಿ ಗಳಿರುವವು.

ಈ ರಾಜ್ಯದ ನಡುವಿನ ಭಾಗದಲ್ಲಿಯೂ ಕೆಲವು ಬೆಟ್ಟಗಳು ಅಲ್ಲಲ್ಲಿ ತಲೆಯೆತ್ತಿ ನಿಂತಿವೆ. ಇವುಗಳಲ್ಲಿ ಕೆಲವು ಬೆಟ್ಟಗಳ ಬಗ್ಗೆ ನೀವು ಈಗಾಗಲೇ ಕೇಳಿರಬಹುದು. ನರಗುಂದ ಬೆಟ್ಟದ ಮೇಲೆ ಹಿಂದಿನ ಹಾಳಾದ ಕೋಟೆ ಯಿದೆ. ಎಲ್ಲಮ್ಮನ ಗುಡ್ಡವು ದೊಡ್ಡ ಯಾತ್ರೆಯ ಸ್ಥಳವಾಗಿದೆ. ಚಿತ್ರದುರ್ಗ ಬೆಟ್ಟವು ಇತಿಹಾಸದಲ್ಲಿ ಹೆಸರಾಗಿದೆ. ಮೈಸೂರಿನ ನೆರೆಯಲ್ಲಿರುವ ಚಾಮುಂಡಿ ಬೆಟ್ಟದಲ್ಲಿ ಮೈಸೂರು ರಾಜಮನೆತನದ ಕುಲದೇವತೆಯಾದ ಚಾಮುಂಡೀ ದೇವಾಲಯವಿದೆ. ಶ್ರವಣ ಬೆಳಗೊಳವು ಜೈನಮತೀಯರಿಗೆ ಯಾತ್ರೆಯ ಸ್ಥಳ. ಗೋಪಾಲ ಸ್ವಾಮಿಯ ಬೆಟ್ಟದ ಹಳವುಗಳಲ್ಲಿ ಕಾಡಾನೆಗಳು ಸಂಚರಿ ಸುತ್ತಿವೆ. ಈ ಮಧ್ಯದ ಸುಮಾರು 3 ಸಾವಿರ ಅಡಿ ಬೆಟ್ಟಗಳೆಲ್ಲ ಎತ್ತರ ವಾಗಿವೆ. ಇವುಗಳ ಭಾಗದಲ್ಲಿ ಸುಮಾರು 40 ಇಂಚುಗಳ ವರೆಗೆ ಮಾತ್ರ ಮಳೆಯಾಗುತ್ತಿದೆ. ಅದರಿಂದ ಇವುಗಳ ಮೇಲೆ ದಟ್ಟವಾದ ಕಾಡುಗಳು ಬೆಳೆದಿಲ್ಲ.

ತಪ್ಪಲಿನ ಪಶ್ಚಿಮ ಭಾಗದಲ್ಲಿಯೂ ಕೆಲವು ಬಿಡಿ ಗುಡ್ಡಗಳು ಕಾಣ ಬರುವವು. ಬಾಬಾ ಬುಡನಗಿರಿ ಎಂಬುದು ಇವುಗಳಲ್ಲಿ ಮುಖ್ಯವಾದುದು. ಈ ಬೆಟ್ಟದಲ್ಲಿ ಕಬ್ಬಿಣದ ಅದಿರು ವಿಪುಲವಾಗಿ ದೊರೆಯುತ್ತಿದೆ.

ಮಲೆನಾಡಿಗೆ ಹೊಂದಿಕೊಂಡಿರುವ ಪೂರ್ವದ ಭಾಗಗಳಿಗೆ 'ಮಲೆ ನಾಡಿನ ಸೆರಗು,' ಇಲ್ಲವೆ 'ಅರೆ ಮಲೆನಾಡು' ಎನ್ನುವರು. ಸೀರೆಯ ತುದಿ ಯಂಚಿನಂತೆ ಈ ಭಾಗಗಳು ಮಲೆನಾಡಿನ ತುದಿಯಂಚುಗಳು. ನಮ್ಮ ರಾಜ್ಯದ ಧಾರವಾಡ, ಬೆಳಗಾಂವಿ ಜಿಲ್ಲೆಗಳ ಕೆಲವು ಭಾಗಗಳು ಮಲೆನಾಡ ಸೆರಗಿನಲ್ಲಿ ಸಮಾವೇಶವಾಗುವವು. ಈ ಭಾಗಗಳಲ್ಲಿ ಮಲೆನಾಡಿನಲ್ಲಿರು

ನಷ್ಟು ಪರ್ವತಗಳಿಲ್ಲ. ದಟ್ಟವಾದ ಕಾಡುಗಳೂ ಕಂಡು ಬರುವದಿಲ್ಲ. ಆದರೆ ಇಲ್ಲಿ ಸಾಕಷ್ಟು ಮಳೆಯಾಗುವದು. ಭೂಮಿಯು ಹನ್ನೆರಡು ತಿಂಗಳೂ ಹಸಿರು ಹುಲ್ಲು ಹಾಸಿಗೆಯಿಂದ ಶೋಭಿಸುವದು. ಭತ್ತವನ್ನೆ ಇಲ್ಲಿ ಹೆಚ್ಚಾಗಿ ಬೆಳೆದುಕೊಳ್ಳುವರು. ಮಳೆಗಾಲದ ತಿಂಗಳಲ್ಲಿ ಜನರಿಗೆ ತುಸು ತೊಂದರೆ ಯೆನಿಸುವದು. ಆದರೆ ಬೇಸಿಗೆ ಬಹಳೇ ಹಿತಕರವಾಗಿರುವವು. ಬೇಸಿಗೆ ಕಳೆ ಯಲು ಕೆಲವು ಸಿರಿವಂತ ಜನರು ಈ ಭಾಗಗಳಲ್ಲಿ, ಬಂದು ನೆಲಿಸುವದುಂಟು.

ಮಲೆನಾಡು, ಮಲೆನಾಡ ಸೆರಗುಗಳಿಂದ ಪೂರ್ವಕ್ಕೆ ಮುಂದೆ ಬನ್ನಿರಿ. ಮೇಜಿನ ಮೇಲ್ಭಾಗದಂತೆ, ಇಲ್ಲಿ ನಿಮಗೆ ಕಾಣುವ ಪ್ರದೇಶವು ತಪ್ಪಲಿನ ಮೇಲ್ಮೈ ಆಗಿದೆ. ನಿಮ್ಮ ಶಾಲೆಯ ಆಟದ ಮೈದಾನದಂತೆ ಈ ಪ್ರದೇಶವೂ ಸಾಮಾನ್ಯವಾಗಿ ಸಮಭೂಮಿಯಾಗಿದೆ. ಅಂತೆಯೇ ಇದಕ್ಕೆ ನಮ್ಮ ರಾಜ್ಯದ **'ಮೈದಾನ ಪ್ರದೇಶ'**ವೆಂದು ಹೇಳುವರು. 'ಬೆಳವಲ ನಾಡು' ಎಂತಲೂ ಕರೆಯುವುದುಂಟು. ಈ ಪ್ರದೇಶದಲ್ಲಿ ಕೆಲವು ಕಡೆಗೆ, ನಮ್ಮ ಕಣ್ಣು ಕಾಣುವವರೆಗೆ ಸಮಪಾತಳಿಯ ಕರಿಯ ಭೂಮಿ ಪಸರಿಸಿರುವದು. ಉಳಿದ ಭಾಗಗಳಲ್ಲಿ ತೆರೆತೆರೆಗಳಂತೆ ಭೂಮಿಯು ಚಿಕ್ಕ ಏರಿಳಿತಗಳಿಂದ ಕೂಡಿ ರುವದು.

ದಕ್ಷಿಣದ ತಪ್ಪಲು ಬಹಳೇ ಪುರಾತನವಾದುದು ಎಂದು ಹಿಂದೆ ಹೇಳಿದುದನ್ನು ನೀವು ಮರೆತಿರಲಿಕ್ಕಿಲ್ಲ. ಇಲ್ಲಿಯ ಕರಿಯ ಭೂಮಿಯಿಂದಲೆ ತಪ್ಪಲಿನ ಭಾಗವಾದ ನಮ್ಮ ನಾಡಿಗೆ 'ಕರಿನಾಡು' ಎಂಬ ಹೆಸರು ಬಂದಿದೆ ಯೆಂದು ಕೆಲವರು ಹೇಳುವರು. ಈ ಕರಿ ನೆಲವನ್ನು ಯಾರು ಸಿದ್ಧಗೊಳಿಸಿ ದರು? ಹೇಗೆ ಸಿದ್ಧಗೊಳಿಸಿದರು? ಎಂಬುದನ್ನು ನೀವು ತಿಳಿದುಕೊಳ್ಳ ಬೇಕು. ಭೂಮಿಯ ಆಳವಾದ ಬಿರುಕುಗಳಿಂದ ಭೂಗರ್ಭದೊಳಗಿನ 'ಲಾವಾ' ರಸವು ಉಕ್ಕಿ ಬಂದಿತು; ಈ ಭಾಗದಲ್ಲಿ ಪಸರಿಸಿತು. ಮುಂದೆ ಆರಿ ಗಟ್ಟಿಯಾಗಿ ಲಾವ್ಹಾ ಶಿಲೆಯಾಯಿತು—ಎಂದು ತಪ್ಪಲಿನ ರಚನೆಯ ವಿಷಯದಲ್ಲಿ ನಿಮಗೆ ಹಿಂದೆ ಹೇಳಿದೆ. ಈ ಬಿರುಸಾದ ಲಾವ್ಹಾ ಶಿಲೆಯೆ ಒಡೆದು ಪುಡಿಪುಡಿಯಾಗಿ ಈ ಕರಿಯ ನೆಲವಾಗಿದೆ. ಲಾವ್ಹಾ ಶಿಲೆಯನ್ನು ಭೇದಿಸುವ, ಪುಡಿಪುಡಿಯಾಗಿ ಮಾಡುವ ಕಾರ್ಯವು ಮೂರು ದೇವತೆಗಳಿಂದ ಸಾಗಿದೆ. ಸೂರ್ಯದೇವ, ತನ್ನ ಪ್ರಖರವಾದ ಉಷ್ಣತೆಯಿಂದ ಶಿಲೆಯನ್ನು ಹೋಳುಹೋಳಾಗಿ ಮಾಡುವನು. ಗಾಳಿ, ಮಳೆಗಳು ಅವುಗಳನ್ನು ಸವೆಸಿ ಸವೆಸಿ ಪುಡಿಪುಡಿಯಾಗಿ ಮಾಡುವವು. ಈ ಕರಿಯ ಮಣ್ಣು ಈ ದೇವತೆಗಳ

ಹುಡಿತನ ಫಲವಾಗಿದೆ, ಅವರ ಕೊಡುಗೆಯಾಗಿದೆ. ಹತ್ತಿಯ ಬೆಳೆಗೆ ಹೆಸರಾದ ಈ ಭೂಮಿ ನಮ್ಮ ನಾಡಿನ ಸಂಪತ್ತಿಗೆ ಸಾಧನವಾಗಿದೆ ಈ ಕರಿಯ ಮಣ್ಣಿನ ನೆಲಕ್ಕೆ ಎರೆ ಭೂಮಿ— ಎರೆ ಪ್ರದೇಶವೆಂತಲೂ ಹೇಳುವರು. ಈ ಎರೆಯ ಜಿಗುಟು ಮಣ್ಣು ಬಹಳ ಬೆಳೆಯುಳ್ಳದ್ದಾಗಿದೆ. ಮಳೆಯ ನೀರನ್ನು ಈ ಮಣ್ಣು ಹೆಚ್ಚಾಗಿ ಹೀರಿಕೊಳ್ಳುವದು, ಮಿದುವಾಗುವದು. ಹೀರಿಕೊಂಡ ಈ ನೀರು ಕೆಳಗೆ ದೂರದ ವರೆಗೆ ಇಂಗುವದು. ಮೇಲಿನ ಭೂಮಿಯು ಹೆಪ್ಪುಗಟ್ಟುವದರಿಂದ ಕೆಳಗಿನ ಹಸಿಯು ಬಹು ಕಾಲದ ವರೆಗೆ ಉಳಿಯುವದು, ಉಗಿಯಾಗಿ ಹಾರಿಹೋಗುವದಿಲ್ಲ. ಬಿತ್ತಿದ ಪೈರುಗಳಿಗೆ ಕೆಳಗಿನ ಈ ಹಸಿಯೆ ಆಧಾರವಾಗುವದು. ಹೀಗಿರುವದರಿಂದ ಉತ್ತರ ಕರ್ನಾಟಕದಲ್ಲಿ ಹದವರಿತು ಒಂದೆರಡು ದೊಡ್ಡ ಮಳೆಯಾದರೆ ಸಾಕು; ಸಮೃದ್ಧವಾದ ಬೆಳೆ ಬರುವದು. ದಕ್ಷಿಣ ಕರ್ನಾಟಕದಲ್ಲಿ ಭೂಮಿಯು ಕೆಲವೆಡೆ ಕೆಂಪು ಮಣ್ಣಿನಿಂದ ಕೂಡಿದ್ದಾಗಿದೆ, ಕೆಲವಡೆ ಉಸುಕಿನಿಂದ ಕೂಡಿದ್ದಾಗಿದೆ. ಇಂಥ ನೆಲಗಳಿಗೆ ‘ ಮರಡಿ ’ ಹಾಗೂ ‘ ಮಸಾರಿ ’ ಭೂಮಿಗಳೆಂದು ಹೇಳುವದುಂಟು. ಬೆಳೆ ಬರಲು, ಇಂಥ ಭೂಮಿಗಳಿಗೆ ಹೆಚ್ಚಿಗೆ ಮಳೆ ಬೇಕಾಗುವದು.

ಇದುವರೆಗೆ ಮೈಸೂರು ರಾಜ್ಯದ ಮೂರು ಮುಖ್ಯವಾದ ಸ್ವಾಭಾವಿಕ ವಿಭಾಗಗಳಲ್ಲಿ ನೀವು ಸಂಚರಿಸಿರುವಿರಿ. ಮಲೆನಾಡ ಬೆಟ್ಟಗಳನ್ನು ಏರಿ ಇಳಿದಿರಿ. ತಪ್ಪಲು ಪ್ರದೇಶದಲ್ಲಿ ತಿರುಗಾಡಿದಿರಿ. ಬೆಳವಲದ ಬಯಲು ಪ್ರದೇಶವನ್ನು ನೋಡಿದಿರಿ. ನಮ್ಮ ರಾಜ್ಯದ ಭೂರಚನೆಯಲ್ಲಿ ಭಾರತದ ಭೂರಚನೆಯ ಎಲ್ಲ ಪ್ರಕಾರಗಳೂ ತುಸುಮಟ್ಟಿಗೆ ಕಂಡು ಬರುವವು. ಈ ರಾಜ್ಯದಲ್ಲಿಯ ಜನಜೀವನದ ವಿವಿಧತೆಗೆ ಭೂರಚನೆಯೂ ಒಂದು ಬಗೆಯಿಂದ ಹೇಗೆ ಕಾರಣವಾಗಿದೆ ?— ಎಂಬುದನ್ನು ಇನ್ನೊಂದು ಪ್ರಕರಣದಲ್ಲಿ ವಿಶದವಾಗಿ ತಿಳಿದುಕೊಳ್ಳುವಿರಂತೆ.

ನಮ್ಮ ರಾಜ್ಯದ ಪ್ರಾಕೃತಿಕ ಸ್ವರೂಪವನ್ನು ತಿಳಿಯ ಕೊಳ್ಳುವ ಅನುಕೂಲತೆಗಾಗಿ, ಹೀಗೆ ಮೂರು ಸಾಮಾನ್ಯ ವಿಭಾಗಗಳನ್ನಾಗಿ ಮಾಡಿದೆ. ಆದರೆ, ಈ ಪ್ರಾಕೃತಿಕ ವಿಭಾಗಗಳಿಗೆ ನಿರ್ದಿಷ್ಟವಾದ ಮೇರೆಗಳಿರುವದಿಲ್ಲ. ನಿಮ್ಮ ಹೊಲದ ಬಾಂದುಕಲ್ಲುಗಳಂತೆ, ನಿಸರ್ಗನಿರ್ಮಿತವಾದ ಈ ಪ್ರದೇಶಗಳಿಗೆ ಬಾಂದುಕಲ್ಲುಗಳನ್ನು ಹಾಕಲುಬಾರದು. ‘ ಇಲ್ಲಿಗೆ ಮಲೆನಾಡು ಮುಗಿಯಿತು— ಮೈದಾನ (ಬೆಳವಲದಬಯಲು) ಆರಂಭವಾಯಿತು ’ ಎಂದು ಒಂದು ಸ್ಥಳದಲ್ಲಿ ಕೈಗಂಬವನ್ನು ನಿಲ್ಲಿಸಿ ತೋರಿಸುವದು ಶಕ್ಯವಾಗದು.

ಈ ಪ್ರದೇಶಗಳು ಒಂದರಲ್ಲಿ ಒಂದು ಕ್ರಮೇಣ ನುಸುಳಿಕೊಂಡಿರುವವು. ಬಯಲು ಪ್ರದೇಶದಿಂದ ಮಲೆನಾಡಿನ ಕಡೆಗೆ ನೀವು ಪ್ರವಾಸ ಮಾಡಿರಿ. ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗಿ ಬನ್ನಿರಿ. ನೀವು ಮಲೆನಾಡಿನ ಕಡೆಗೆ ಹೋದಂತೆ, ಗಿಡಗಂಟಿಗಳು, ಪೈರುಗಳು, ಹವೆ ಮಳೆಗಳು ಹೇಗೆ ಕ್ರಮೇಣ ಹೆಚ್ಚು ಕಡಿಮೆಯಾಗುವವೆಂಬುದು ನಿಮಗೆ ತಿಳಿದುಬರುವದು. ಬೇವು-ಜಾಲಿಗಳು ನೀವು ಮಲೆನಾಡಿನ ಕಡೆಗೆ ಹೋದಂತೆ ಮಾಯವಾಗುವವು. ಹರವಾದ ಎಲೆಯ ಹಸಿರು ಬನಗಳು ಹೆಚ್ಚಿಚ್ಚು ದಟ್ಟವಾಗುತ್ತ ಹೋಗುವವು.

### ಅಭ್ಯಸನಗಳು

1. ಭಿನ್ನವಾಗಿರುವ ಭೂರಚನೆಗೆ ಕಾರಣಗಳೇನು ? ಇವುಗಳಿಗೆ 'ಪ್ರಾಕೃತಿಕ ಸ್ವರೂಪ' ವೆಂದು ಏಕೆ ಹೇಳುವರು ?
2. ನಮ್ಮ ರಾಜ್ಯದಲ್ಲಿ ಮುಖ್ಯವಾದ ಸ್ವಾಭಾವಿಕ ಪ್ರದೇಶಗಳು ಯಾವು ? ರಾಜ್ಯದ ಯಾವ ಯಾವ ಭಾಗಗಳಲ್ಲಿ ಅವು ನೆಲೆಸಿವೆ ?
3. ನೀವು ಯಾವ ಪ್ರಾಕೃತಿಕ ವಿಭಾಗದಲ್ಲಿ ವಾಸಿಸುವಿರಿ? ಏಕೆ ? ಭೂರಚನೆಯು ಹೇಗಿದೆ ?
4. 'ಪರಶುರಾಮ ಕ್ಷೇತ್ರ' ವೆಂದು ಯಾವ ಭಾಗಕ್ಕೆ ಕರೆಯುವರು ? ಏಕೆ ?
5. 'ಸಹ್ಯಾದ್ರಿಯು ಒಂದು ಪರ್ವತವಾಗಿರುವದಿಲ್ಲ'-ಏಕೆ ?
6. ಘಟ್ಟಗಳೆಂದರೇನು ? ಅವುಗಳ ಉಪಯೋಗವೇನು ? ನಮ್ಮ ರಾಜ್ಯದಲ್ಲಿಯ ಕೆಲವು ಹೆಸರಾದ ಘಟ್ಟಗಳು ಯಾವವು ?
7. ಬೆಟ್ಟಗಳ ಉಪಯೋಗಗಳೇನು ?
8. 'ಮೈದಾನದ' (ಬಯಲು ಪ್ರದೇಶ) ಎರೆಯ ಮಣ್ಣು ಹೇಗೆ ಸಿದ್ಧವಾಗಿದೆ ?

## 5. : : : : : : : : : : : ಹವಾಮಾನ

" ಏನು ? ಬಟ್ಟೆ ಬದಲಿಸಿಬಿಟ್ಟಿರಾ ? ಗುರುತು ಹತ್ತದಂತಾಗಿದೆ. ಮುಂಜಾನೆ ತಲೆಗೊಂದು, ಕೊರಳಿಗೊಂದು.... ಏನೇನೊ ಸುತ್ತಿಕೊಂಡು ಬಣ್ಣ ಬಣ್ಣವಾಗಿ ಕಾಣುತ್ತಿದ್ದೀರಿ".

" ಹೌದು. ಮುಂಜಾನೆ ಹವೆ ಬಹಳೇ ತಂಪಾಗಿತ್ತು ನೋಡಿ. ಮೈ

ನಡುಗುವಂತಾಯಿತು. ಮಧ್ಯಾಹ್ನ ಹವೆ ಬಹಳಾಗಿ ಬಿಟ್ಟಿದೆ. ಸೆಕೆಯಾಗ ಹತ್ತಿದೆ. ನಿಮಗೂ, ಸೆಕೆ ಎನಿಸುವದಿಲ್ಲವೆ ?"

ನಿಜ. ನಮಗೂ ನಿಮಗೂ, ಎಲ್ಲರಿಗೂ ಹವೆಯ ಬಗ್ಗೆ ಈ ರೀತಿಯ ಅನುಭವವು ನಿತ್ಯವೂ ಉಂಟಾಗುವದು. ಮುಂಜಾವಿನ ಹವೆ ಬೇರೆ, ಮಧ್ಯಾಹ್ನದ ಹವೆ ಬೇರೆ, ಸಂಜೆಗೆ ಬೇರೆ, ಹೀಗೆ ಹವೆಯ ಸ್ಥಿತಿಗತಿಯು ಗಳಿಗೆ ಗಳಿಗೆಯಲ್ಲಿ ಬದಲಾಗುವದನ್ನು ನಾವು ಕಾಣುವೆವು. ಆಗಾಗ್ಗೆ ಹೀಗೆ ಬದಲಿಸುವ ಹವೆಗೆ ಆಯಾ ಕಾಲದ 'ತಾತ್ಕಾಲಿಕ ಹವೆ' ಯೆಂದು ಹೇಳಬಹುದು.

ಇದೇ ಮೇರೆಗೆ ಋತುಮಾನಗಳಲ್ಲಿ ಹವೆಯ ಪರಿಸ್ಥಿತಿಯು ಬದಲಾಗುವದನ್ನೂ ನಾವು ಅನುಭವಿಸುವೆವು. ಚಳಿಗಾಲದಲ್ಲಿ ನಸುಕಿನೊಳಗೆ ಏಳಲು ಒಲ್ಲೆನಿಸುವದು. ಎಷ್ಟು ಬಟ್ಟೆ ಹಾಕಿಕೊಂಡರೂ ಚಳಿ ಬಿಡುವದಿಲ್ಲ. ಉರಿ ಕಾಯಿಸಿಕೊಳ್ಳಬೇಕೆನಿಸುವದು. ಉಣ್ಣುವದು, ಕುಡಿಯುವದು ಎಲ್ಲವೂ ಬಿಸಿಬಿಸಿಯಾಗಿದ್ದರೆ ಹಿತವೆನಿಸುವದು. ನಮ್ಮ ದೇಶದ ಚಳಿಗಾಲವು ನೂರು ಪಾಲಿಗೆ ಬೇಕು. ಕೆಲವು ಶೀತ ಪ್ರದೇಶಗಳಲ್ಲಿ ಚಳಿಗಾಲದ ಚಳಿಯು ಹೇಳಲು ತೀರದು. ಚಳಿಗಾಗಿ ಜನರ ಜೀವನವೆ ಅಲ್ಲಿ ಕಟ್ಟಾಗುವದು.

ಬೇಸಿಗೆಯಲ್ಲಿ ಹವೆಯ ಪರಿಸ್ಥಿತಿಯು ಇದಕ್ಕೆ ವಿಪರೀತವಾಗಿರುವದು. ತೆಳುವಾದ ಬಟ್ಟೆ ಕೂಡ ಬೇಸರವೆನಿಸುವದು. ಗಾಳಿಗೆ ಮೈಯೊಡ್ಡಿ ಬಯಲಲ್ಲಿ ಕೂಡಬೇಕೆನಿಸುವದು. ತಂಪಾದ ಪೇಯಗಳೆ ಎಲ್ಲರಿಗೂ ಬೇಕಾಗುವವು.

ಬೇರೆ ಬೇರೆ ಪ್ರದೇಶಗಳಲ್ಲಿ ಚಳಿಗಾಲ ಹಾಗು ಬೇಸಿಗೆ ಕಾಲಗಳ ಹವೆಯ ಪರಿಸ್ಥಿತಿಯನ್ನು ದೀರ್ಘಕಾಲದವರೆಗೆ ನಿರೀಕ್ಷಿಸುವರು. ಈ ಋತುಮಾನಗಳಲ್ಲಿ ಹವೆಯ ಉಷ್ಣತೆಯ ಪರಿಮಾಣ ವರುಷಕ್ಕೆ ಎಷ್ಟೆಂಬುದನ್ನು ತಿಳಿದುಕೊಳ್ಳುವರು. ದೀರ್ಘಕಾಲದ ನಿರೀಕ್ಷಣೆಯಿಂದ ಚಳಿಗಾಲ ಬೇಸಿಗೆಗಳಲ್ಲಿಯ ಹವೆಯ ಸರಾಸರಿ ಪರಿಸ್ಥಿತಿಯನ್ನು ಗೊತ್ತುಪಡಿಸುವರು. ಇದಕ್ಕೆ ಆ ಪ್ರದೇಶದ 'ಹವಾಮಾನ' ವೆಂದು ಹೇಳುವದುಂಟು. ತಾತ್ಕಾಲಿಕ ಹವೆಯು ಅಸ್ಥಿರವಾದುದು. ಆದರೆ ಹೀಗೆ ಗೊತ್ತುಪಡಿಸಿದ ಹವಾಮಾನವು ಸ್ಥಿರವಾದುದು.

ಹವೆಯ ಬಗ್ಗೆ ಹೇಳುವಾಗ್ಗೆ ಸೆಕೆ, ಚಳಿ, ಕಡಿಮೆ— ಉಷ್ಣತೆ, ಹೆಚ್ಚು ಉಷ್ಣತೆಯೆಂದು— ಬಳಕೆಯ ಮಾತಿನಲ್ಲಿ ನಾವು ಹೇಳಿಬಿಡುವೆವು. ಆದರೆ ಭೂಗೋಲ ವಿಷಯದ ಅಭ್ಯಾಸದಲ್ಲಿ, ಉಷ್ಣತೆಯ ಹೆಚ್ಚು ಕಡಿಮೆ

ಗಳನ್ನು ಅಂಶಗಳಿಂದ ವಿವರಿಸುವರು. ಹವೆಯು ಹೆಚ್ಚು ಕಡಿಮೆ ಉಷ್ಣತೆಯನ್ನು ಹೇಗೆ ಕಂಡುಹಿಡಿಯುವರು? ಅದನ್ನು ಹೇಗೆ ಅಳೆಯುವರು? ಎಂಬುದು ನಿಮಗೆ ಗೊತ್ತಿರಲಿಕ್ಕಿಲ್ಲ. ಯಾರಿಗಾದರೂ ಜ್ವರ ಬಂದರೆ ಮೈ ಕಾಯುವದು. ರೋಗಿಯನ್ನು ಪರೀಕ್ಷಿಸುವ ಡಾಕ್ಟರರು ಒಂದು ಕಾಜಿನ ಕೊಳವೆಯಂಥ ಸಾಧನದಿಂದ ಇಂತಿಷ್ಟು ಜ್ವರವಿದೆ, ಜ್ವರ ಎರಿದೆ, ಜ್ವರ ಇಳಿದಿದೆ—ಎಂದು ಶರೀರದಲ್ಲಿಯ ಉಷ್ಣತೆಯನ್ನು ಅಳೆದು ಹೇಳುವದನ್ನು ನೀವು ಎಷ್ಟೋ ಸಲ ನೋಡಿರಬಹುದು. ಇದೇ ಮೇರೆಗೆ ಇದಕ್ಕಿಂತಲೂ ದೊಡ್ಡದಾದ ಒಂದು ಸಾಧನದಿಂದ ಹವೆಯಲ್ಲಿಯ ಉಷ್ಣತೆಯನ್ನು ಅಳೆಯುವರು. ಈ ಸಾಧನಕ್ಕೆ 'ಥರ್ಮಾಮೀಟರ'—ಉಷ್ಣತಾಮಾಪಕವೆಂದು ಕರೆಯುವರು. ಹವೆಯೊಳಗಿನ ಉಷ್ಣತೆಯಿಂದ ಇದರಲ್ಲಿರುವ ಸಣ್ಣ ಕೊಳವೆಯೊಳಗಿನ ಪಾರಜವು ಕಾಯ್ದು ಪ್ರಸರಣವಾಗಿ ಮೇಲಕ್ಕೆ ಏರುವದು. ಪಾರಜದ ಏರಿಳಿಕೆಯಿಂದಲೆ, ಉಷ್ಣತೆಯ ಏರಿಳಿಕೆಗಳನ್ನು ಗೊತ್ತು ಪಡಿಸುವರು. ಈ ಏರಿಳಿತಗಳು ಅಂಶಗಳ ರೂಪಗಳಲ್ಲಿರುವವು. 70 ಅಂಶಗಳ ಕೆಳಗಿನ ಉಷ್ಣತೆಗೆ ತಂಪು ಹವೆ ಎನ್ನಬಹುದು. 70 ರಿಂದ 90 ಅಂಶಗಳ ವರೆಗೆ ಉಷ್ಣ ಹವೆ. ಅದಕ್ಕೂ ಹೆಚ್ಚಿಗಿದ್ದರೆ ಬಹಳೇ ಉಷ್ಣ ಹವೆ ಎನ್ನುವರು. ನಿಮ್ಮ ಗುರುಗಳು ಈ ಉಷ್ಣತಾಮಾಪಕವನ್ನು ತಂದು ತೋರಿಸುವರು. ಅದರಲ್ಲಿ ಅಂಶಗಳನ್ನು ತೋರಿಸುವ ಅಂಕಿಗಳನ್ನು ನೀವು ಕಾಣುವಿರಿ.



ಒಂದು ಪ್ರದೇಶದ ಬೇಸಿಗೆ—ಚಳಿಗಾಲಗಳ ತೀರ ಹೆಚ್ಚಿನ ಉಷ್ಣತೆ ಎಷ್ಟು ಅಂಶವಾಗಿದೆ? ಎಂಬುದನ್ನು ದೀರ್ಘಕಾಲದ ವರೆಗೆ ನಿರೀಕ್ಷಿಸಿ, ಆ ಪ್ರದೇಶದ ಬೇಸಿಗೆ ಹಾಗು ಚಳಿಗಾಲದ '**ತೀರ ಹೆಚ್ಚಿನ ಉಷ್ಣತಾಮಾನ**' ಹಾಗೂ '**ತೀರ ಕಡಿಮೆ ಉಷ್ಣತಾಮಾನ**' ಗಳನ್ನು ಗೊತ್ತುಪಡಿಸುವರು. ಇವೆರಡರಲ್ಲಿಯ ಅಂತರವು ಬಹಳೇ ಹೆಚ್ಚಿಗಿದ್ದರೆ, ಆ ಪ್ರದೇಶದ ಹವೆಯು '**ವಿಷಮ**' ವಾಗಿರುವದೆಂದು ಹೇಳುವರು. ವಿಷಮ ಹವೆಯ ಪ್ರದೇಶದಲ್ಲಿ ಹಗಲು ರಾತ್ರಿಗಳ ಉಷ್ಣತಾಮಾನಗಳ ಅಂತರವೂ ಬಹಳ ಹೆಚ್ಚಿಗಿರುವದು.

ತೀರ ಹೆಚ್ಚು, ತೀರ ಕಡಿಮೆ ಉಷ್ಣತಾಮಾನಗಳ ನಡುವಿನ ಅಂತರವು ಕಡಿಮೆ ಯಾಗಿದ್ದರೆ (ಸುಮಾರು 30 ಅಂಶಗಳಷ್ಟು ಮಾತ್ರ) ಅಂಥ ಪ್ರದೇಶದಲ್ಲಿ 'ಸಮ ಹವೆ' ಯಿರುವದೆಂದು ಹೇಳುವೆವು. ಹವೆಯು ಉಷ್ಣತೆಯನ್ನು ಹೆಚ್ಚಿ

ಮೈಸೂರು ರಾಜ್ಯ
ತಾಲೂಕುವಾರ ವಾರ್ಷಿಕ ಸರಾಸರಿ ಮಳೆ

ಸಲು ಇಲ್ಲವೆ ತಗ್ಗಿಸಲು ಕೆಲವು ಭೌಗೋಲಿಕ ಸಂಗತಿಗಳು ಇರುವವು. ಮೇಲಿನ ಇಯತ್ತೆಯಲ್ಲಿ ಗುರುಗಳು ನಿಮಗೆ ಆ ವಿವರಗಳನ್ನೆಲ್ಲ ತಿಳಿಸುವರು. ಒಂದು ಸಂಗತಿಯನ್ನು ಮಾತ್ರ ನೀವಿಲ್ಲಿ ನೆನಪಿನಲ್ಲಿ ಇಡಬೇಕು. ಸಮುದ್ರದ ಅಂಚಿಗೆ ಹೊಂದಿರುವ ತೀರ ಪ್ರದೇಶದಲ್ಲಿ ಹವೆಯು 'ಸಮ' ವಾಗಿರುವದು. ಸಮುದ್ರ ತೀರದಿಂದ ದೂರವಾಗಿರುವ ಒಳನಾಡಿನ ಹವೆಯು 'ವಿಷಮ' ವಾಗಿರುವದು.

**ಮಳೆ:—** ಒಂದು ಪ್ರದೇಶದ ಹವಾಮಾನದ ಬಗ್ಗೆ ಹೇಳುವಾಗ್ಗೆ ಅಲ್ಲಿಯ ಮಳೆಯ ಬಗ್ಗೆಯೂ ಹೇಳುವುದುಂಟು. ನಮ್ಮ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಹೆಚ್ಚು ಕಡಿಮೆ ಮಳೆಯಾಗುವದು. ಮಳೆಯ ಪ್ರಮಾಣದಲ್ಲಿ ಹೀಗೇಕೆ ಹೆಚ್ಚು ಕಡಿಮೆಯಾಗುವದು?— ಎಂಬುದನ್ನು ನೀವು ತಿಳಿದು ಕೊಳ್ಳಬೇಕು. ಮಳೆಗಾಲದಲ್ಲಿ ಗಾಳಿಗಳು ಮೋಡಗಳನ್ನು ಹೊತ್ತು ತರುವದನ್ನು ನೀವು ನೋಡಿರುವಿರಿ. ಭಾರತದಲ್ಲಿ, ಹಾಗೂ ಅದರದೇ ಒಂದು ಭಾಗವಾಗಿದ್ದ ನಮ್ಮ ಮೈಸೂರು ರಾಜ್ಯದಲ್ಲಿ, ಮುಖ್ಯವಾಗಿ ಬೀಸುವ ಗಾಳಿಗಳೆಂದರೆ, 'ಮನ್ಸೂನ' ಗಾಳಿಗಳು. ಇವುಗಳಿಗೆ 'ಹಂಗಾಮಿ' ಗಾಳಿಗಳೆಂತಲೂ ಕರೆಯುವರು. ಹತ್ತಿ, ದ್ರಾಕ್ಷಿ, ಮಾವಿನಹಣ್ಣು ಕೆಲವೊಂದು ತಿಂಗಳುಗಳಲ್ಲಿ ಮಾತ್ರ ಹೆಚ್ಚಾಗಿ ಪೇಟೆಗೆ ಮಾರಲು ಬರುವದು. ಆ ಅವಧಿಗೆ ಹತ್ತಿಯ 'ಮೋಸಮ್', ದ್ರಾಕ್ಷೆಯ ಮೋಸಮ್ ಎಂದು ಹೇಳುವುದುಂಟು. ಹಾಗೆಯೇ ಈ ಗಾಳಿಗಳಿಗೂ ಒಂದು 'ಮೋಸಮ್' ಇರುವದು. ನಿಯಮಿತವಾದ ಅವಧಿಯಲ್ಲಿ ಅವು ತಪ್ಪದೆ ಬೀಸುವವು. ನಮ್ಮ ಮೈಸೂರು ರಾಜ್ಯಕ್ಕೆ ಮಾತ್ರವಲ್ಲ, ಒಟ್ಟು ಭಾರತಕ್ಕೆಲ್ಲ ಈ ಗಾಳಿಗಳೇ ಮಳೆಯನ್ನು ತರುವವು, ಒದಗಿಸುವವು. ಈ ಮನ್ಸೂನ ಗಾಳಿಗಳಲ್ಲಿ ಎರಡು ಪ್ರಕಾರಗಳು:— 1) ನೈರುತ್ಯ ಹಾಗೂ ಈಶಾನ್ಯ ಗಾಳಿಗಳು.



ಗಾಳಿಗಳು ಬೀಸುವ ದಿಕ್ಕಿನಿಂದ ಅವುಗಳಿಗೆ ಹೆಸರನ್ನು ಕೊಡುವರು. ನೈರುತ್ಯ ಮನ್ಸೂನ ಗಾಳಿಗಳೇ ನಮಗೆ ಮುಖ್ಯವಾದವುಗಳು. ಈ ಗಾಳಿಗಳು ತರುವ ಮಳೆಯಿಂದಲೇ ನಮ್ಮ ಕೆರೆ ಭಾವಿಗಳು ತುಂಬುವವು. ಹೊಳೆ ಹಳ್ಳಗಳು ಸೂಸಿ ಹರಿಯುವವು. ಕಾಡುಗಳು ಬೆಳೆಯುವವು. ಬಿತ್ತಿದ ಬೆಳೆಗಳು ಕೈಗೆ ಬರುವವು. ಸಮಗ್ರ ದೇಶದ ಜೀವನಕ್ಕೆ ಈ ಗಾಳಿಗಳೆ ಮುಖ್ಯ ಆಧಾರ ವಾಗಿವೆ. ಈಶಾನ್ಯ ಗಾಳಿಗಳಿಂದ ನಮ್ಮ ದೇಶಕ್ಕೂ, ನಮ್ಮ ರಾಜ್ಯಕ್ಕೂ ಹೆಚ್ಚಾಗಿ ಪ್ರಯೋಜನವಿಲ್ಲವೆಂತಲೇ ಹೇಳಬಹುದು. ನೈಋುತ್ಯ ಮನ್ಸೂನ ಗಾಳಿಗಳು ಬಹು ದೂರದ ವರೆಗೆ ಮಹಾಸಾಗರಗಳ ಮೇಲೆ ಸಂಚರಿಸಿ ಬರು ವವು. ಆದರಿಂದ ಉಗಿಯ ಮೊಟ್ಟೆಯನ್ನೇ ಅವು ಹೊತ್ತು ತರುವವು. ನಮ್ಮ ರಾಜ್ಯದ ಪಶ್ಚಿಮ ಅಂಚಿಗೆ ನೆಲೆಸಿದ ಪಶ್ಚಿಮ ಘಟ್ಟಗಳು ಅವುಗಳನ್ನು ತಡೆಯುವವು. ಬೆಟ್ಟಗಳನ್ನು ಏರುವಾಗ್ಗೆ ತಂಪು ತಗಲಿ ವಿಪುಲವಾದ ಮಳೆ ಗರೆಯುವವು. ಇಲ್ಲಿಯೆ ತಮ್ಮೊಡನೆ ತಂದಿರುವ ಉಗಿಯನ್ನೆಲ್ಲ ಮಳೆಯ ರೂಪದಲ್ಲಿ ಕೊಟ್ಟು ಈ ಗಾಳಿಗಳು ಮುಂದೆ ಸಾಗುವವು. ಆಚೆಗಿರುವ ಪೂರ್ವದ ತಪ್ಪಲಿನಲ್ಲಿ ಇವು ಒಣಗಾಳಿಗಳಾಗಿ ಬೀಸುವವು.

ಹವೆಯ ಉಷ್ಣತೆಯನ್ನು ಅಳೆಯುವಂತೆ, ಮಳೆಯ ಪರಿಮಾಣವನ್ನೂ ಅಳೆಯುವರು. ಇದಕ್ಕೊಂದು ಬೇರೆ ಸಾಧನವಿದೆ. ಇದಕ್ಕೆ ' ರೇನಗೇಜ ' ಅಂದರೆ ' ಪರ್ಜನ್ಯಮಾಪಕ' ವೆಂಬ ಹೆಸರು. ಗೊತ್ತುಪಡಿಸಿದ ಅಳತೆಯ ಒಂದು ಲಾಳಿಕೆಯಲ್ಲಿ ಮೋಡಗಳಿಂದ ಬೀಳುವ ಮಳೆಯ ನೀರನ್ನು ಒಂದು ಸೀಸೆಯಲ್ಲಿ ಸಂಗ್ರಹಿಸುವರು. ಅಳೆ ಯುವ ಗಾಜಿನ ಪಾತ್ರೆಯಿಂದ ಈ ಸೀಸೆಯಲ್ಲಿ ಸಂಗ್ರಹಿಸಿದ ನೀರನ್ನು ಇಂಚುಗಳಲ್ಲಿ, ಸೆಂಟಿಮಿಟರುಗಳಲ್ಲಿ ಅಳೆಯುವರು. ಎತ್ತರವಾದ ಸ್ಥಳದಲ್ಲಿ



ಹೊರಗಿನ ನೀರು ಒಳಸೇರದಂತೆ ಈ ಪರ್ಜನ್ಯಮಾಪಕಗಳನ್ನು ಇಡುವರು. ಸುತ್ತಲೂ ಒಂದು ಚಿಕ್ಕ ಕಟಾಂಜನವಿರುವದು. ನಿಮ್ಮೂರಿನ ಅಂಚೇ ಕಚೇರಿಯ ಇಲ್ಲವೆ ದವಾಖಾನೆಯ ಆವಾರದಲ್ಲಿ ಮಳೆಯನ್ನು ಅಳೆಯುವ ಈ ಸಾಧನವನ್ನು ನೀವು ನೋಡಿರಬಹುದು. ಒಂದು ವರುಷದಲ್ಲಿ ಒಟ್ಟು

10 ಇಂಚಿಗಿಂತಲೂ ಕಡಿಮೆ ಮಳೆಯಾದರೆ, ಅದು ತೀರ ಕಡಿಮೆ ಮಳೆ. ಇಷ್ಟು ತೀರ ಕಡಿಮೆ ಮಳೆಯಾಗುವ ಪ್ರದೇಶವು ನಿರ್ಜಲ ಪ್ರದೇಶ, ಅರ್ಧ ಮರ್ಧ ಮರುಭೂಮಿಯೆಂದೇ ಹೇಳಬಹುದು. 10 ರಿಂದ 20 ಇಂಚುಗಳ ವರೆಗೆ ‘ ಸಾಧಾರಣ ಮಳೆ,’ 20 ರಿಂದ 40 ಇಂಚುಗಳ ಮಳೆ ‘ ಸಾಕಷ್ಟು ಮಳೆ,’ 40 ರಿಂದ 80 ಇಂಚುಗಳ ವರೆಗೆ ‘ ಸಮೃದ್ಧ ಮಳೆ,’ 80 ಇಂಚುಗಳಿಗಿಂತಲೂ ಹೆಚ್ಚಾಗುವ ಮಳೆ ವಿಪುಲವಾದ, ‘ ಅತಿಶಯವಾದ ಮಳೆ ’ ಎನಿಸಿಕೊಳ್ಳುವದು.

ನಮ್ಮ ದೇಶದಲ್ಲಿ ಈ ಮಳೆಗಾಳಿಗಳು ಜೂನ ತಿಂಗಳಿನ ಮೊದಲನೇ ವಾರದಿಂದ ಬೀಸಲು ಪ್ರಾರಂಭಿಸುವವು. ಸುಮಾರು ಜೂನ 4 ನೇ ದಿನಾಂಕಕ್ಕೆ ಮೈಸೂರು ರಾಜ್ಯದ ಮುಖ್ಯ ಬಂದರವಾಗಲಿರುವ ಮಂಗಳೂರಿಗೆ ಅವು ಮುಟ್ಟುವವು. ಜೂನ 6 ನೇ ಅಥವಾ 7 ನೇ ದಿನಾಂಕವು ನಮ್ಮ ಪಂಚಾಂಗದಲ್ಲಿ ಹೇಳುವ ‘ ಮೃಗ ಪ್ರವೇಶ ’ದ ದಿನವಾಗುವದು. ಸಾಮಾನ್ಯವಾಗಿ ಆ ದಿನ ಕರಾವಳಿಯ ಊರುಗಳಲ್ಲಿ ಗುಡುಗು ಮಿಂಚುಗಳಿಂದ ಕೂಡಿದ ಭಾರೀ ಮಳೆಯಾಗುವದು. ತಪ್ಪಲಿನ ಭಾಗದಲ್ಲಿ ಕೂಡ, ಬೇಸಿಗೆಯ ಸೆಕೆಯು ಅಂದು ಮಾಯವಾಗಿ, ಆರ್ದ್ರತೆಯಿಂದ ಹವೆಯು ತಂಪಾಗುವದು. ಹವೆಯಲ್ಲಿ ಉಂಟಾಗುವ ಈ ಆಕಸ್ಮಿಕ ವ್ಯತ್ಯಾಸವು ಶರೀರಕ್ಕೆ ಬಾಧಿಸಬಾರದೆಂದು ಹಿರಿಯರು ಇಂಗು-ಬೆಲ್ಲವನ್ನು ತಿನ್ನಲು ಕೊಡುವರು. ನಿಮಗೆ ಇದು ನೆನಪಿನಲ್ಲಿರುವದೆ? ಜೂನ ಮೊದಲನೆಯ ವಾರದಿಂದ ಸಪ್ಟೆಂಬರ ಕೊನೆಯ ವಾರದ ವರೆಗೆ ಈ ನೈರುತ್ಯಮನ್ಸೂನ ಗಾಳಿಗಳು ಈ ದೇಶದಲ್ಲಿ ಬೀಸುವವು. ಇವುಗಳಿಂದ ಒದಗುವ ಮಳೆಗೆ ‘ ಮುಂಗಾರಿ ಮಳೆ ’ ಯೆನ್ನುವರು. ‘ ಕಾರ್ ’ ಎಂದರೆ ಮಳೆ.

ಮುನ್+ಕಾರ್, ಮೊದಲು ಬರುವ ಮಳೆಯೋ ಮುಂಗಾರು ಮಳೆಯು. ಹಿಂದಿನಿಂದ ಬರುವ ಈಶಾನ್ಯ ಮಾನ್ಸೂನಿನ ಮಳೆಗೆ 'ಹಿಂಗಾರಿ ಮಳೆ' ಯೆನ್ನುವರು. ನಮ್ಮ ರಾಜ್ಯದ ಒಕ್ಕಲಿಗರು ಈ ಎರಡೂ ಪ್ರಕಾರದ ಮಳೆಗಳಿಂದ ಪ್ರಯೋಜನವನ್ನು ಪಡೆಯುವರು.

ಇದುವರೆಗೆ ಹವಾಮಾನ, ಗಾಳಿ, ಮಳೆಗಳಿಗೆ ಸಂಬಂಧಿಸಿದ ಕೆಲ ವೊಂದು ಅಗತ್ಯವಾದ ಸಂಗತಿಗಳನ್ನು ನಿಮಗೆ ಹೇಳಿಕೊಟ್ಟಿದೆ. ಇವುಗಳನ್ನು ನೀವು ಚೆನ್ನಾಗಿ ತಿಳಿದುಕೊಳ್ಳಬೇಕು, ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಅಂದರೆ ನಮ್ಮ ಮೈಸೂರು ರಾಜ್ಯದ ಬೇರೆ ಬೇರೆ ಭಾಗಗಳ ಹವಾಮಾನ ಹಾಗೂ ಬೆಳೆಯ ಸ್ಥಿತಿಗಳನ್ನು ತಿಳಿದುಕೊಳ್ಳಲು ನಿಮಗೆ ಒಳ್ಳೇ ಸಹಾಯ ವಾಗುವದು.

ಮೈಸೂರು ರಾಜ್ಯದ ಮೂರು ಮುಖ್ಯ ಸ್ವಾಭಾವಿಕ ಪ್ರದೇಶಗಳನ್ನು ನೀವು ಈಗಾಗಲೇ ಗುರುತಿಸಬಲ್ಲಿರಿ. ಕಡಲ ತೀರದ ನಮ್ಮ ರಾಜ್ಯದ ಕರಾ ವಳಿ ಪ್ರದೇಶದಿಂದಲೆ ನಮ್ಮ ಸಂಚಾರವನ್ನು ಸುರುವು ಮಾಡೋಣ. ನಮ್ಮ ರಾಜ್ಯದ ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳು ಈ ಭಾಗದಲ್ಲಿ ಬರುವವು. ಇಲ್ಲಿಯ ಪ್ರಾಕೃತಿಕ ಸ್ವರೂಪವು ನಿಮಗೆ ಗೊತ್ತಿದೆ. ಒಂದೆಡೆಗೆ ಅರಬೀ ಸಮುದ್ರದ ಅಪಾರವಾದ ಜಲರಾಶಿ, ಮತ್ತೊಂದೆಡೆ ಅಖಂಡವಾಗಿ ಹಬ್ಬಿದ ಸಹ್ಯಾದ್ರಿಯ ಉನ್ನತ ಬೆಟ್ಟಗಳು. ಇವೆರಡೂ ಪ್ರಾಕೃತಿಕ ಸಂಗತಿಗಳು ಕರಾವಳಿಯ ಪ್ರದೇಶದ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ. ಪರ್ವತ ಗಳು ಮಳೆಗಾಳಿಗಳನ್ನು ತಡೆಗಟ್ಟುವವು. ಅದರಿಂದ ಇಲ್ಲಿಯ ಹವೆಯಲ್ಲಿ ಉಷ್ಣತೆಯೊಡನೆ ಉಗಿಯೂ ಬೆರೆತುಕೊಳ್ಳುವದು. ಈ ಉಗಿಯಿಂದ ಸೆಕೆ ಹೆಚ್ಚಾಗುವದು. ಮೈ ಬೆವರುವದು. ಆದರೆ ಸಂಜೆಯ ಸಮಯದಲ್ಲಿ ಸಮುದ್ರದ ಕಡೆಯಿಂದ ತಂಪು ಗಾಳಿಗಳು ಬೀಸತೊಡಗುವವು. ಈ ತಂಪು ಗಾಳಿಗಳು ಹಗಲಿನ ಹಾಗೂ ಬೇಸಿಗೆಯ ಸೆಕೆಯನ್ನು ಕಡಿಮೆ ಮಾಡುವವು. ನೆಲದ ಕಡೆಯಿಂದ ಬೀಸುವ ಭೂಗಾಳಿಗಳು ರಾತ್ರಿಯ ಚಳಿಯನ್ನು ಕಡಿಮೆ ಮಾಡುವವು. ಸಮುದ್ರ ತೀರದ ಜನರಿಗೆ ಸಂಜೆಯ ಈ ಸುಳಿಗಾಳಿಗಳು ಒಳ್ಳೇ ಸುಖದಾಯಕವಾಗಿರುವವು. ಈ ಪ್ರದೇಶವು 'ಸಮ' ಹವೆಯ ಪ್ರದೇಶವು. ಸಮಹವೆಯೆಂದರೆ ಏನೆಂಬುದನ್ನು ಹಿಂದೆ ನಿಮಗೆ ಹೇಳಿ ಕೊಟ್ಟಿದೆ. ಕರಾವಳಿ ಪ್ರದೇಶದ ಹವಾಮಾನದಲ್ಲಿ ಒಂದು ವಿಶೇಷ ಸಂಗತಿ

ಯನ್ನು ನೀವು ನಿರೀಕ್ಷಿಸಬಹುದು. ಚಳಿಗಾಲದಲ್ಲಿ ಇಲ್ಲಿ ಚಳಿಯು ಬಹಳ ಕಡಿಮೆಯಾಗಿರುವದು. ಚಳಿಗಾಲದ ಅವಧಿಯೂ ಕಡಿಮೆ–ಒಂದೆರಡು ತಿಂಗಳು ಮಾತ್ರ. ದಕ್ಷಿಣಕ್ಕೆ ಹೋದಂತೆ ಚಳಿಗಾಲವೇ ಇಲ್ಲವೆನ್ನುವಷ್ಟು ಚಳಿಗಾಲದ ಅವಧಿಯು ಇಲ್ಲಿ ಕಡಿಮೆಯಾಗಿರುವದು. ಮಳೆಗಾಲದಲ್ಲಿ ಸೂರ್ಯನ ದರುಶನವಿಲ್ಲ. ಜಡೆಗಟ್ಟಿ ಮಳೆಯು ಸುರಿಯುವದು. ಕರಾವಳಿಯ ಈ ಬಯಲಿನಲ್ಲಿ ವರುಷದ ಸರಾಸರಿ ಮಳೆಯು 80 ರಿಂದ 100 ಇಂಚುಗಳಷ್ಟು ಇರುವದು. ಈ ಪ್ರದೇಶಕೆ, ಮಳೆ ತರುವ 'ತೆಂಕಣಗಾಳಿ' ಯನ್ನು ಆ ನಾಡಿನ ಹಿರಿಯ ಕವಿಯೊಬ್ಬರು ಕಣ್ಣಿಗೆ ಕಟ್ಟುವಂತೆ ಹೀಗೆ ಹೇಳಿರುವರು:-

ಪಡುವಣ ಮೋಡದ ಬೆಟ್ಟಕೆ ಗಟಿ
ಹೊಡೆದಟ್ಟುತ, ಕೋಲ್‌ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ ನೆಲವನು ನಡುಗಿಸಿ .......
ಜಡಿಮಳೆ ಸುರಿಪ್ಪೋಲ್, ಬಿರುಮಳೆ ಬರುಪ್ಪೋಲ್ ,.
ತೆಂಕಣ ಗಾಳಿಯು ಕೊಂಕಣ ಸೀಮೆಗೆ,
ಬಂತೈ ! ಬಂತೈ : ಬಂತೈ ! ಬಂತೈ !

ಸಮುದ್ರ ತೀರದ ಈ ಕಿರಿಯಗಲಾದ ಬಯಲಿಗೆ ಸಹ್ಯಾದ್ರಿ ಬೆಟ್ಟಗಳೆ ಸೀಮೆ. ಮಲೆನಾಡು ಎಂದು ಹೇಳುವ ಈ ಪರ್ವತಮಯ ಪ್ರದೇಶದ ಪ್ರಾಕೃತಿಕ ಸ್ವರೂಪವನ್ನು ನೀವು ತಿಳಿದುಕೊಂಡಿರುವಿರಿ. ಈ 'ಬೆಟ್ಟಗಳ ರಾಜ್ಯ'ದಲ್ಲಿ ನೈಋತ್ಯ ಮಾನ್ಸೂನ ಗಾಳಿಗಳಿಗೆ ಹೆಜ್ಜೆಹೆಜ್ಜೆಗೂ 'ಪ್ರತಿರೋಧ'. ಉನ್ನತ ಬೆಟ್ಟಗಳು ಅವುಗಳನ್ನು ತಡೆದು ನಿಲ್ಲಿಸುವವು. ದೂರದಿಂದಲೂ ಸಂಗ್ರಹಿಸಿ ತಂದಿರುವ ಬಾಷ್ಪವನ್ನು ಇಲ್ಲಿಯ ಬೆಟ್ಟಗಳಿಗೆ 'ಸುಂಕ'ವಾಗಿ ಅವು ಕೊಡಬೇಕು. ಮುಂದೆ ಮುಂದೆ ಹೋಗುವಲ್ಲಿ ಅವುಗಳ ಆರ್ದ್ರತೆಯು (ಆವೆಯ) ಸಂಪತ್ತೆಲ್ಲ ಸುಲಿಗೆಯಾಗಿ ಹೋಗುವದು. ಪೂರ್ವದ ತಪ್ಪಲಿಗೆ ತಲಪುವಷ್ಟರಲ್ಲಿ ಅವು ತಮ್ಮ ಭಾರವನ್ನೆಲ್ಲ ಕಳೆದುಕೊಂಡು ಒಣಗಾಳಿಗಳಾಗಿ ಬೀಸುವವು.

ತೀರದ ಬಯಲಿಗಿಂತಲೂ ಮಲೆನಾಡಿನಲ್ಲಿ ಮಳೆ ಹೆಚ್ಚಾಗುವದು. ಇಲ್ಲಿಯ ಸರಾಸರಿ ಮಳೆಯ ಪ್ರಮಾಣವು 150 ರಿಂದ 200 ಇಂಚುಗಳಷ್ಟು ಇರುವದು. ಬೆಟ್ಟಗಳ ತುದಿಗಳಿಗೆ ಮೋಡಗಳು ಪತಾಕೆಯಂತೆ ಜೋತು ಬಿದ್ದಿರುವ ಇಲ್ಲಿಯ ದೃಶ್ಯವು ತುಂಬಾ ಮನೋಹರವಾಗಿ ಕಾಣುವದು. ಈ

ಭಾಗದಲ್ಲಿಯ ಕೆಲವೊಂದು ಊರುಗಳ ಮಳೆಯ ಪ್ರಮಾಣವನ್ನು ನಿರೀಕ್ಷಿಸಿರಿ; ಭಾಗಮಂಡಲ 227 ಇಂಚು, ಕಾರ್ಕಳ 185 ಇಂಚು ಬೆಳ್ತಂಗಡಿ 177 ಇಂಚು, ಶೃಂಗೇರಿ 148 ಇಂಚು, ಕಾರವಾರ 118 ಇಂಚು, ಈ ಭಾಗದ ಊರುಗಳು ಮಳೆರಾಯನ ಸುಲಿಗೆಯನ್ನು ಹೇಗೆ ಸ್ವಚ್ಛಂದವಾಗಿ ಮಾಡುವ ವೆಂಬುದು ಆದರಿಂದ ನಿಮಗೆ ತಿಳಿದುಬರುವದು. ಆದರೆ ಪಶ್ಚಿಮ ಘಟ್ಟಗಳ ತಮ್ಮಂದಿರಾದ ಪೂರ್ವ ಘಟ್ಟಗಳಿಗೆ ಮಾತ್ರ ಮಳೆರಾಯನ ಈ ಸುಲಿಗೆಯಲ್ಲಿ ತೀರ ಕಡಿಮೆ ಪಾಲು ದೊರೆಯುವದು. 20-35 ಇಂಚುಗಳಷ್ಟು ಮಾತ್ರ.

ಮಲೆನಾಡಿನಲ್ಲಿ ಹವೆಯು ಉಗಿಯಿಂದ ಕೂಡಿದಾಗ್ಗೆ ತುಸು ಸೆಕೆ ಯೆನಿಸುವದು. ಆದರೆ ಇದು ಬೆಟ್ಟಗಳ ಉನ್ನತ ಪ್ರದೇಶವಾದುದರಿಂದ ಇಲ್ಲಿಯ ಹವೆಯು ಶೀತವಾಗಿರುವದು, ಮಳೆ ಹಾಗು ಜವುಳುಗಳಿಂದ ಅನಾ ರೋಗ್ಯಕರವಾಗಿರುವದು. ಅನೇಕ ರೋಗರುಜಿನಗಳು ಇಲ್ಲಿಯ ಜನರನ್ನು ಕಾಡುವವು. ಅವುಗಳಲ್ಲಿ ಮಲೇರಿಯಾ — ಚಳಿಜ್ವರ, ಮನೆ ಮನೆಗಳಲ್ಲಿ ತೀರ ಸಾಮಾನ್ಯವಾದ ಬೇನೆಯಾಗಿದೆ.

ನಮ್ಮ ರಾಜ್ಯದ ಭಾಗವಾಗಿರುವ ಕೊಡುಗು ಬೆಟ್ಟಗಳ ನಾಡು. ಮಳೆಯ ಪ್ರಮಾಣದ ಸರಾಸರಿ 100 ಇಂಚುಗಳಷ್ಟು. ಇಲ್ಲಿಯ ಹವೆಯು ಆರೋಗ್ಯಕರವಾಗಿದೆ, ಹಿತಕರವಾಗಿದೆ.

ಬೆಟ್ಟಗಳನ್ನು ಕಣಿವೆ ಮಾರ್ಗವೊಂದರಿಂದ ಏರಿ ಮೇಲಕ್ಕೆ ಬನ್ನಿರಿ. ನಮ್ಮ ರಾಜ್ಯದ ತಪ್ಪಲುನಾಡು ಇಲ್ಲಿ ಪಸರಿಸಿರುವದು. ತಪ್ಪಲು ಪ್ರದೇ ಶಕ್ಕೆ 'ಪ್ರಸ್ಥ ಭೂಮಿ'ಯೆಂತಲೂ ಹೇಳುವದುಂಟು. ಸಮುದ್ರ ತೀರದಿಂದ ಈ ಪ್ರದೇಶವು ದೂರವಾಗಿರುವದು. ಬೆಟ್ಟಗಳು ಅಡ್ಡಿ ಮಾಡುವದರಿಂದ ಸಮುದ್ರದಿಂದ ಬೀಸುವ ತಂಪು ಗಾಳಿಗಳು ಇಲ್ಲಿಯವರೆಗೆ ಬರಲಾರವು. ಆದುದರಿಂದ ತಪ್ಪಲು ವಿಷಮ ಹವೆಯ ಪ್ರದೇಶವಾಗಿದೆ. ವಿಷಮ ಹವೆಯ ಲಕ್ಷಣಗಳನ್ನು ನೀವು ಮರೆತಿಲ್ಲವಷ್ಟೇ! ಹಗಲು ರಾತ್ರಿಗಳಲ್ಲಿ ಬೇಸಿಗೆ ಚಳಿಗಾಲಗಳಲ್ಲಿ ಇಲ್ಲಿಯ ಉಷ್ಣತಾಮಾನಗಳ ಅಂತರವು ಹೆಚ್ಚಿಗೆ ಇರುವದು. ನಿಜವಾಗಿ ಈ ಪ್ರದೇಶದಲ್ಲಿ ಉಷ್ಣತೆಯ ಪ್ರಮಾಣವು ಇನ್ನೂ ಹೆಚ್ಚಿಗೆ ಇರಬೇಕಿತ್ತು. ಆದರೆ ಈ ಪ್ರದೇಶದ ಎತ್ತರವು ಇಲ್ಲಿಯ ಉಷ್ಣತೆ ಯನ್ನು ತುಸು ಕಡಿಮೆ ಮಾಡುವದು. ತಪ್ಪಲಿನ ಯಾವ ಭಾಗವೂ 1 ಸಾವಿರ ಅಡಿಗಿಂತ ಕಡಿಮೆ ಎತ್ತರವಾಗಿಲ್ಲ. ನಮ್ಮರಾಜ್ಯದ ತಪ್ಪಲಿನ ದಕ್ಷಿಣ ಭಾಗವು ಹೆಚ್ಚು ಉನ್ನತವಾಗುತ್ತ ಹೋಗಿರುವದು. ಅದರಿಂದ

ಉತ್ತರ ಭಾಗಕ್ಕಿಂತಲೂ ದಕ್ಷಿಣ ಭಾಗದಲ್ಲಿ ಉಷ್ಣತಾಮಾನವು ತುಸು ಕಡಿಮೆ ಯಾಗಿರುವದು. ಮಳೆಯ ಪ್ರಮಾಣವು ಆ ಭಾಗದಲ್ಲಿ ತುಸು ಹೆಚ್ಚಿಗೆ ಇರುವದು. ತೆಪ್ಪಲಿನ ಉತ್ತರ ಭಾಗದಲ್ಲಿಯ ( ಇದಕ್ಕೆ ' ಉತ್ತರ ಕರ್ನಾಟಕ ' ವೆಂತಲೂ ಹೇಳುವರು.) ಕೆಲವು ಮುಖ್ಯ ಊರುಗಳ ಮಳೆಯ ಪ್ರಮಾಣ ವನ್ನು ನಿರೀಕ್ಷಿಸಿರಿ : ಬೀದರ 33 ಇಂಚು, ಗುಲಬರ್ಗಾ 29 ಇಂಚು, ರಾಯ ಚೂರು 25 ಇಂಚು, ವಿಜಾಪೂರ 20 ಇಂಚು, :- ಈ ಭಾಗದ ಮಳೆಯ ಸರಾಸರಿ ಪ್ರಮಾಣವು 20 ರಿಂದ 30 :ಇಂಚುಗಳಾಗಬಹುದೆಂದು ಈ ಅಂಕಿ ಗಳು ಸೂಚಿಸುವವು. " ದಕ್ಷಿಣ ಭಾಗದಲ್ಲಿಯ ( ಇದಕ್ಕೆ 'ದಕ್ಷಿಣ ಕರ್ನಾಟಕ' ವೆಂತಲೂ ಹೇಳುವರು. ) ಕೆಲವು ಊರುಗಳಲ್ಲಿಯ ಮಳೆಯ ಪ್ರಮಾಣವನ್ನು ನಿರೀಕ್ಷಿಸಿರಿ; ಹಾಸನ 35 ಇಂಚು, ಬೆಂಗಳೂರು 34 ಇಂಚು, ನರಸಿಂಹ ರಾಜಪೂರ 68 ಇಂಚು, ಭದ್ರಾವತಿ 40 ಇಂಚು : ದಕ್ಷಿಣ ಭಾಗದಲ್ಲಿಯ ಮಳೆಯ ಪ್ರಮಾಣವು ಉತ್ತರ ಭಾಗಕ್ಕಿಂತಲೂ 10-20 ಇಂಚು ಗಳಷ್ಟು ಹೆಚ್ಚಿಗೆ ಇರುವದೆಂಬುದು ಈ ಅಂಕಿಗಳಿಂದ ನಿಮಗೆ ಗೊತ್ತಾಗು ವದು.

ಶಿವು ಪುಟ್ಟುವಿಗೆ ಬರೆದ ಪತ್ರವನ್ನು ಪ್ರಾರಂಭದಲ್ಲಿ ನೀವು ಓದಿರು ವಿರಿ. ' ಮಳೆಗಾಲದ ಭೀತಿಯೇ ನಮಗಿಲ್ಲ ' ಎಂದು ಆತನು ಹೇಳಿರುವನು. ಈ ಮಾತು ತುಂಬ ನಿಜವಾಗಿದೆ. ' ಮಳೆ ಹತ್ತಿಬಿಟ್ಟಿದೆ, ಹೊರಗೆ ಕಾಲಿ ಡುವಂತಿಲ್ಲ ' ಎಂದು ಕೈ ಕಟ್ಟಿಕೊಂಡು ಕೂಡುವ ಅನುಭವವು ಉತ್ತರ ಕರ್ನಾಟಕದ ಜನರಿಗೆ ಕ್ವಚಿತ್ತಾಗಿ ಬರುವದು. ಕೆಲವೊಂದು ಸಲ ಮಳೆಯು ದೀರ್ಘ ಕಾಲದ ವರೆಗೆ ತಡೆದು ನಿಲ್ಲುವದು. ಬರಗಾಲವು ತಲೆದೋರು ವದು. ಹೀಗಾಗಿ, ಅಲ್ಪ ಮಳೆಯನ್ನೂ ಕೂಡ ಇಲ್ಲಿಯ ಒಕ್ಕಲಿಗರು ನೆಚ್ಚು ವಂತಿಲ್ಲ.

ಆದರೆ ಬಿಸಿಲಿನ ಬೇಗೆಯು ಮಾತ್ರ ಹೆಚ್ಚು. ಇಡೀ ವರುಷವೆಲ್ಲ ಬೇಸಿ ಗೆಯೇ ನೆಲೆಸಿರುವಂತೆ ಅನಿಸುವದು. ಚಳಿಗಾಲದ ಅವಧಿಯೂ ಕಡಿಮೆ, ಚಳಿಯೂ ಕಡಿಮೆ. ನಸುಕಿನಲ್ಲಿ ಮಾತ್ರ ತುಸು ಚಳಿ ಎನಿಸುವದು. ಬೀದರ, ಗುಲಬುರ್ಗಾ, ಬಿಜಾಪೂರ, ಚಿತ್ರದುರ್ಗ ಮೊದಲಾದ ಜಿಲ್ಹೆಗಳಲ್ಲಿಯ ಒಣ ಹವೆಯು ಒಳ್ಳೇ ಆರೋಗ್ಯಕರವಾಗಿದೆ. ' ಕಲ್ಲು ತಿಂದು ಕಲ್ಲು ಕರಗಿಸಿಕೊಳ್ಳ ಬಹುದು ' ಎಂದು ಇಲ್ಲಿಯ ಜನರು ಹೇಳುವರು.

ಬೆಟ್ಟ ಬಯಲುಗಳ ಸೀಮೆಯಲ್ಲಿರುವ ಕಿರಿಯಗಲಾದ ಪಟ್ಟಿಯು

## ೧. ಒಂಭತ್ತನೆಯ ಶತಮಾನ

**ಅಚಲಾನಂದರು** :— ಇವರು ಬೆಂಗಳೂರ ಜಿಲ್ಹೆಯಲ್ಲಿಯ ಹೈಗಣ ಪುರದ ಭಾಗವತ ಧರ್ಮಾಭಿಮಾನಿಗಳಾದ ಬ್ರಾಹ್ಮಣರು. ಇವರು ಭರತ ಖಂಡವನ್ನು ಪಾದಚಾರಿಗಳಾಗಿ ಸಂಚರಿಸಿ, ಎಲ್ಲೆಲ್ಲಿಯೂ ಭಾಗವತ ಧರ್ಮ ವನ್ನು ಉಪದೇಶ ಮಾಡಿದರು. ತೀರ್ಥಯಾತ್ರೆಗೆ ಸಾಗಿದ್ದಾಗ ಪಂಢರಪುರಕ್ಕೆ ಬಂದು ಕೆಲವು ಕಾಲ ವಿಠ್ಠಲನನ್ನು ಸೇವಿಸಿದರು. ಅಚಲಾನಂದರಿಗೆ ಶಕೆ ೮೦೧ರಲ್ಲಿ ಅಂದರೆ ಇ. ಸ. ೮೭೯ರಲ್ಲಿ ವಿಠ್ಠಲನ ದರ್ಶನವಾಯಿತೆಂದು ಅವರು ಹೇಳಿದ್ದಾರೆ. ತೀರ್ಥಯಾತ್ರೆ ಮುಗಿಸಿದ ನಂತರ ಅಚಲಾನಂದರು ರಟ್ಟೆರಲ್ಲಿ ನೆಲಸಿದರು. ಕರ್ನಾಟಕದಲ್ಲಿ ಮೊದಲು ವೈಷ್ಣವ ಭಕ್ತಿಯನ್ನು ಬೀರಿದವ ರೆಂದರೆ ಅಚಲಾನಂದರು. ಇವರ ಸಂತತಿಯಲ್ಲಿ ಕ್ರಮವಾಗಿ ಮುದ್ದುವಿಠ್ಠಲ, ಗೋಪೀನಾಥ, ತಿಮ್ಮಣ್ಣದಾಸ ಮತ್ತು ಪಾಂಡುರಂಗ ಎಂದು ಹರಿದಾಸರು ಆಗಿ ಹೋದರು.[೧]

## ೨. ಹದಿಮೂರನೆಯ ಶತಮಾನ

**ಶ್ರೀನರಹರಿತೀರ್ಥರು** :— ಇವರು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಅವರಿಂದ ಸ್ಥಾಪಿಸಲ್ಪಟ್ಟ ಮಾಧ್ವಪೀಠವನ್ನು ಇವರು ಇ. ಸ. ೧೨೬೨ರಿಂದ ೧೨೯೩ರ ವರೆಗೆ ಅಲಂಕರಿಸಿದರು. ಮೊದಲು ಇವರು ಗಂಜಾಂ ಪ್ರಾಂತದಲ್ಲಿ ದಫ್ತರದಾರರಾಗಿದ್ದು, ಶ್ರೀಮದಾನಂದತೀರ್ಥರ ಕಡೆಯಿಂದ ವೈಷ್ಣವ ದೀಕ್ಷೆಯನ್ನು ಹೊಂದಿ, ಮೂಲ ಸೀತಾ-ರಾಮರ ಪ್ರತಿಮೆಗಳನ್ನು ಕಲಿಂಗ ರಾಜರ ಬೊಕ್ಕಸದಿಂದ ತಂದು, ತಮ್ಮ ಗುರುಗಳಿಗೆ ಒಪ್ಪಿಸಿದರು. ಅಚಲಾ ನಂದರ ತರುವಾಯ ಭಕ್ತಿಗೆ ಪುಟ ದೊರೆತದ್ದು ನರಹರಿತೀರ್ಥರಿಂದ. ಇವರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆಯಲು ಮೊದಲು ಆರಂಭ ಮಾಡಿದರು. ಇವರು ಬರೆದ ಎರಡು ಪದಗಳು ಮಾತ್ರ ದೊರೆತಿವೆ. ಇವರು ದೇವರಿಗೆ ಪ್ರಾರ್ಥಿಸುವ ರೀತಿಯನ್ನು ನೋಡಬಹುದಾಗಿದೆ. "ಹರಿಯೆ, ನಾನು ನಿನ್ನ ದಾಸನು. ಶಬ್ದಮಾತ್ರದಲ್ಲಿ, ಕೃತಿಯಲ್ಲಿ ಸಂಸಾರ ಸುಖಕ್ಕೆ ಮನಸೋತಿರು ವೆನು, ದಾನ-ಧರ್ಮದಲ್ಲಿ ಒಂದು ಕಾಸು ವೆಚ್ಚ ಮಾಡಿದೆನೆಂದರೆ ಸಾವಿರ

(೧) ಶ್ರೀ. ಬೇಲೂರ ಕೇಶವದಾಸ: ಕ. ಭ. ವಿ. ಭಾಗ ೧ ಪುಟಗಳು ೭-೧೦.

## ಅಭ್ಯಸನಗಳು

1. 'ತಾತ್ಕಾಲಿಕ ಹವೆ' — 'ಹವಾಮಾನ' ಗಳೆಂದರೇನು ? ಅವುಗಳಲ್ಲಿ ಅಂತರವೇನು ?
2. 'ಸಮ', 'ವಿಷಮ' ಹವೆಗಳೆಂದರೇನು ? ನಮ್ಮ ರಾಜ್ಯದ ಯಾವ ಭಾಗಗಳಲ್ಲಿ 'ಸಮ'–'ವಿಷಮ' ಹವೆಯ ಪ್ರದೇಶಗಳಿರುವವು ?
3. ಮನ್ಸೂನ ಗಾಳಿಗಳಿಗೆ 'ಹಂಗಾಮಿ ಗಾಳಿ'ಗಳೆಂದು ಏಕೆ ಹೇಳುವರು ? ಈ ಗಾಳಿಗಳ ಮೇಲೆಯೇ ನಮ್ಮ ನಾಡಿನ ಜೀವನವು ಅವಲಂಬಿಸಿರುವದ....ಎಂದು ಏಕೆ ಹೇಳುವರು ?
4. ಹವೆಯ ಉಷ್ಣತೆಯನ್ನು ಹಾಗೂ ಮಳೆಯ ಪ್ರಮಾಣವನ್ನು ಹೇಗೆ ಅಳೆಯುವರು ?

5. ಕಾರಣಗಳನ್ನು ಕೊಡಿರಿ :—

   1. ಮಲೆನಾಡಿನಲ್ಲಿ ಹೆಚ್ಚು ಮಳೆಯಾಗುವದು.
   2. ತಪ್ಪಲು ಪ್ರದೇಶವು ಹೆಚ್ಚು ಉಷ್ಣವಾಗಿರಬೇಕಿತ್ತು.
   3. ಕರಾವಳಿಯ ಪ್ರಾಕೃತಿಕ ಸ್ವರೂಪವು ಅಲ್ಲಿಯ ಹವೆಯ ಮೇಲೆ ತನ್ನ ಪ್ರಭಾವವನ್ನು ಬೀರಿರುವದು.
   5. ಮಳೆಗಾಳಿಗಳು ತಪ್ಪಲಿನ ಪ್ರದೇಶವನ್ನು ಮುಟ್ಟುವಷ್ಟರಲ್ಲಿ ತಮ್ಮ 'ಸಂಪತ್ತ'ನ್ನೆಲ್ಲ ಕಳೆದುಕೊಳ್ಳುವವು.
   5. ಆಗುಂಬೆಯು ನಮ್ಮ ರಾಜ್ಯದ ಚೀರಾಪುಂಜಿಯಾಗಿದೆ.

## ೬. : : : : : : : : : : : : : ಅರಣ್ಯಗಳು

ಒಂದು ಪ್ರದೇಶದ ಭೂಮಿಯಲ್ಲಿ ಬೆಳೆಯುವ ಹಳವುಗಳು, ಹುಲ್ಲುಗಾವಲುಗಳು, ಹಾಗೂ ಹಲವು ಬಗೆಯ ಪೈರುಗಳು, ಇವುಗಳಿಗೆಲ್ಲ ಕೂಡಿ ಆ ಪ್ರದೇಶದ 'ವನಸ್ಪತಿ' ಗಳೆಂದು ಹೇಳುವರು. ಇವುಗಳಲ್ಲಿ ಹಳವುಗಳು, ಹುಲ್ಲುಗಾವಲುಗಳು, 'ಸ್ವಾಭಾವಿಕ ವನಸ್ಪತಿ' ಗಳು. ಪ್ರಕೃತಿಮಾತೆಯೆ ಇವುಗಳನ್ನು ಬೆಳೆಯುವಳು, ಪೋಷಿಸುವಳು. ಕುಶಲನಾದ ಒಕ್ಕಲಿಗನಂತೆ, ಯಾವ ಗಿಡಗಳನ್ನು ಎಂಥ ಭೂಮಿಯಲ್ಲಿ ಬೆಳಿಸಬೇಕು, ಅವುಗಳನ್ನು ಹೇಗೆ ಜತನಮಾಡಬೇಕು—ಇವೆಲ್ಲ ಸಂಗತಿಗಳೂ ಅವಳಿಗೆ ಚೆನ್ನಾಗಿ ಗೊತ್ತಿವೆ.

ಅಂತೆಯೇ ಸ್ವಾಭಾವಿಕ ವನಸ್ಪತಿಗಳಿಗೆ ಬರಗಾಲದ ಭೀತಿಯಿಲ್ಲ, ಯಾವ ಬಾಧೆಯೂ ಇಲ್ಲ. ಹೊಲ, ಗದ್ದೆ, ತೋಟಗಳಲ್ಲಿ ಬಿತ್ತಿ ಬೆಳೆದುಕೊಳ್ಳುವ ಬೆಳೆಗಳಿಗೆ 'ಸಾಗುವಳಿಯ ಸಸ್ಯ' ಗಳೆಂದು ಹೇಳಬಹುದು. ಇವುಗಳಾದರೂ

ಮೈಸೂರು ರಾಜ್ಯ
ಅರಣ್ಯಪ್ರದೇಶ

ಶೇಕಡವಾರು ಅರಣ್ಯದ ವಿಸ್ತೀರ್ಣ
10 ರಿಂದ 25%
10% ರ ಒಳಗೆ
25 ರಿಂದ 50%
50 ರಿಂದ 75%
75% ಅಥವಾ ಹೆಚ್ಚು
ಈ ಪ್ರತಿಯೊಂದು ಗುರುತು ಅರಣ್ಯದ ಪ್ರದೇಶಗಳ 100 ಚದರ ಮೈಲುಗಳನ್ನು ಸೂಚಿಸುತ್ತದೆ

ಭೂಮಿಯ ಪ್ರಕಾರ, ಮಳೆಯ ಪರಿಮಿತಿ, ಉಷ್ಣತೆಯ ಪ್ರಮಾಣ, ಈ ಮುಖ್ಯವಾದ ನಿಸರ್ಗದ ಸಂಗತಿಗಳನ್ನೇ ಅವಲಂಬಿಸಿರುವವು.

ಅರಣ್ಯಗಳು:— ಅರಣ್ಯಗಳ ಬೆಳವಣಿಗೆಯು ಮಳೆಯನ್ನೇ ಅವಲಂಬಿಸಿದೆ, ಕಸುವುಳ್ಳ ಭೂಮಿ, ಹೆಚ್ಚು ಮಳೆ ಹಾಗು ಹೆಚ್ಚು ಉಷ್ಣತೆಗಳಿರುವಲ್ಲಿ ಅರಣ್ಯಗಳು ಬೆಳೆಯುವವು. ಮೈಸೂರು ರಾಜ್ಯದಲ್ಲಿ ಹೆಚ್ಚು ಮಳೆಯಾಗುವ ಪ್ರದೇಶಗಳು ಯಾವು ಎಂಬುದನ್ನು ನಿಮ್ಮ ನಕಾಶದಲ್ಲಿ ಗುರುತಿಸಿರಿ. ರಾಜ್ಯದ ಅರಣ್ಯಗಳನ್ನು ತೋರಿಸುವ ನಕಾಶದೊಡನೆ ಅದನ್ನು ಹೋಲಿಸಿರಿ. ಅರಣ್ಯಗಳಿಗೂ ಮಳೆಯ ಪರಿಮಿತಿಗೂ ಇರುವ ಹೊಂದಿಕೆಯು ನಿಮಗೆ ಕಂಡು ಬರುವದು.

ಮಳೆಯ ಪರಿಮಿತಿಯಂತೆ, ಅರಣ್ಯಗಳ ಸ್ವರೂಪವೂ ಬದಲಿಸುವದು. ಅರಣ್ಯಗಳ ವ್ಯತ್ಯಾಸಗಳಿಗೆ, ಭೂಗುಣ ಹಾಗೂ ಎತ್ತರ ಇವೆರಡೂ ಕಾರಣಗಳಾಗಿರುವವು. ಮೈಸೂರು ರಾಜ್ಯದಲ್ಲಿ 10 ಇಂಚಿನಿಂದ, 300 ಇಂಚಿಗೂ ಅಧಿಕವಾಗಿ ಭಿನ್ನ ಭಿನ್ನ ಪರಿಮಿತಿಯ ಮಳೆಯಾಗುವ ಪ್ರದೇಶಗಳಿವೆ. ಸಮುದ್ರ ಸಪಾಟಿಯಿಂದ ಮೂರು ಸಾವಿರ ಅಡಿಗಳಿಗೂ ಅಧಿಕವಾಗಿರುವ ಉನ್ನತ ಪ್ರದೇಶಗಳಿವೆ. ಹೀಗಿರುವದರಿಂದ, ಈ ರಾಜ್ಯದ ಅರಣ್ಯಗಳು ಒಂದೇ ವಿಧವಾಗಿಲ್ಲ. ಅವುಗಳಲ್ಲಿ ಕೆಲವೊಂದು ಭಿನ್ನ ಪ್ರಕಾರಗಳು ಕಂಡು ಬರುವವು.

ಚಿತ್ರದುರ್ಗ, ಬಳ್ಳಾರಿ, ರಾಯಚೂರು. ಕಲಬುರ್ಗಿ (ಗುಲ್ಬರ್ಗ), ಹಾಗೂ ಬೀದರ ಜಿಲ್ಹೆಗಳ ಪೂರ್ವ ಭಾಗದಲ್ಲಿ ಮಳೆಯ ಪ್ರಮಾಣವು 30 ಇಂಚಿಗಿಂತಲೂ ಕಡಿಮೆಯಾಗಿರುವದು. ಇಲ್ಲಿಯ ಕಾಡುಗಳಲ್ಲಿ ಮುಳ್ಳುಗಂಟೆಗಳು, ಚಿಕ್ಕ ಗಿಡಗಳು ಮಾತ್ರ ಬೆಳೆಯುವವು. ಇವುಗಳ ಕಟ್ಟಿಗೆಯು ಉಪಯೋಗವು ಕೇವಲ ಉರುವಲಿಗಾಗಿ ಹಾಗೂ ಕೇವಲ ಬೇಸಾಯದ ಸಣ್ಣಪುಟ್ಟ ಸಲಕರಣೆಗಳನ್ನು ತಯಾರಿಸುವದಕ್ಕಾಗಿ.

ಈ ಪ್ರದೇಶದ ಆಚೆಗೆ 30 ರಿಂದ 60 ಇಂಚು ಮಳೆಯಾಗುವ ಧಾರವಾಡ, ಹಾಸನ, ತುಮಕೂರ, ಕೋಲಾರ, ಬೆಂಗಳೂರ ಜಿಲ್ಹೆಗಳ ಭಾಗಗಳಲ್ಲಿ ಅಡವಿಗಳು ಕಂಡು ಬರುವವು. ಈ ಅಡವಿಗಳಿಂದ ಕಟ್ಟಿಗೆ ಕಡಿದು ತರುವದು ಸುಗಮವಾಗಿದೆ. ಇವುಗಳ ವಿಶಾಲವಾದ ಕ್ಷೇತ್ರಗಳಲ್ಲಿ ತೇಗು (ಸಾಗವಾನಿ) ಬೆಳೆಯುವದು. 'ರೋಜವುಡ್' ಎಂಬುದು ಇಲ್ಲಿ ಬೆಳೆಯುವ

ಇನ್ನೊಂದು ಉಪಯುಕ್ತವಾದ ಕಟ್ಟಗೆಯಾಗಿದೆ.

ಮೈಸೂರಿನ ಪಶ್ಚಿಮ ಭಾಗ, ಹಾಸನ, ಕೊಡಗಿನ ಪೂರ್ವದ ಭಾಗ, ಚಿಕ್ಕಮಗಳೂರಿನ ಮಧ್ಯಭಾಗ, ಶಿವಮೊಗ್ಗೆ, ದಕ್ಷಿಣ ಹಾಗೂ ಉತ್ತರ ಕನ್ನಡ ಜಿಲ್ಹೆಗಳು, ಇವೆಲ್ಲ ಪ್ರದೇಶಗಳಲ್ಲಿ 60 ಇಂಚುಗಳಿಂದ 100 ಇಂಚುಗಳ ವರೆಗೆ ಮಳೆಯಾಗುವದು. ಇಲ್ಲಿ ಸಮ್ಮಿಶ್ರ ಕಾಡುಗಳು ಕಂಡು ಬರುವವು. ಇಲ್ಲಿ ಬೆಳೆಯುವ ದೊಡ್ಡ ಗಿಡಗಳು ಬೇಸಿಗೆಯಲ್ಲಿ ತಮ್ಮ ಎಲೆಗಳನ್ನು ಉದುರಿಸುವವು. ಉಳಿದವುಗಳು ಹಾಗೆ ಮಾಡುವದಿಲ್ಲ. ಯಾವಾಗಲೂ ಅವು ಹಸಿರೆಲೆಗಳಿಂದ ಕೂಡಿರುವವು. ನಮ್ಮ ರಾಜ್ಯದ ಈ ಪ್ರದೇಶಗಳಲ್ಲಿ ಸಮೃದ್ಧವಾದ ಅರಣ್ಯವು ನೆಲೆಸಿರುವದು. ಶ್ರೀಗಂಧದ ಗಿಡಗಳು ಇಲ್ಲಿ ವಿಪುಲವಾಗಿ ಬೆಳೆಯುವವು. ನಮ್ಮ ರಾಜ್ಯದ ಅರಣ್ಯದ ಹುಟ್ಟು ವಳಿಗಳಲ್ಲಿ ಶ್ರೀಗಂಧದ ಗಿಡಗಳು ಹೆಸರಾಗಿವೆ, ಹಲವರು ನಿತ್ಯವೂ ಉಪ ಯೋಗಿಸುವ 'ಮೈಸೂರ ಸ್ಯಾಂಡಲ್' ಸಾಬೂನು ಈ ಶ್ರೀಗಂಧದ ಎಣ್ಣೆ ಯಿಂದಲೆ ಮನಮೆಚ್ಚುವ ಸುವಾಸನೆಯನ್ನು ಕೊಡುವದು. ಶ್ರೀಗಂಧದ ಗಿಡಗಳಲ್ಲದೆ ತೇಗು, ಹೊನ್ನೆ, ದೇವಗರ್ಗೆ, ನಂದಿ, ಮತ್ತಿ ಮೊದಲಾದ ಅನೇಕ ಉಪಯುಕ್ತ ಗಿಡಗಳು ಇಲ್ಲಿ ಬೆಳೆಯುವವು. ಈ ಅರಣ್ಯಗಳ ನಡು ನಡುವೆ, ಅಲ್ಲಲ್ಲಿ ಭತ್ತದ ಗದ್ದೆ, ಹಾಗೂ ಅಡಿಕೆಯ ತೋಟಗಳು ಕಂಗೊ ಳಿಸುವವು.

ನಿಮಗೆ ನಿಜವಾದ ಮನ್ಸೂನು ಕಾಡುಗಳನ್ನು ನೋಡಬೇಕಾಗಿರುವದೆ? ಹಾಗಾದರೆ ಈ ಪ್ರದೇಶಗಳಲ್ಲಿ ಸಂಚರಿಸಿರಿ: ಈ ಬಗೆಯ ಕಾಡುಗಳು ಕೊಡ ಗಿನಿಂದ ಪ್ರಾರಂಭಿಸುವವು. ಮುಂದೆ ಹಾಸನದ ಪಶ್ಚಿಮ ಭಾಗಗಳಲ್ಲಿ, ಚಿಕ್ಕಮಗಳೂರ ಮತ್ತು ಶಿವಮೋಗ್ಗೆ ಜಿಲ್ಹೆಗಳಲ್ಲಿ ಅವು ಹಬ್ಬಿರುವವು. ಇವೆಲ್ಲ ಭಾಗಗಳಲ್ಲಿ ಮಳೆಯ ಪ್ರಮಾಣವು 100 ರಿಂದ 300 ಇಂಚು ಗಳ ವರೆಗೆ ಇರುವದು. ಈ ಕಾಡುಗಳಿಗೆ ಹೋದರೆ, ದಿಕ್ಕು ತಪ್ಪಿದಂತಾ ಗುವದು. ಇಲ್ಲಿಯ ಗಿಡಗಳು ಯಾವಾಗಲೂ ಹಸಿರೆಲೆಗಳಿಂದ ಕೂಡಿ ರುವವು. ಅವು ಎಲೆಗಳನ್ನು ಬೇಸಿಗೆಯಲ್ಲಿ ಉದುರಿಸುವದಿಲ್ಲ. ಇಂಥ ಗಿಡಗಳಿರುವ ಕಾಡುಗಳಿಗೆ 'ಸದಾ ಹರಿತ' ಕಾಡುಗಳೆನ್ನುವರು. ತೇಗು, ಮತ್ತಿ ಮೊದಲಾದ ಉಳಿದ ಗಿಡಗಳಲ್ಲದೆ, ಇಲ್ಲಿ ಬಳಿಗೆ ಹಾಗು ಎಬನಿ ಎಂಬ ವಿಶಿಷ್ಟ ಗಿಡಗಳು ಬೆಳೆಯುವವು. ಇಲ್ಲಿಯ ಗಿಡಗಳು ನಾ ಮೇಲೆ ನಾ ಮೇಲೆ ಎನ್ನುವಂತೆ ಉನ್ನತವಾಗಿ ಬೆಳೆಯುವವು. ಬಿದಿರುಗಳ ಮೆದೆಗಳು

ದಾರಿಯನ್ನು ಕಟ್ಟುವವು. ನೂರು ಬಗೆಯ ಕಂಟಿಗಳು, ಬಳ್ಳಿಗಳು ನಮಗೆ ಕಾಲ್ತೊಡಕಾಗುವವು. ವನದೇವತೆ ತನ್ನ ಸೊಬಗು-ಸಂಪತ್ತನ್ನೆಲ್ಲ ಇಲ್ಲಿ ಚೆಲ್ಲವರಿಯುತ್ತಿರುವಳು. ಅರಣ್ಯಗಳ ಒಟ್ಟು ಕ್ಷೇತ್ರ ಹಾಗೂ ಅರಣ್ಯ ಸಂಪತ್ತು ಈ ವಿಷಯಗಳಲ್ಲಿ ನಮ್ಮ ಮೈಸೂರರಾಜ್ಯವು ಹೆಮ್ಮೆ ಪಡುವಂತಿದೆ.

ನಮ್ಮ ರಾಜ್ಯದ ಅರಣ್ಯ ಸಂಪತ್ತಿನಲ್ಲಿ, ತೇಗು ( ಸಾಗವಾನಿ ) ಮುಖ್ಯವಾದುದು. ಇಲ್ಲಿ ದೊರೆಯುವ ಸುವಿನ ಕಟ್ಟಿಗೆ, ಶ್ರೀಗಂಧ, ಬಿದಿರು, ಹೊನ್ನೆ, ಮತ್ತಿ, ಎಬನಿ, ಕರಿಮರ, ಧೂಪ, ನಂದಿ, ಚಂಪಕ ಈ ಮೊದಲಾದ ವಿವಿಧ ಗಿಡಗಳು ಉಪಯುಕ್ತವಾಗಿವೆ, ಬೆಲೆಯುಳ್ಳವುಗಳಾಗಿವೆ. ಈ ಕಟ್ಟಿಗೆಗಳಲ್ಲದೆ ಸವಾಠ, ಅಂಜರಿ ಮೊದಲಾದ ಮಿದು ಕಟ್ಟಿಗೆಗಳೂ ಕಾರವಾರದ ಹಳವುಗಳಲ್ಲಿ ದೊರೆಯುತ್ತಿವೆ. ತೊಗಲು ಹದ ಮಾಡಲು ಹಾಗೂ ತೊಗಲಿಗೆ ಬಣ್ಣ ಹಾಕಲು ಉಪಯುಕ್ತವಿರುವ ವನಸ್ಪತಿಗಳು ಇಲ್ಲಿ ಬೆಳೆಯುವವು. ಅಂಟು, ಕಾಚು, ಅರಗು, ಜೇನು, ದಾಲಚಿನ್ನಿ, ಬಾಳದ ಬೇರು, ಸೀಗೇಕಾಯಿ, ಅಂಟಳ ಕಾಯಿ, ಹುಣಸೆ ಹಣ್ಣು ಮುಂತಾದ ಇನ್ನಿತರ ವಸ್ತುಗಳಿಗೆ ಈ ಅರಣ್ಯಗಳು ಆಗರಗಳಾಗಿವೆ. ಇವುಗಳಲ್ಲಿ ದೊರೆಯುವ ಅಣಿಲೆಕಾಯಿ ಅಮೇರಿಕೆಯಲ್ಲಿ ಮಾರಾಟವಾಗುತ್ತಿದೆ. ಬಳ್ಳಾರಿಯ ಕಾಡುಗಳಲ್ಲಿ ' ಇಪ್ಪಿ ' ಗಿಡಗಳು ಬೆಳೆಯುವವು. ಕಬ್ಬಿಣ ಕರಗಿಸುವದರಲ್ಲಿ ಹಾಗೂ ಗಟ್ಟಿಯಾದ ಹಗ್ಗಗಳನ್ನು ಮಾಡುವದರಲ್ಲಿ ಇವುಗಳ ಉಪಯೋಗವಾಗುವದು.

ವಿದ್ಯುತ್ತಿನ ತಂತಿಯ ಕಟ್ಟಿಗೆ ಕಂಬಗಳನ್ನು ನೀವು ನಿತ್ಯವೂ ನೋಡುವಿರಿ. ಕಬ್ಬಿಣ ಕಂಬಗಳಿಗೆ ಬದಲಾಗಿ ಕಟ್ಟಿಗೆಯ ಕಂಬಗಳನ್ನು ಉಪಯೋಗಿಸುವದು ನಮ್ಮ ರಾಜ್ಯದಲ್ಲಿಯೆ ಮೊದಲು ಪ್ರಚಾರದಲ್ಲಿ ಬಂದಿತು.

ರಾಜ್ಯದ ಅರಣ್ಯ ಸಂಪತ್ತಿಯು ವಿವಿಧವಾಗಿದೆ. ನಮ್ಮ ಜೀವನಕ್ಕೆ ಅಗತ್ಯವಿರುವ ಎಷ್ಟೋ ವಸ್ತುಗಳನ್ನು ಅದು ನಮಗೆ ಪೂರೈಸುತ್ತಿದೆ. ಸರಕಾರಕ್ಕೆ ಅದರಿಂದ ಆದಾಯವೂ ಸಲ್ಲುತ್ತಿದೆ. ಇವೆಲ್ಲ ಲಾಭಗಳು ಹೆಚ್ಚಿನವೆ ಸರಿ. ಆದರೆ ಅರಣ್ಯಗಳು ಇನ್ನೂ ಬೇರೆ ರೀತಿಯಿಂದ ನಮಗೆ ಸಹಾಯ ಮಾಡುತ್ತಿವೆ. ಗಿಡಗಳು ಹವೆಯನ್ನು ಶುದ್ಧಗೊಳಿಸುವವು, ಮೋಡಗಳು ಮಳೆಗರೆಯುವಂತೆ ಮಾಡುವವು. ಗಿಡಗಳು, ಕಂಟಿಗಳು ಹಾಗೂ ಹುಲ್ಲು ಇವು ಮಣ್ಣು ಹರಿದು ಹೋಗದಂತೆ ತಮ್ಮ ಬೇರುಗಳಿಂದ ಗಟ್ಟಿಯಾಗಿ

ಹಿಡಿದುಕೊಳ್ಳುವವು. ವನಸ್ಪತಿಗಳಿಗೆಲ್ಲ ಪ್ರಾಣಸಂತಿರುವ ಮಣ್ಣನ್ನು ಹೀಗೆ ಜತನ ಮಾಡುವ ಅವುಗಳ ಕಾರ್ಯವು ಎಷ್ಟೋ ಮಹತ್ವದ್ದಾಗಿದೆ.

ನಾವು 'ವನ್ಯಪಶು'ಗಳೆಂದು ಹೇಳುವ ಹುಲಿ, ಚಿರ್ತೆ, ಹೊನಿಗ, ಕಾಡಾನೆ, ಕಾಡುಕೋಣ, ಸಾಂಬೂರ, ಚಿಗರೆ, ಸಾರಂಗ, ಕಾಡುಹಂದಿ ಇವೂ ಕೂಡ ನಮ್ಮ ಅರಣ್ಯದ ಸಂಪತ್ತೇ ಎಂದು ಹೇಳಬಹುದು. ನಮ್ಮ ರಾಜ್ಯದ ಮಲೆನಾಡುಗಳಲ್ಲಿ ಕಾಡಾನೆಗಳ ಹಿಂಡು ಸಂಚರಿಸುವವು. ತೆಗ್ಗಿನಲ್ಲಿ ಬೀಳು ವಂತೆ ಮಾಡಿ ಅವುಗಳನ್ನು ಹಿಡಿಯುವರು. ಈ ಪದ್ಧತಿಗೆ 'ಖೆಡ್ಡಾ' ಎನ್ನುವರು. ಮೈಸೂರು ಜಿಲ್ಹೆಯ 'ಹೆಗ್ಗಡದೇವನ ಕೋಟೆ' ಯಲ್ಲಿ ಖೆಡ್ಡಾದ ಕಾರ್ಯವು ನಡೆಯುವದು. ಆನೆಯ ಕೋರೆಗೆ ಹಸ್ತಿದಂತವೆನ್ನು ವರು. ಹಸ್ತಿದಂತದಿಂದ ಮಾಡಿದ ಸುಂದರವಾದ ಒಡವೆಗಳಿಗೆ ಬಹಳೇ ಬೆಲೆ ಬರುವದು. ಮೈಸೂರು ಕಾಗದದ ಮೇಲೆ ಕಾಡುಕೋಣದ ಚಿತ್ರ ವನ್ನೇ ಹಾಕುವರು. ದಾರಿತಪ್ಪಿದಾಗ, ಇವುಗಳಿಂದ ನಮಗೆ ತುಸು ಹಾನಿ ಯಾಗಬಹುದು. ಆದರೆ ಈ ವನ್ಯ ಪಶುಗಳೂ, ನವಿಲು ಮೊದಲಾದ ವನ್ಯ ಪಕ್ಷಿಗಳೂ ಪ್ರಕೃತಿಮಾತೆಯ ಮಕ್ಕಳೇ ಎಂಬುವನ್ನು ಮರೆಯಕೂಡದು. ಬೇಟೆಗಾರರ ಅವಿಚಾರಕ್ಕೆ ಇವು ಬಲಿಯಾಗಬಾರದೆಂದು, ಅಳಿದು ಹೋಗ ಬಾರದೆಂದು ಸರಕಾರವು ಇವುಗಳ ಸಂರಕ್ಷಣೆಯನ್ನು ಕೈಕೊಂಡಿದೆ. ನಮ್ಮ ಮೈಸೂರು ರಾಜ್ಯದಲ್ಲಿ 'ವೇಣುಗೋಪಾಲ ವನ್ಯ ಪ್ರಾಣಿಗಳ ಸಂರಕ್ಷಣಾ ಲಯ', ಶ್ರೀರಂಗಪಟ್ಟಣದ ನೆರೆಯಲ್ಲಿ ಪಕ್ಷಿಗಳ ರಕ್ಷಣಾಲಯ ಹೀಗೆ ಆರು ಕಾದಿಟ್ಟ ವಿಶಾಲವಾದ ಕ್ಷೇತ್ರಗಳಲ್ಲಿ ಪಶು, ಪಕ್ಷಿ ಹಾಗೂ ಜಲಚರ ಪ್ರಾಣಿಗಳ ರಕ್ಷಣೆಯ ಕಾರ್ಯವು ಸಾಗಿದೆ.

## ಮುಖ್ಯ ಬೆಳೆಗಳು

ಹನೆ-ಮಳೆಗಳಂತೆ ಭೂಮಿಯೂ ಬೆಳೆಗಳಿಗೆ ಮಹತ್ವವಾದುದು. ಇಂಥ ಭೂಮಿಯಲ್ಲಿ ಇಂಥದೆ ಬೆಳೆಯನ್ನು ತೆಗೆದುಕೊಳ್ಳಿರಿ-ಎಂದು ಪ್ರಕೃತಿ ಮಾತೆಯು ನಮಗಾಗಿ ಗೊತ್ತುಮಾಡಿರುವಳು. ಅವಳ ಮಾತನ್ನು ಮೀರುವಂತಿಲ್ಲ. ಬೇರೆ ಬೇರೆ ಪ್ರಕಾರದ ಭೂಮಿಗಳಲ್ಲಿ ಬೆಳೆಗಳೂ ಬೇರೆ ಬೇರೆ ಯಾಗಿರುವವು.

ಬೇರೆ ಭೂಮಿಯ ಪ್ರಕಾರಗಳ ಪರಿಚಯವನ್ನು ನಾವು ಮೊದಲು

ಮಾಡಿಕೊಳ್ಳಬೇಕು, ಅವುಗಳ ಗುಣಧರ್ಮಗಳನ್ನು ತಿಳಿದುಕೊಳ್ಳಬೇಕು. 'ಭೂಮಿ'ಯ ಪ್ರಕಾರಗಳೆಂದು ಹೇಳುವರಲ್ಲವೆ ? ' ಮಣ್ಣಿನ ಪ್ರಕಾರ ' ಗಳೆಂದು ಹೇಳವದು ಹೆಚ್ಚು ಉಚಿತವಾಗುವದು. ಭೂಮಿಯ ಮೇಲ್ಭಾಗಕ್ಕೆ ಮಣ್ಣಿನ ಹೊದಿಕೆಯಿರುವದು. ಈ ಮಣ್ಣಿನ ಥರವು 3–4 ಅಡಿಗಳಷ್ಟು ಹೆಚ್ಚು ಕಡಿಮೆಯಾಗಿ ಆಳವಾಗಿರುವದು. ಹಿಂದೆ ಹೇಳಿದಂತೆ ಸೂರ್ಯದೇವ, ವಾಯುದೇವ, ಮಳೆರಾಯ ಇವರೆಲ್ಲರೂ ಅಖಂಡವಾಗಿ ದುಡಿದು ಬಂಡೆಗಳನ್ನು ಭೇದಿಸಿ ಪುಡಿ ಪುಡಿಯಾಗಿ ಮಾಡುವರು. ಇದರಲ್ಲಿ ಎಲೆ ಮೊದಲಾದ ವನಸ್ಪತಿ ಭಾಗಗಳು ಬೆರೆತು ಕೊಳ್ಳುವವು. ನಮಗೆ ' ಕ್ಷುದ್ರ 'ವೆಂದು ತೋರುವ ಕೋಟಿಗಟ್ಟಲೆ ಕ್ರಿಮಿಕೀಟಕಗಳು ಈ ಮಣ್ಣಿನ ತಯಾರಿಕೆಯಲ್ಲಿ ಸಹಕರಿಸುವವು. ಈ ಮಣ್ಣೇ ಸಕಲ ಜೀವನಕ್ಕೆ ಮೂಲಾಧಾರ. ಎಲ್ಲ ಬೆಳೆಗಳಿಗೆ ಈ ಮಣ್ಣು ತಾಯಿಯಿದ್ದಂತೆ. ಈ ಮಣ್ಣಿನ ಒಡಲಿನಲ್ಲಿಯೆ ಸಸ್ಯಗಳೆಲ್ಲ ಮೊದಲು ಅಂಕುರಿಸುವವು. ಆರ್ದ್ರತೆ, ಆಹಾರಗಳನ್ನು ನೀಡಿ ಮಣ್ಣು ಅವನ್ನು ತಾಯಿಯಂತೆ ಪೋಷಿಸುವದು.

ನಮ್ಮ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯ ಮಣ್ಣು ಒಂದೇ ವಿಧವಾಗಿಲ್ಲ. ಸಮುದ್ರ ತೀರದ ' ಕರಾವಳಿ 'ಯ ಪಟ್ಟಿಯನ್ನೇ ತೆಗೆದುಕೊಳ್ಳೋಣ. ಸಮುದ್ರ ದಂಡೆಯ ಭೂಮಿ ಹೆಚ್ಚಾಗಿ ಉಸುಕಿನಿಂದ ಕೂಡಿರುವದು. ಅಲ್ಲಿಂದ ಪೂರ್ವಕ್ಕೆ ಹೋದಂತೆ ಕಿರಿಯಗಲಾದ ಈ ಬಯಲಿನಲ್ಲಿ ಉಸುಕಿನ ಪ್ರಮಾಣವು ಕಡಿಮೆಯಾಗುವದು. ಅನೇಕ ಚಿಕ್ಕ ಪುಟ್ಟ ಝರಿಗಳೂ, ಪ್ರವಾಹಗಳೂ ಬೆಟ್ಟಗಳ ಇಳುಕಲಿನಿಂದ ತರುವ ಮಣ್ಣನ್ನು ಇಲ್ಲಿ ಚೆಲ್ಲಿ ಕೊಡುವವು. ಇಲ್ಲಿಯ ಕಲ್ಲು ಕೆಂಪುಮೂಡಿಯದಾಗಿರುವದು. ಅದಕ್ಕೆ ' ಜಾಂಭಾ ' ಎನ್ನುವರು. ಈ ಕಲ್ಲಿನಿಂದ ಉಂಟಾದ ಮಣ್ಣು ಕೂಡ ಕೆಂಪು ಬಣ್ಣದ್ದಾಗಿರುವದು. ಈ ಕೆಂಪು ಮಣ್ಣು ಬೆಳೆಯುಳ್ಳದ್ದಾಗಿರುವದು. ಅದರಲ್ಲಿ ಹಸಿಯು ( ಆರ್ದ್ರತೆ ) ಬಹಳ ವೇಳೆಯ ವರೆಗೆ ಉಳಿಯುವದು. ವನಸ್ಪತಿಗಳಿಗೆ ಬೇಕಾಗುವ ಪೋಷಕ ದ್ರವ್ಯಗಳು ಈ ಮಣ್ಣಿನಲ್ಲಿ ಬಹಳವಾಗಿರುವವು. ಆದರಿಂದ ಅದು ಬೆಳೆಯುಳ್ಳದ್ದಾಗಿರುವದು.

ಈ ಬಯಲಿಗೆ ಹೊಂದಿಕೊಂಡಿರುವದು ಪರ್ವತಮಯ ಪ್ರದೇಶ. ಇಲ್ಲಿ ಭೂಮಿಯ ಕೊರತೆ ಇರುವದು. ಬೆಟ್ಟಗಳ ನಡುವಿನ ಕೊಳ್ಳಗಳಲ್ಲಿ ರೇವೆಯ ಮಣ್ಣು ತುಂಬಿರುವದು. ಬೆಟ್ಟಗಳ ಇಳುಕಲಿನ ಭಾಗಗಳನ್ನು ಕಡಿಕಡಿದು ಚೌಕು ತುಂಡುಗಳನ್ನಾಗಿ ಮಾಡಿಕೊಂಡಿರುವರು. ಮೇಲಿನಿಂದ

ಹರಿದು ಬರುವ ನೀರು ತನ್ನೊಡನೆ ತರುವ ಸೂಸುಮಣ್ಣನ್ನು ಇವುಗಳಲ್ಲಿ ಬಿಡುವದು. ಮಣ್ಣಿನ ಥರವು ಇಲ್ಲಿ ಆಳವಾಗಿರುವದಿಲ್ಲ.

ಈ ಪರ್ವತಮಯ ಪ್ರದೇಶದ ಆಚೆಗೆ ಪಸರಿಸಿರುವುದು ನಮ್ಮ ರಾಜ್ಯದ ದೊಡ್ಡ ಭಾಗವಾಗಿರುವ ತಪ್ಪಲು ಪ್ರದೇಶವು ಹಿಂದೆ ಹೇಳಿದುದನ್ನು ನೀವು ಮರೆತಿರಲಿಕ್ಕಿಲ್ಲ. ಸೂರ್ಯ, ಗಾಳಿ, ಮಳೆ ಈ ಮೂವರು ದುಡಿದು ತಪ್ಪಲಿನ ಮೇಲ್ಭಾಗದ ಶಿಲೆಯನ್ನು ಸವೆಸಿದ್ದಾರೆ. ಅಲ್ಲಿಯ ಮಣ್ಣನ್ನು ರಚಿಸಿದ್ದಾರೆ. ತಪ್ಪಲಿನ ಉತ್ತರ ಭಾಗದಲ್ಲಿಯ ಈ ಮಣ್ಣು ಅಚ್ಚಕರಿಯದಾಗಿದೆ. ಈ ಮಣ್ಣಿಗೆ ರೇಗೂರ ಅಥವಾ ಅಚ್ಚಕರಿಯ ಎರೆಮಣ್ಣೆಂದು ಹೇಳುವರು. ಈ ಮಣ್ಣಿನಲ್ಲಿ ಕಲ್ಲು ಹರಳುಗಳು ಕೂಡ ಇರುವದಿಲ್ಲ. ಅನೇಕ ಕ್ಷಾರಗಳಿಂದ ಕೂಡಿದ ಈ ಮಣ್ಣು ಕಸುವುಳ್ಳದ್ದಾಗಿದೆ. ಆರ್ದ್ರತೆಯನ್ನು ದೀರ್ಘಕಾಲದ ವರೆಗೆ ಹಿಡಿದಿಟ್ಟುಕೊಳ್ಳುವ ಶಕ್ತಿಯು ಈ ಮಣ್ಣಿಗಿರುವದು. ತಪ್ಪಲಿನ ದಕ್ಷಿಣ ಭಾಗದಲ್ಲಿ ಕಲ್ಲು ಹರಳುಗಳಿಂದ ಕೂಡಿದ ಕೆಂಪು ಮಣ್ಣು ಕೆಲವಡೆಗೆ, ಹಳದಿ ಬಣ್ಣವನ್ನು ಹೋಲುವ ಮಣ್ಣು ಕೆಲವಡೆಗೆ ಕಂಡು ಬರುವದು. ಇಂಥ ಮಣ್ಣಿನಿಂದ ಕೂಡಿದ ಭೂಮಿಗೆ ಕೆಂಪು ಮಸಾರಿಭೂಮಿ ಹಾಗೂ ಗರಸು ಭೂಮಿಯೆಂದು ಹೇಳುವರು.

ನಿಮ್ಮ ಗೆಳೆಯರು ಯಾರು? ಅವರ ರೀತಿ ನಡತೆಗಳು ಎಂತಿವೆ? ಎಂಬುದು ತಿಳಿದರೆ ನಿಮ್ಮ ಸ್ವಭಾವವನ್ನೂ ಗುರುತಿಸಲು ಬರುವದೆಂದು ಹಿರಿಯರು ಹೇಳಿರುವರು. ಇದರಂತೆಯೆ ಒಂದು ಪ್ರದೇಶದ ಮಣ್ಣು ಎಂತಹದು? ಮಳೆಯ ಪ್ರಮಾಣವೆಷ್ಟು? ಅಲ್ಲಿಯ ಹವಾಮಾನವು ಹೇಗಿರುವದು? ಎಂಬುದು ತಿಳಿದರೆ ಆ ಪ್ರದೇಶದ ಪೈರು (ಬೆಳೆ) ಗಳು ಯಾವವು ಎಂಬುದನ್ನಾದರೂ ಸಾಮಾನ್ಯವಾಗಿ ತಿಳಿದುಕೊಳ್ಳಲು ಬರುವಂತಿದೆ. ಏಕೆಂದರೆ, ಪೈರುಗಳು ಈ ಮೂರು ಸಂಗತಿಗಳನ್ನೇ ಮುಖ್ಯವಾಗಿ ಅವಲಂಬಿಸಿರುವವು. ಪೈರುಗಳಿಗೆ 'ಬೆಳೆಗಳು' ಇಲ್ಲವೆ 'ಕೃಷಿಯ ಹುಟ್ಟುವಳಿಗಳು' ಎಂತಲೂ ಕರೆಯುವರು.

ಹಿಂದೆ ಅನುಸರಿಸಿದ ಕ್ರಮವನ್ನೇ ಈ ವಿಷಯದಲ್ಲಿಯೂ ಅನುಸರಿಸೋಣ. ಸಮುದ್ರ ದಂಡೆಯು ಉಸುಕಿನಿಂದ ಕೂಡಿರುವದು. ದಂಡೆಯ ಉಸುಕಿನ ಪ್ರದೇಶದಲ್ಲಿ ತೆಂಗು ಚೆನ್ನಾಗಿ ಬೆಳೆಯುವದು. ತೆಂಗಿನ ಗಿಡಗಳಿಗೆ ಉಪ್ಪಿನಿಂದ ಕೂಡಿದ ಉಸುಕು ನೆಲವಿರಬೇಕು. ಮಳೆ ಹಾಗೂ ಉಷ್ಣತೆಗಳು ವಿಪುಲವಾಗಿರಬೇಕು. ಸಮುದ್ರ ದಂಡೆಯ ಪ್ರದೇಶದಲ್ಲಿ ಈ ಮೂರು

ಸಂಗತಿಗಳು ಕೂಡಿಕೊಂಡಿರುವದರಿಂದ, ತೆಂಗಿನ ಬೆಳೆಗೆ ಬಲು ಅನುಕೂಲ ವಾಗಿದೆ.

ತೆಂಗು ನಮಗೆ ನಿತ್ಯೋಪಯೋಗಿ ವಸ್ತುಗಳಲ್ಲಿ ಒಂದಾಗಿದೆ. ಕರಾವಳಿಯ ಪ್ರದೇಶಗಳಲ್ಲಿ ವಾಸಿಸುವ ಜನರಿಗಂತೂ ಅದು ' ಕಲ್ಪವೃಕ್ಷ 'ದಂತಿದೆ. ತೆಂಗಿನ ಗಿಡದ ಪ್ರತಿಯೊಂದು ಭಾಗವನ್ನೂ ಒಂದಿಲ್ಲೊಂದು ಕೆಲಸಕ್ಕಾಗಿ ಅವರು ಉಪಯೋಗಿಸುವರು. ನಿತ್ಯದ ಅಡುಗೆಯಲ್ಲಿಯೂ ತೆಂಗನ್ನು ಹೆಚ್ಚಾಗಿ ಉಪಯೋಗಿಸುವರು. ಹೈನಿನ ಕೊರತೆಯಿರುವ ಈ ಪ್ರದೇಶದಲ್ಲಿ ತೆಂಗಿನ ' ತಾಜಾ ' ಎಣ್ಣೆಯೇ ತುಪ್ಪವಾಗಿದೆ.

ಅಡಿಕೆಯು ಈ ಪ್ರದೇಶದ ಇನ್ನೊಂದು ಮುಖ್ಯ ಬೆಳೆ. ಅಡಿಕೆ ಗಿಡಗಳು ಸಮುದ್ರದ ದಂಡೆಯ ಮರೆಯಾದ ಸ್ಥಳಗಳಲ್ಲಿ ಸಮೃದ್ಧವಾಗಿ ಬೆಳೆಯುವವು. ಇಲ್ಲಿಯ ಮನೆಮನೆಗೆ ಹರವಾದ ಕೈತೋಟಗಳಿವೆ. ಅವುಗಳಲ್ಲಿ ತೆಂಗು, ಅಡಿಕೆ ಮರಗಳನ್ನು ಬೆಳೆಯುವರು. ಭೂಮಿಯ ಅನುಕೂಲತೆ ಇರುವಲ್ಲಿ ಅಥವಾ ಬೆಟ್ಟದ ಇಳುಕಲಿನಲ್ಲಿ ರಚಿಸಿಕೊಂಡಿರುವ ತುಂಡು ಗದ್ದೆಗಳಲ್ಲಿ ಭತ್ತವನ್ನು ಬೆಳೆಯುವರು. ಅಡಿಕೆ ಗಿಡಗಳಿಗೆ ಮೆಣಸಿನ ಬಳ್ಳಿಗಳನ್ನು ಹಬ್ಬಿಸುವರು. ಬಾಳೆ, ಮಾವು, ಗೋಡಂಬೆ, ಗೇರುಬೇಜ ಇವು ಇಲ್ಲಿಯ ಫಲಗಳು.

ಕರಾವಳಿಗೆ ಹೊಂದಿಕೊಂಡಿರುವದು ಬೆಟ್ಟಗಳ ಪ್ರದೇಶ, ಮಲೆನಾಡು. ಇಲ್ಲಿ ಕಾಡುಗಳೇ ಹೆಚ್ಚು. ಈ ಕಾಡುಗಳಲ್ಲಿ ಬೆಳೆಯುವ ಗಿಡಗಳ ಬಗ್ಗೆ, ಅವುಗಳ ಹುಟ್ಟುವಳಿಗಳ ಬಗ್ಗೆ ನೀವು ಈಗಾಗಲೇ ತಿಳಿದುಕೊಂಡಿರುವಿರಿ. ಕಾಡು ಪ್ರಕೃತಿ ಮಾತೆಯ ದುಡಿತ, ಅವಳ ಕೃಪೆ; ಅವಳು ತಾನಾಗಿ ಕೊಟ್ಟ ಸಂಪತ್ತಿನ ಸದುಪಯೋಗ ಮಾಡಿಕೊಳ್ಳುವದಷ್ಟೇ ನಮ್ಮ ಕಾರ್ಯ.

ಮಲೆನಾಡಿನ ಮುಖ್ಯ ಆಹಾರ ಬೆಳೆ ಭತ್ತವಾಗಿದೆ. ಬೆಟ್ಟಗಳ ನಡುವಿನ ಕೊಳ್ಳದ ಪ್ರದೇಶವು ಕಸುವುಳ್ಳ ರೇವೆ ಮಣ್ಣಿನಿಂದ ಕೂಡಿರುವುದು. ಮಳೆ, ಊಟೆಗಳಿಂದ ಸಾಕಷ್ಟು ನೀರಿನ ಪೂರೈಕೆಯಾಗುವದು. ಉಷ್ಣತೆಗೂ ಕೊರತೆಯಿಲ್ಲ. ಭೂಮಿಯ ಅನುಕೂಲತೆಯಿರುವಲ್ಲೆಲ್ಲ ಭತ್ತವನ್ನು ಎರಡೆರಡು ಬೆಳೆಗಳಾಗಿ ತೆಗೆದುಕೊಳ್ಳುವರು. ಜೊತೆಗೆ ತೋಟಗಾರಿಕೆಯೂ ಇಲ್ಲಿ ಹೆಚ್ಚಾಗಿ ನಡೆಯುವದು. ತೆಂಗು, ಹೆಚ್ಚಾಗಿ ಅಡಿಕೆ ಇಲ್ಲಿಯ ಬೇಸಾಯಗಾರರಿಗೆ ಹಣದ ಬೆಳೆಗಳು ಸಂಪತ್ತಿಯ ಸಾಧನಗಳು. ಮೆಣಸು, ಏಲಕ್ಕಿ ಇವುಗಳಾ-

ಡರೂ ಹಣದ ಬೆಳೆಗಳು. ಬಾಳೆ, ಮಾವು, ಗೋಡಂಬೆ, ಗೇರುಬೀಜ ಇವು ಇಲ್ಲಿಯ ಹಣ್ಣು ಹಂಪಲಗಳು. ಅಂಕೋಲೆಯ 'ಈಶಾಡಿ' ಮಾವಿನಹಣ್ಣು ಪ್ರಸಿದ್ಧವಾದುದು. ಈ ಮಾವಿನ ಹಣ್ಣಿನ ರಸವನ್ನು ಕೆಡವಂತೆ ನಿರ್ವಾತ ಡಬ್ಬಿಗಳಲ್ಲಿ ತುಂಬಿ ದೂರದ ಹೊರನಾಡುಗಳಿಗೂ ಕಳಿಸುವರು.

ಇಂದು ನಮ್ಮ ರಾಜ್ಯದ ಭಾಗವಾದ ಕೊಡಗು, ಬೆಟ್ಟಗಳಿಂದ ಕೂಡಿದ ಪ್ರದೇಶವಾಗಿದೆ ಮಳೆ ಬೆಳೆಗಳಲ್ಲಿ ಮಲೆನಾಡನ್ನು ಹೆಚ್ಚಾಗಿ ಹೋಲುತ್ತಿದ್ದರೂ ಹವೆಯು ಅನಾರೋಗ್ಯಕರವಾಗಿಲ್ಲ. ಕಾಡನ್ನು ಕಡಿದು ಬೇಸಾಯಕ್ಕಾಗಿ ಭೂಮಿಯನ್ನು ಹಸನು ಮಾಡಿಕೊಂಡಿರುವರು. ಉಳಿದುದೆಲ್ಲವೂ ಕಾಡು. ಭತ್ತವು ಮುಖ್ಯವಾದ ಆಹಾರ ಬೆಳೆಯಾಗಿದೆ. ಬೆಟ್ಟಗಳ ಇಳುಕಲು ಪ್ರದೇಶ ಗಳಲ್ಲಿ ಕಾಫಿಯ (ಬುಂದು) ತೋಟಗಳನ್ನು ಮಾಡಿಕೊಂಡಿರುವರು. ಕೊಡಗು ಕಾಫಿಯ ಬೆಳೆಗೆ ಹೆಸರಾಗಿದೆ. ಚಹಾದ ತೋಟಗಳೂ ಇಲ್ಲಿ ಕಂಡು ಬರುವವು. ಇತ್ತೀಚೆಗೆ ರಬ್ಬರ, ಸಿಂಕೋನಾ ಗಿಡಗಳನ್ನು ಬೆಳೆಸತೊಡಗಿರುವರು. ಮಲೆ ನಾಡಿನ ಉಳಿದ ಭಾಗಗಳಂತೆ ಏಲಕ್ಕಿ, ಮೆಣಸುಗಳೂ ಇಲ್ಲಿ ಬೆಳೆಯುವವು. ಕೊಡಗಿನ ಬಗ್ಗೆ ಒಂದು ವಿಶೇಷ ಸಂಗತಿಯನ್ನು ನೀವು ತಿಳಿದುಕೊಳ್ಳ ಬಹುದು. ಕೊಡಗಿನಲ್ಲಿ ಬೇಸಾಯದ ಭೂಮಿಗಿಂತ ಹಣ್ಣುಹಂಪಲ ಬೆಳೆ ಯುವ ಭೂಮಿಯೆ ಹೆಚ್ಚು. ಕೊಡಗಿನ ಕಿತ್ತಳೆ ಹಣ್ಣುಗಳು ಒಳ್ಳೇ ಹೆಸರಾಗಿವೆ.

ಮಲೆನಾಡಿನ ಅಂಚಾದ 'ಮಲೆನಾಡ ಸೆರಗಿ'ನಲ್ಲಿ ಕಾಡುಗಳಿರುವದಿಲ್ಲ. ಮಳೆಯು ಸಾಕಷ್ಟು ಆಗುವದು. ಅಲ್ಲಿ ಭತ್ತವು ಮುಖ್ಯ ಬೆಳೆಯಾಗಿದೆ. ಜೊತೆಗೆ ಕಬ್ಬು, ತಂಬಾಕುಗಳು ಹೆಚ್ಚಾಗಿ ಬೆಳೆಯುವವು. ಮಳೆ ಕಡಿಮೆ ಯಾಗುವಲ್ಲಿ ಜೋಳ, ಸೆಜ್ಜೆಗಳು ಬೆಳೆಯುವವು.

ನಮ್ಮ ರಾಜ್ಯದ ಹೆಚ್ಚಿನ ಭಾಗವೆಲ್ಲ ತಪ್ಪಲಿನ ಮೇಲ್ಮೈಯಲ್ಲಿ ನೆಲಸಿದೆ. ಇದಕ್ಕೆ 'ಮೈದಾನ'ವೆಂದು ಸಾಮಾನ್ಯವಾಗಿ ಹೇಳುವರು. ಬೆಳವಲು ನಾಡೆಂತಲೂ ಈ ಪ್ರದೇಶವನ್ನು ಕರೆಯುವರು. ಈ ಪ್ರದೇಶದ ಭೂಮಿ ಹವೆ, ಮಳೆಗಳ ಬಗ್ಗೆ ಈಗಾಗಲೆ ನೀವು ತಿಳಿದುಕೊಂಡಿರುವಿರಿ. ಇವುಗಳಿಗೆ ಅನುಗುಣವಾಗಿ ಈ ಪ್ರದೇಶದ ಮುಖ್ಯ ಬೆಳೆಗಳು ಯಾವು, ಯಾವ ಭಾಗದಲ್ಲಿ ಬೆಳೆಯುವವು ಇತ್ಯಾದಿ ಸಂಗತಿಗಳನ್ನು ಇನ್ನು ಮುಂದೆ ನಾವು ತಿಳಿದು ಕೊಳ್ಳೋಣ.

**ಜೋಳ, ಸೆಜ್ಜೆ:—** ತಪ್ಪಲಿನ ಪೂರ್ವ ಭಾಗವು ಮಳೆಯ ನೆಳಲಿನ ನಾಡೆಂಬುದು ನಿಮಗೆ ಗೊತ್ತಿದೆ. ಇಲ್ಲಿಯ ಮಳೆಯ ಪ್ರಮಾಣವು ಕಡಿಮೆ;

20 ರಿಂದ 30 ಇಂಚುಗಳಷ್ಟು ಮಾತ್ರ. ಹವೆಯೂ ಉಷ್ಣವಾಗಿದೆ ಈ ಪ್ರದೇಶದ ಸಾಮಾನ್ಯ ತರಗತಿಯ ಭೂಮಿಯಲ್ಲಿ 'ತೃಣಧಾನ್ಯ'ಗಳನ್ನೇ ಹೆಚ್ಚಾಗಿ ಬೆಳೆಯುವರು. ಜೋಳ, ಸಜ್ಜೆ, ನವಣೆ, ರಾಗಿ ಮುಂತಾದವುಗಳು ತೃಣಧಾನ್ಯಗಳ ಗುಂಪಿನಲ್ಲಿ ಬರುವವು. ತೃಣಧಾನ್ಯಗಳನ್ನು ಮುಂಗಾರಿ, ಹಿಂಗಾರಿ ಎರಡೂ ಪೈರುಗಳನ್ನಾಗಿ ಬೆಳೆದುಕೊಳ್ಳುವರು. ಗೊಬ್ಬರದಿಂದ ಕಸುವೇರಿದ ಭೂಮಿ, ಹದವರಿತು ಬಿದ್ದ ಮಳೆಯ ಸೆಳಕುಗಳು ಕೂಡಿ ಕೊಂಡರೆ, ಜೋಳ, ಸಜ್ಜೆಗಳು ಹುಲುಸಾಗಿ ಬೆಳೆಯುವವು. ಒಕ್ಕಲಿಗರು ಮುಂದಿನ ಮೂರು ವರುಷಗಳ ವರೆಗೆ ತಮ್ಮ ಹಗೆಗಳಲ್ಲಿ ಕಾಳನ್ನು ಸಂಗ್ರಹಿ ಸುವರು. ದುಡಿತದ ಜನಕ್ಕೆ ಈ ಭಾಗದಲ್ಲಿ ಜೋಳ, ಸಜ್ಜೆಗಳ ರೊಟ್ಟಿಯೆ ಮುಖ್ಯವಾದ, ಅವರ ಸಂಪಾದನೆಗೆ ನಿಲುಕುವ ಆಹಾರ ಧಾನ್ಯವಾಗಿದೆ. ಕೃಷ್ಣಾ, ಭೀಮಾ ತೀರಗಳ 'ಮುತ್ತಿನಂಥ' ಜೋಳ ಎಂದಿನಿಂದಲೂ ಹೆಸ ರಾಗಿವೆ. 'ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ....' ಎಂದು ಸರ್ವಜ್ಞನು ಈ ನಾಡಿನ ಆಹಾರದ ಐಸಿರಿಯನ್ನು ಹೊಗಳಿರುವನು.

ನವಮೈಸೂರು ರಾಜ್ಯದ ಆಹಾರ ಬೇಳೆಗಳಲ್ಲಿ ಜೋಳದ ಕ್ಷೇತ್ರವೇ ಎಲ್ಲಕ್ಕೂ ಹೆಚ್ಚು ವಿಶಾಲವಾದುದು. ವಿಜಾಪೂರ, ಕಲಬುರ್ಗಿ, ಬೀದರ, ರಾಯಚೂರ ಜಿಲ್ಲೆಗಳ ಜೋಳದ ಹುಟ್ಟುವಳಿಯಲ್ಲಿ ಮೇಲಾದವುಗಳು. ಮಂಡ್ಯ, ತುಮಕೂರು, ಚಿತ್ರದುರ್ಗ ಜಿಲ್ಲೆಗಳ ಗರುಸು ಹಾಗೂ ಮಸಾ ರಿಯ ಭೂಮಿಯಲ್ಲಿ ಜೋಳವನ್ನು ತಕ್ಕಮಟ್ಟಿಗೆ ಬೆಳೆಯುವದುಂಟು.

ಸಜ್ಜೆಯು ಹೆಚ್ಚಾಗಿ ಬೆಳಗಾಂವಿ, ವಿಜಾಪೂರ, ರಾಯಚೂರು ಹಾಗೂ ಕಲಬುರ್ಗಿ ಜಿಲ್ಲೆಗಳಲ್ಲಿ ಬೆಳೆಯುವದು.

**ಭತ್ತ :—** ಜೋಳದ ನಂತರ ಭತ್ತವೆ ಈ ರಾಜ್ಯದ ಎರಡನೆಯ ಮುಖ್ಯ ಧಾನ್ಯವಾಗಿದೆ. ಸೂಸುಮಣ್ಣು, ನೀರಿನ ಸಮೃದ್ಧಿ, ಸಾಕಷ್ಟು ಉಷ್ಣತೆ (80 ಅಂಶಗಳಿಗಿಂತಲೂ ಹೆಚ್ಚಿಗೆ) ಯಿರುವಲ್ಲಿ ಭತ್ತದ ಸಾಗುವಳಿಯಾಗು ವದು. ಭತ್ತಕ್ಕೆ ಬೇಕಾಗುವ ನೀರಿನ ಸಮೃದ್ಧಿಯು ಎರಡು ರೀತಿಯಿಂದ ಸಾಧಿಸುವದು. ವಿಪುಲವಾಗಿ ಮಳೆಯಾಗುತ್ತಿರಬಹುದು. ಕೆರೆ ನದಿಗಳ ಕಾಲುವೆಗಳಿಂದಲೂ ನೀರಿನ ಪೂರೈಕೆಯಾಗಬಹುದು. ಇವೆರಡೂ ರೀತಿ ಗಳಿಂದ ನಮ್ಮ ರಾಜ್ಯದಲ್ಲಿ ಭತ್ತವನ್ನು ಬೆಳೆಯುವರು. ಭತ್ತದ ಹುಟ್ಟು

ವಳಿಯನ್ನು ಹೆಚ್ಚಿಸಲು 'ಜಪಾನಿ ಪದ್ಧತಿಯನ್ನನುಸರಿಸುವರು.' ಈ ವಿಧಾ



ನವು ಇಂದು ಪ್ರಚಾರದಲ್ಲಿದೆ.

ನಮ್ಮ ರಾಜ್ಯದ ಭತ್ತದ ಹುಟುವಳಿಯಲ್ಲಿ ನೂರಕ್ಕೆ 64 ರಷ್ಟು, ಮೈಸೂರು, ಮಂಡ್ಯ, ಶಿವಮೊಗ್ಗೆ, ಬೆಳಗಾಂವಿ, ಉತ್ತರ-ದಕ್ಷಿಣ ಕನ್ನಡ ಜಿಲ್ಹೆಗಳಲ್ಲಿ ಬೆಳೆಯುವದು. ಉಳಿದ ಜಿಲ್ಹೆಗಳಲ್ಲಿಯೂ ಅಲ್ಪ ಪ್ರಮಾಣದಿಂದ ಅಲ್ಲಲ್ಲಿ ಭತ್ತ ಬೆಳೆಯುವದುಂಟು.

**ಗೋದಿ :—** ಈ ರಾಜ್ಯದ ಆಹಾರ ಬೆಳೆಗಳಲ್ಲಿ ಗೋದಿಯೂ ಒಂದಾಗಿದೆ. ಮಿದುವಾದ ಎರೆಯ ಮಣ್ಣಿನ ಭೂಮಿಯೊಳಗೆ ಗೋದಿಯು ಚೆನ್ನಾಗಿ ಬರುತ್ತದೆ. ಇಂಥ ಮಣ್ಣು ಆದ್ರ್ರತೆಯನ್ನು ಬಹುಕಾಲ ಇಟ್ಟು ಕೊಳ್ಳುತ್ತದೆ. ಹೀಗೆ ಸಂಗ್ರಹಿಸಿದ 'ಹಸಿ'ಯಿಂದಲೆ ಗೋದಿ ಬೆಳೆಯುವದು. ಅದಕ್ಕೆ ಹಿತಕರವಾದ ಗಾಳಿ ಮಾತ್ರ ಬೇಕು. ಗೋದಿಗೆ ಹೆಚ್ಚು ಮಳೆ ಬೇಕಿಲ್ಲ. 15-20 ಇಂಚುಗಳಷ್ಟು ಮಳೆಯು ಗೋದಿಗೆ ಸಾಕಾಗುವದು. ಗೋದಿಯ ಸಸಿಗೆ ಬುಡದಲ್ಲಿ ನೀರು ನಿಲ್ಲಬಾರದು. ನೀರು ಹರಿದು ಹೋಗವಂತೆ ಇರಬೇಕು. ಆದ್ರ್ರ ಹವೆಯಿಂದ ಗೋದಿಯ ಬೆಳೆಯು ಕೆಡುವದು. ಬಹಳ ಉಷ್ಣವಲ್ಲದ, ಬಹಳ ಶೀತವಲ್ಲದ ಮಂದೋಷ್ಣವಾದ ಹವೆಯು ಗೋದಿಗೆ ಹಿತಕರವಾಗಿದೆ. ಮಳೆಗಾಲದ ಕೊನೆಗೆ ಇದರ ಬೆಳೆಯನ್ನು ತೆಗೆದುಕೊಳ್ಳುವರು. ಇದು ಹಿಂಗಾರಿಯ ಪೈರುಗಳಲ್ಲಿ ಒಂದು

ಆಗಿರುವದು. ಗೋದಿಯ ಸಸಿಗಳು ಸೂಕ್ಷ್ಮವಾದವುಗಳು. ಅವುಗಳಿಗೆ ರೋಗದ ಭೀತಿ ಬಹಳ. ಮಳೆ ಹೆಚ್ಚಾಗಿ ಇಲ್ಲವೆ ಅನಿಷ್ಟವಾದ ಗಾಳಿಯಿಂದ



'ಇಟ್ಟಂಗಿ' ಯಂತಹ ರೋಗಗಳುಂಟಾಗಿ ಗೋದಿಯ ಬೆಳೆಯು ಕೆಡುವ ದುಂಟು. ಗೋದಿಯು ಬೆಳೆಯುವಲ್ಲಿಯೆ ಜವೆಗೋದಿ, ಗೋವಿನ ಜೋಳ, ಕಡಲೆಗಳನ್ನು ಬೆಳೆಯುವದುಂಟು.

ನಮ್ಮ ರಾಜ್ಯದ ವಿಜಾಪೂರ, ಧಾರವಾಡ, ಬೆಳಗಾಂವಿ, ಕಲಬುರ್ಗಿ ಜಿಲ್ಲೆಗಳಲ್ಲಿ ಗೋದಿಯು ಬೆಳೆಯುವದು. ಚಿತ್ರದುರ್ಗದ ಕೆಲವೊಂದು ಭಾಗ ದಲ್ಲಿಯೂ ತುಸು ಗೋದಿ ಬೆಳೆಯುವದು. ವಿಜಾಪೂರ ಜಿಲ್ಲೆಯಲ್ಲಿ ಡೋಣಿ ನದಿಯ ಇಬ್ಬದಿಯ ಕಸುವಿನ ಭೂಮಿಯಲ್ಲಿ ಗೋದಿಯು ವಿಪುಲವಾಗಿ ಬೆಳೆ ಯುವದು ಡೋಣಿಯ 'ಹವಳ' ದಂಥ ಗೋದಿ ಎಂದಿನಿಂದಲೂ ಹೆಸ ರಾಗಿದೆ. ಕನ್ನಡಿಗರಾದ ನಮಗೆ ಗೋದಿಯು ಹಬ್ಬದ ಊಟವೆಂದೇ ಹೇಳ ಬಹುದು. ನಮ್ಮ ದಿನದ ಊಟದಲ್ಲಿ ನಾವು ಜೋಳ, ಸಜ್ಜೆಗಳನ್ನೇ ಹೆಚ್ಚಾಗಿ ಬಳಸುವೆವು.

**ರಾಗಿ :—** ನಮ್ಮ ರಾಜ್ಯದ ಆಹಾರ ಧಾನ್ಯಗಳಲ್ಲಿ ರಾಗಿಯು ಮೂರ ನೆಯ ಮಹತ್ವದ ಬೆಳೆಯಾಗಿದೆ. ರಾಗಿಯೂ ಒಣ ಹವೆಯ ಪ್ರದೇಶದ ಬೆಳೆ. ಮೈಸೂರಿನ ಕೆಲವು ಜಿಲ್ಲೆಗಳಲ್ಲಿ ರಾಗಿಯು ಬಡಜನರ ಹಾಗೂ ದುಡಿಯು ವವರ ಮುಖ್ಯ ಆಹಾರವಾಗಿದೆ. ಹಾಸನ, ತುಮಕೂರ, ಕೋಲಾರ, ಬೆಂಗ ಳೂರು, ಮೈಸೂರು, ಚಿತ್ರದುರ್ಗ ಈ ಭಾಗಗಳಲ್ಲಿ ರಾಗಿಯು ಹೆಚ್ಚಾಗಿ ಬೆಳೆಯುವದು, ನಮ್ಮ ರಾಜ್ಯದ ರಾಗಿಯ ಹುಟ್ಟುವಳಿಯಲ್ಲಿ ಮುಕ್ಕಾಲು ಪಾಲು ಇವೇ ಜಿಲ್ಲೆಗಳಲ್ಲಿ ಬೆಳೆಯುವದು. ಉತ್ತರ ಕರ್ನಾಟಕ, ಹಾಗೂ

ಹೈದರಾಬಾದ ಕರ್ನಾಟಕದ ಜನರಿಗೆ ರಾಗಿಯು ಅಪರಿಚಿತವೆಂದೆ ಹೇಳ ಬಹುದು

**ಬೇಳೆಯು ಕಾಳುಗಳು** :- ಇವುಗಳಿಗೆ 'ದ್ವಿದಲ' ಧಾನ್ಯಗಳೆಂತಲೂ, '**ಅಡಕಾಳು**'ಗಳೆಂತಲೂ ಹೇಳುವರು. ತೃಣಧಾನ್ಯಗಳಾದ ಜೋಳ-ಸಜ್ಜೆಗಳು ಬೆಳೆಯುವ ಪ್ರದೇಶದಲ್ಲಿಯೆ ಇವುಗಳನ್ನೂ ಬೆಳೆದುಕೊಳ್ಳುವರು ಜೋಳದ ಸಾಲುಗಳ ನಡುವೆ ಇಲ್ಲವೆ ಹೊಲದ ದಂಡೆಯಲ್ಲಿ ಇವುಗಳನ್ನು ಬೆಳೆಯುವದ ರಿಂದ, ಉತ್ತರ ಕರ್ನಾಟಕದ ಭಾಗಗಳಲ್ಲಿ ಇವು ಸಮ್ಮಿಶ್ರ ಇಲ್ಲವೆ ದ್ವಿತೀಯ ಬೆಳೆಗಳೆನ್ನಬಹುದು. ಶಾಖಾಹಾರಿಗಳಾದವರಿಗೆ ಬೇಳೆಯುಕಾಳುಗಳಿಂದ ವಿಶೇಷ ಪ್ರಯೋಜನವುಂಟು. ನಮ್ಮ ಆಹಾರದಲ್ಲಿಯ ಕೊರತೆಯನ್ನು ಇವು ತುಂಬಿ ಕೊಳ್ಳುವವು. ಮಾಂಸದಲ್ಲಿರುವ ಪೋಷಕ ದ್ರವ್ಯಗಳು ಬೇಳೆ ಕಾಳುಗಳಲ್ಲಿ ಇರುವವು. 'ಮಾಷ' (ಉದ್ದಿನ ಬೇಳೆ) 'ಮಾಂಸ'ದಷ್ಟೇ ಪೌಷ್ಟಿಕವೆಂದು ಬಲ್ಲವರು ಹೇಳುವರು. ಅಂತೆಯೆ ನಿಮ್ಮ ರೊಟ್ಟಿ, ಹಾಗೂ ನಿಮ್ಮ ಅನ್ನ, ತೊಗರಿಯ 'ಬಾಳಿ', ಹುಳಿ ನಾರುಗಳಿಗಾಗಿ ನಿತ್ಯವೂ ದಾರಿ ಕಾಯುವವು.

ತೊಗರಿ, ಹೆಸರು, ಚೆನ್ನಂಗಿ, ಕಡಲೆ, ಉದ್ದು, ಅವರಿ, ಬಟಗಡಲೆ— ಇವುಗಳೆಲ್ಲ ಬೇಳೆಕಾಳುಗಳು. ಉತ್ತರ-ದಕ್ಷಿಣ ಕನ್ನಡ ಜಿಲ್ಹೆಗಳು, ಹಾಗೂ ಕೊಡಗು ಇವುಗಳನ್ನು ಬಿಟ್ಟರೆ ನಮ್ಮ ರಾಜ್ಯದ ಮಿಕ್ಕ ಎಲ್ಲ ಜಿಲ್ಹೆಗಳಲ್ಲಿಯೂ ಬೇಳೆಕಾಳುಗಳು ಬೆಳೆಯುವವು.

**ನೆಲಗಡಲೆ** :— ಇದಕ್ಕೆ 'ಸೇಂಗಾ'ಯೆಂತಲೂ ಹೇಳುವರು. ಇದೂ ಒಂದು ದ್ವಿದಲ ಧಾನ್ಯವೇ ಸರಿ. ಆದರೂ ಅದೊಂದು ಬೇರೆ ಗುಂಪಿಗೆ ಸೇರು ವದು. ಸೇಂಗಾದಿಂದ ಎಣ್ಣೆಯನ್ನು ತೆಗೆಯುವರು. ಎಣ್ಣೆ ತೆಗೆಯುವ ಬೀಜ ಗಳಿಗೆಲ್ಲ '**ಎಣ್ಣೆ ಕಾಳುಗಳು**', 'ಎಣ್ಣೆ ಬೀಜಗಳು' ಎಂದು ಹೇಳುವರು. ಸೇಂಗಾ, ಕುಸುಬೆ, ಅಗಸಿ, ಎಳ್ಳು ಹಾಗೂ ಔಡಲ ಇವು ಎಣ್ಣೆ ತೆಗೆಯುವದ ಕ್ಕಾಗಿ ಉಪಯುಕ್ತವಾದವುಗಳು. ಜೋಳ, ಸಜ್ಜೆ ಬೆಳೆಯುವ ಮಸಾರಿ ಭೂಮಿ ಯಲ್ಲಿ ಇಲ್ಲವೆ ಉಸುಕಿನ ಪೊಳ್ಳು ನೆಲದಲ್ಲಿ ಇವುಗಳನ್ನು ಬೆಳೆಯುವರು. ಒಕ್ಕಲಿ ಗರು ಈ ಎಣ್ಣೆಕಾಳುಗಳನ್ನು ಮಾರಿ ಹಣ ಗಳಿಸುವದರಿಂದ ಇವುಗಳಿಗೆ 'ಹಣದ ಬೆಳೆ'ಯೆಂದು ಹೇಳುವದುಂಟು. ಹಣದ ಲಾಭಕ್ಕಾಗಿ ಇತ್ತೀಚೆಗೆ ಉತ್ತರ ಕರ್ನಾಟಕದ ಜಿಲ್ಹೆಗಳಾದ ಬೆಳಗಾಂವಿ, ಧಾರವಾಡ, ವಿಜಾಪೂರ ಗಳಲ್ಲಿ ಸೇಂಗಾದ ಹುಟ್ಟುವಳಿಯು ಹೆಚ್ಚುತ್ತಲಿರುವದು. ಹೊರನಾಡುಗಳಿಗೆ ಕಳಿಸುವದಕ್ಕಾಗಿ ವ್ಯಾಪಾರಸ್ಥರು ಇವುಗಳನ್ನು ದೊಡ್ಡ ಪ್ರಮಾಣದಲ್ಲಿ

ಕೊಟ್ಟವರು, ಗೋಸಲ ಸಿಂಗಪ್ಪಾ ಏಡೇರು ಮತ್ತು ಎಲಗುರವಪ್ಪ ನಾಯೀಕ. ಇವರ ಹಿರಿಯರೇ ಪ್ರಸನ್ನ ವೆಂಕಟರಿಗೆ ೩ ರೂ. ವರ್ಷಾಶನ ಕೊಟ್ಟವರು. ಆದರೆ ಇವರು ಯಾರು? ಇವರ ಕಾಲವಾವುದು? ಎಂಬ ಸಂಗತಿಯು ತಿಳಿಯುವದಿಲ್ಲ.[೧]

ಮೇಲೆ ಕಾಣಿಸಿದ ಅಣ್ಣಯ್ಯಾಚಾರ್ಯರ ಸನದಿನಲ್ಲಿ ಇವರಿಗೆ ಮತ್ತು ಪ್ರಸನ್ನ ವೆಂಕಟದಾಸರಿಗೆ ಸಂಬಂಧ ಹೇಳುವ ಕಾಲದಲ್ಲಿ "ಆಪಲಾ ಆಜಾ ವೇದಶಾಸ್ತ್ರ ಸಂಪನ್ನ ವೆಂಕಪ್ಪಯ್ಯಾ" ಎಂದು ಹೇಳಿದೆ. "ಆಜಾ" ಎಂದರೆ ಮುತ್ತಯ್ಯಾ, ತಂದೆಯ ತಂದೆ ಎಂದರ್ಥವಾಗುತ್ತದೆ. ಆದರೆ ಪ್ರಸನ್ನ ವೆಂಕಟ ದಾಸರು ಅಣ್ಣಯ್ಯಾಚಾರ್ಯರಿಗೆ ಮುತ್ತಯ್ಯರಾಗದೆ ಪಿತಾಮಹರಾಗುತ್ತಾರೆಂದು ಅವರ ವಂಶಾವಳಿಯಿಂದ ಮತ್ತು ಅಣ್ಣಯ್ಯಾಚಾರ್ಯರು ಕೊಟ್ಟ ದಾನ ಪತ್ರ ಇವುಗಳ ಮೇಲಿಂದ ತಿಳಿಯಬಹುದಾಗಿದೆ.[೨]

## ಅಂತಸ್ಥ ಪ್ರಮಾಣಗಳು

೧. ಶ್ರೀಪ್ರಸನ್ನ ವೆಂಕಟದಾಸರು ಉತ್ತರಾದಿಮಠದ ಪೀಠಾಧೀಶರಾದ ಶ್ರೀಸತ್ಯಾಭಿನವತೀರ್ಥ[೩] ಮತ್ತು ಚಿಕ್ಕ ಮಠಾಧೀಶರಾದ ಶ್ರೀಸತ್ಯಾಧಿರಾಜ[೪] ಗುರುಗಳನ್ನು ತಮ್ಮ ಒಂದು ಕೀರ್ತನೆಯಲ್ಲಿ ಸ್ತುತಿಸಿದ್ದಾರೆ.

ಅಂದು ನರಹರಿಯತಿಗೆ ಅಂದದಲೊಲಿದಿಲ್ಲಿ ।
ಬಂದು ನೀ ನಿಂತೆ ನಿಜ ರಮಣಿಯೊಡನೆ ।
ಎಂದೆಂದು **ಸತ್ಯಾಭಿನವತೀರ್ಥ** ಗುರುಹೃದಯ ।
ಮಂದಿರನೆ ಪ್ರಸನ್ವೆಂಟಕ ವರದಾ ರಾಮಾ ॥[೫]

---

(೧) ಅಣ್ಣಯ್ಯಾಚಾರ್ಯರಿಗೆ ದೊರೆತ ಸನದು, ಪರಿಶಿಷ್ಟ ೮.

(೨) ಶ್ರೀಪ್ರಸನ್ನ ವೆಂಕಟದಾಸರ ವಂಶಾವಳಿ ಪರಿಶಿಷ್ಟ ೧೫, ಮತ್ತು ಅಣ್ಣಯ್ಯಾಚಾರ್ಯರು ಕೊಟ್ಟ ದಾನಪತ್ರ ಪರಿಶಿಷ್ಟ ೧೩.

(೩) ಶ್ರೀ. ಕಮಲಾಪುರ ಭೀಮರಾಯರು: ಸತ್ಕಥಾ ಪುಟ ೬೫.

(೪) ಆಬಾಜಿ ರಾಮಚಂದ್ರ ಸಾವಂತ: ಉತ್ತರಾಧಿಮಠದ ಪೀಳಿಗೆ.

(೫) ಇದೇ ಪ್ರಬಂಧ: ಪದಸಂಖ್ಯೆ ೧೯೭.

ಕಬ್ಬು ತೋಟದ ಬೆಳೆಯಾಗಿದೆ. ಅದಕ್ಕೆ ನಿಯಮಿತವಾಗಿ ನೀರನ್ನು ಕೊಡ ಬೇಕಾಗುವದು. ಬಾವಿಗಳ ನೀರಾವರಿಯಿಂದ ಕಬ್ಬನ್ನು ತಪ್ಪಲಿನ ಎಲ್ಲ ಭಾಗ



ಗಳಲ್ಲಿಯೂ ಬೆಳೆಯುವರು. ತುಸು ಮಟ್ಟಿಗೆ ಅಲ್ಲಲ್ಲಿ ಬೆಲ್ಲವನ್ನೂ ತಯಾರಿಸು ವರು. ಆದರೆ ಸಕ್ಕರೆಯ ಉತ್ಪಾದನೆಗೆ ಕಬ್ಬಿನ ಹುಟ್ಟುವಳಿ ಹೆಚ್ಚಿಗೆ ಇರಬೇಕಾಗುವದು. ಮಂಡ್ಯ ಉಗಾರ, ಹೊಸಪೇಟೆಗಳಲ್ಲಿ ಸಕ್ಕರೆಯ ಕಾರ್ಖಾನೆ ಇವೆ.

ತಂಬಾಕು :- ತಂಬಾಕು ನಮ್ಮ ರಾಜ್ಯದ ಇನ್ನೊಂದು ಹಣದ ಬೆಳೆ ಯಾಗಿದೆ. 40 ಇಂಚುಗಳಷ್ಟು ಮಳೆಯಾಗುವ ಮಲೆನಾಡ ಸೆರಗಿನಲ್ಲಿ ತಂಬಾಕು ಚೆನ್ನಾಗಿ ಬೆಳೆಯುವದು. ಸಾಮಾನ್ಯವಾಗಿ ಕಬ್ಬು ಬೆಳೆಯುವ ಪ್ರದೇಶಗಳಲ್ಲಿ ತಂಬಾಕನ್ನು ಬೆಳೆದುಕೊಳ್ಳುವರು. ಸೇದುವದು, ತಿನ್ನು ವದು ಇವುಗಳಲ್ಲದೆ ಕ್ರಿಮಿಕೀಟಕಗಳನ್ನು ನಾಶ ಮಾಡಲಿಕ್ಕೂ ತಂಬಾಕನ್ನು ಉಪಯೋಗಿಸುವರು. ನಮ್ಮ ರಾಜ್ಯದ ಬೆಳಗಾಂವಿ, ಮೈಸೂರು ಮೊದಲಾದ ಕೆಲವೇ ಭಾಗಗಳಲ್ಲಿ ತಂಬಾ ಕನ್ನು ಬೆಳೆಯುವರು.



ಚಹಾ :- ನಮ್ಮ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಚಹಾ ತುಸು ಮಟ್ಟಿಗೆ ಬೆಳೆ

ಯುವದು.

ಕಾಫಿ :– ಹೆಚ್ಚು ಮಳೆಯಾಗುವ ಬೆಟ್ಟಗಳ ಇಳುಕಲಿನಲ್ಲಿ ಕಾಫಿ ತೋಟಗಳು ನೆಲೆಸಿರುವವು. ಕಾಫಿಯ ಉತ್ಪತ್ತಿಯಲ್ಲಿ ಮೈಸೂರು ರಾಜ್ಯಕ್ಕೆ ಮಹತ್ವದ ಸ್ಥಾನವಿದೆ. ಕೊಡಗು, ಚಿಕ್ಕಮಗಳೂರು, ಮಂಗಳೂರು ಕಾಫಿಯ ಉತ್ಪತ್ತಿಯಲ್ಲಿ ಮುಂದೆ ಬಂದಿವೆ.

1820ರ ವರೆಗೆ ಚಿಕ್ಕಮಗಳೂರು ಕಾಫಿಯ ಬೆಳೆಗೆ ಒಂದೇ ಒಂದು ಸ್ಥಾನವಾಗಿತ್ತಂತೆ. ಕಾಫಿ ಗಿಡವು ಚಿಕ್ಕಮಗಳೂರಿಗೆ ಎಲ್ಲಿಂದ ಬಂದಿತು ? ಯಾರು ತಂದರು ? ನಿಮಗೆ ಗೊತ್ತುಂಟೆ ? ನೂರು ವರುಷಗಳ ಹಿಂದೆ ಬಾಬಾ ಬುಡನ್ ಸಾಹೇಬ ಎಂಬ ಮುಸ್ಲೀಮ ಸಾಧು ಮಕ್ಕಾ ಯಾತ್ರೆಗಾಗಿ ಅರಬಸ್ತಾನಕ್ಕೆ ಹೋಗಿದ್ದನು. ಆ ದೇಶದಲ್ಲಿ ಹೆಚ್ಚಾಗಿ ಬೆಳೆಯುವ ಕಾಫಿ ಸಸಿಗಳನ್ನು ಮರಳಿ ಬರುವಾಗ್ಗೆ ತನ್ನೊಡನೆ ತಂದನು. ಇಂದು ಆತನ ಹೆಸರಿನಿಂದಲೆ ಕರೆಯಲ್ಪಡುವ 'ಬಾಬಾ ಬುಡನ್ ಗಿರಿ' ಯಲ್ಲಿ ಆ ಸಸಿಗಳನ್ನು ಮೊದಲು ಬಾರಿ ನೆಟ್ಟನು. ಇಂದು ಆ ಬೆಟ್ಟದ ಇಳುಕಲಿನಲ್ಲಿ ಬೆಳೆಯುವ ಕಾಫಿಯು ಶ್ರೇಷ್ಠ ದರ್ಜೆಯದಾಗಿದೆ. ಕೊಡಗಿನಲ್ಲಿ ಕಾಫಿ ತೋಟಗಾರಿಕೆಯು ಮುಖ್ಯವಾದ ಉದ್ಯೋಗವಾಗಿದೆ.

ಹತ್ತಿ :— ಹತ್ತಿಯು ಉಷ್ಣ ಪ್ರದೇಶದ ಬೆಳೆಯು. ಮಳೆಯೂ ಹೆಚ್ಚಿಗೆ ಬೇಕಿಲ್ಲ. 20–30 ಇಂಚುಗಳಷ್ಟು ಮಳೆ ಸಾಕು. ಹತ್ತಿಯ



ಹತ್ತಿಯ ಬೆಳೆ

ಕಾಯಿಯು ಬಿರಿದು ಒಳಗಿನ ಹತ್ತಿಯು ಹೊರಗೆ ಬರಬೇಕಾದರೆ ಸಾಕಷ್ಟು

ಉಷ್ಣತೆಯು ಅಗತ್ಯವಾಗಿರುವದು. ಸಮುದ್ರದ ಉಪ್ಪು ಕೂಡಿದ ಗಾಳಿಗಳು ಬೀಸುವ ಎಡೆಯಲ್ಲಿ ಹತ್ತಿಯ ಉತ್ಪತ್ತಿಯೂ ಹೆಚ್ಚು, ಎಳೆಗಳೂ ಉದ್ದವಾಗುವವು. ಮಂಜು ಬೀಳುವದು ಹತ್ತಿಗೆ ಅಪಾಯಕರವಾಗಿದೆ. ನಮ್ಮ ರಾಜ್ಯದ ತಪ್ಪಲಿನ ಭಾಗದಲ್ಲಿ ಲಾವ್ಹಾ ಶಿಲೆಯಿಂದ ಉಂಟಾದ ಕಸುವುಳ್ಳ ಕರಿಯ ಭೂಮಿ ಇದೆಯಷ್ಟೆ. ಈ ಭೂಮಿಯಲ್ಲಿ ಹತ್ತಿಯ ಬೆಳೆ ಮುಖ್ಯ.

ಧಾರವಾಡ, ವಿಜಾಪುರ, ರಾಯಚೂರು ಜಿಲ್ಹೆಗಳಲ್ಲಿಯೇ ನಮ್ಮ ರಾಜ್ಯದ ಹತ್ತಿಯ ಹುಟ್ಟುವಳಿಯ ಮುಕ್ಕಾಲು ಪಾಲು ಕ್ಷೇತ್ರವು ನೆಲೆಸಿರುವದು ಬಳ್ಳಾರಿ, ಬೆಳಗಾಂವಿ, ಚಿತ್ರದುರ್ಗ ಜಿಲ್ಹೆಗಳಲ್ಲಿಯೂ ಹತ್ತಿ ಬೆಳೆಯುವದು.

ಹತ್ತಿಯನ್ನು ಬಟ್ಟೆಗಾಗಿ, ಹತ್ತಿಯ ಕಾಳುಗಳನ್ನು ದನಕರುಗಳಿಗಾಗಿ ಉಪಯೋಗಿಸುವದನ್ನು ಬಲ್ಲಿರಿ. ಇದಲ್ಲದೆ ಎಣ್ಣೆ ತೆಗೆಯುವದಕ್ಕಾಗಿಯೂ ಹತ್ತಿಯ ಕಾಳುಗಳನ್ನು ಉಪಯೋಗಿಸುವರು.

**ಕೋರಿ ಗಿಡಗಳು** :– ಇವುಗಳಿಗೆ ಮಲ್ಬರಿ ಗಿಡಗಳೆಂತಲೂ ಕರೆಯುವರು. ರೇಶಿಮೆ ಹುಳಗಳು ಈ ಗಿಡಗಳ ಎಲೆಗಳನ್ನು ತಿಂದು ಜೀವಿಸುವವು. ಈ ಗಿಡಗಳು ಬೆಳೆಯಲು ನಿಸರ್ಗದ ಅನುಕೂಲತೆಗಳು ನಮ್ಮ ರಾಜ್ಯದ ತಪ್ಪಲಿನ ಭಾಗದಲ್ಲಿ ಕಂಡುಬರುವವು. ಈ ಗಿಡಗಳು ಬೆಳೆಯುವಲ್ಲಿ ರೇಶಿಮೆ ಹುಳಗಳನ್ನು ಸಾಕುವರು. ರೇಶಿಮೆಯನ್ನು ಉತ್ಪಾದಿಸುವರು. ಇನ್ನೂರು ವರುಷಗಳಿಂದಲೂ ಈ ಕೈಗಾರಿಕೆಯು ಮೈಸೂರು ರಾಜ್ಯದಲ್ಲಿ ಊರ್ಜಿತ ಸ್ಥಿತಿಯಲ್ಲಿದೆ. ಚಿಕ್ಕ ಹೊಲಗಳ ಒಡೆಯರಿಗೆ ಇದೊಂದು ಉಪಧಂಧೆಯಾಗಿದೆ ಹೆಣ್ಣು ಮಕ್ಕಳಿಗೆ, ಚಿಕ್ಕವರಿಗೆ ಇಡೀ ವರುಷವೆಲ್ಲ ಬಿಡುವಿನ ವೇಳೆಯಲ್ಲಿ ಮಾಡಬಹುದಾದ ಗೃಹೋದ್ಯಮವಾಗಿದೆ. ಇದುಗಳಿಕೆಯ ಸಾಧನವೂ ಇರುವದು. ಇಂದಿನ ನವಮೈಸೂರ ರಾಜ್ಯವು ರೇಶಿಮೆಯ ಉತ್ಪಾದನೆಯಲ್ಲಿ ಭಾರತದಲ್ಲಿಯೆ ಮೊದಲನೆಯದಾಗಿದೆ. ಬೆಂಗಳೂರು, ಮೈಸೂರು, ಕೋಲಾರ, ತುಮಕೂರು, ಕೊಳ್ಳೆಗಾಲ, ಬೆಳಗಾಂವಿ ಹಾಗೂ ಕೊಡಗು ಈ ಭಾಗಗಳಲ್ಲಿ ರೇಶಿಮೆಯ ಉತ್ಪಾದನೆಯ ಕಾರ್ಯವು ನಡೆಯುವದು.





ರೇಶಿಮೆಯ ಹುಳಗಳು

ಹಣ್ಣು ಹಂಪಲ ಹಾಗೂ ತರಕಾರಿ:—ಇವುಗಳನ್ನು ಸ್ಥಾನಿಕವಾಗಿ ಬೆಳೆಯುವರು, ಸಾರ್ವತ್ರಿಕವಾಗಿ ಉಪಯೋಗಿಸುವರು. ಹಿಂದೆ ಹೇಳಿದಂತೆ ಮಲೆನಾಡಿನಲ್ಲಿ ಹಲಸು, ಗೊಡಂಬೆ, ಗೇರುಬೀಜ ವಿಶೇಷವಾದವುಗಳು. ಅಂಕೋಲೆಯ 'ಈಶಾಡಿ' ಮಾವಿನ ಹಣ್ಣು, ಧಾರವಾಡದ 'ಆಪೂಸ' ಹಣ್ಣು, ಪೇರಲ, ನೇರಳೆ ರುಚಿಗಾಗಿ ಹೆಸರಾಗಿವೆ. ಮೈಸೂರು, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಹೂ, ಹಣ್ಣು ಹೆಚ್ಚಾಗಿ ಬೆಳೆಯುವರು. ನಿಮ್ಮೂರ ಪೇಟೆಯಲ್ಲಿಯೂ 'ಮೈಸೂರು ಮಲ್ಲಿಗೆ'ಯನ್ನು ನೀವು ಕಾಣಬಹುದು. ವಿಜಾಪೂರ ಹಾಗೂ ಅದೇ ಜಿಲ್ಲೆಯ ಶಿಕೋಟ, ಬಾಬಾನಗರಗಳು ದ್ರಾಕ್ಷೆಯ ಬೆಳೆಗಾಗಿ ಮುಂದೆ ಬಂದಿವೆ. ಕಲಾದಗಿ, ಕೊಲ್ಹಾರಗಳ ದಾಳಿಂಬ, ಚಿಕ್ಕೂ ಹಣ್ಣುಗಳು ಮುಂಬಯಿ ಮಾರ್ಕೆಟ್ಟಿನಲ್ಲಿಯೂ ಮಾರುವವು. ಇವುಗಳ ಜೊತೆಗೆ ಮೈಸೂರಿನ 'ಚಿಗುರೆಲೆ', ನವಣೂರ–ಜೊಳಚಗುಡ್ಡ 'ಅಂಬಾಡಿ' ವೀಳ್ಯದ ಎಲೆ ಇವುಗಳನ್ನು ನೀವು ಮರೆಯುವಂತಿಲ್ಲ.

ಚವಳಿ, ಸವತಿ, ಹೀರೆ, ಹಾಗಲ, ಕುಂಬಳ, ಪಡುವಲ ಮೊದಲಾದ ವಿಧವಿಧದ ತರಕಾರಿ (ಕಾಯಿಪಲ್ಲೆ) ನಮ್ಮ ರಾಜ್ಯದ ಎಲ್ಲ ಭಾಗಗಗಳಲ್ಲಿ ಬೆಳೆಯುವವು. ಇಲ್ಲಿ ಬೆಳೆಯುವ ಈರುಳ್ಳೀ (ಉಳ್ಳೀಗಡ್ಡಿ) ದೇಶದ ಎಲ್ಲ ಭಾಗಗಳಿಗೂ, ಹೊರನಾಡುಗಳಿಗೂ ಕೂಡ ಹೋಗುವದು. ಧಾರವಾಡ ಜಿಲ್ಲೆಯ 'ಬ್ಯಾಡಗಿಯ ಒಣಮೆಣಸಿನಕಾಯಿ' ತನ್ನ ಬಣ್ಣ, ಗುಣಗಳಿಗಾಗಿ ಒಳ್ಳೇ ಲೋಕಪ್ರಿಯವಾಗಿದೆ.

ನಮ್ಮ ರಾಜ್ಯದ ಕಾಡುಗಳಲ್ಲಿಯೂ ನೀವು ಸುತ್ತಾಡಿದಂತಾಯಿತು. ಹೊಲ–ಗದ್ದೆ–ತೋಟಗಳ ಹುಟ್ಟುವಳಿಯನ್ನೂ ನೋಡಿದಂತಾಯಿತು. ನಿಸರ್ಗವು ಈ ಕನ್ನಡನಾಡಿನ ಮೇಲೆ ಎಷ್ಟೊಂದು ಕೃಪೆಮಾಡಿದೆ! ಸುಜೀವನಕ್ಕೆ ಬೇಕಾಗಿರುವ ಎಲ್ಲ ಸೌಕರ್ಯಗಳೂ ಇಲ್ಲಿ ನಿಮಗೆ ದೊರೆಯುವವು.

## (೬–೭) ಅಭ್ಯಸನಗಳು

1. ಮಳೆಯ ಪರಿಮಿತಿಯಂತೆ ನಮ್ಮ ರಾಜ್ಯದಲ್ಲಿ ಕಾಣಬರುವ ಅರಣ್ಯಗಳ ಪ್ರಕಾರಗಳು ಯಾವು? ಅವುಗಳಲ್ಲಿ ದೊರೆಯುವ ಮುಖ್ಯ ಗಿಡಗಳು ಯಾವು?
2. ನಮ್ಮ ರಾಜ್ಯದ ಅರಣ್ಯದ ಹುಟ್ಟುವಳಿಗಳು ಯಾವು? ಅವುಗಳ ಅವಶ್ಯಕತೆ ಏಕೆ ಇರುವದು?

3. ಭತ್ತದ ಬೆಳೆಗೆ ಬೇಕಾಗುವ ಭೂಗೋಲದ ಸಂಗತಿಗಳು ಯಾವು ? ನವ ಮೈಸೂರು ರಾಜ್ಯದಲ್ಲಿ ಭತ್ತವು ಎಲ್ಲಿ ಬೆಳೆಯುವದು ?
4. ತಪ್ಪಲು ಪ್ರದೇಶದ (ಮೈದಾನಿನ) ಮುಖ್ಯ ಬೆಳೆಗಳು ಯಾವು ? ಏಕೆ ?
5. ಈ ರಾಜ್ಯದಲ್ಲಿ ಬೆಳೆಯುವ ಮುಖ್ಯ ಎಣ್ಣೆಕಾಳುಗಳು ಯಾವು ? ಅವುಗಳ ಉಪಯೋಗವೇನು ?
6. ಈ ರಾಜ್ಯದ ' ಹಣದ ಬೆಳೆ 'ಗಳು ಯಾವು ? ಎಲ್ಲಿ ಹೆಚ್ಚಾಗಿ ಬೆಳೆಯುವವು ?
7. ಈ ರಾಜ್ಯದಲ್ಲಿ ಏಲಕ್ಕಿ, ಮೆಣಸುಗಳು ಎಲ್ಲಿ ಬೆಳೆಯುವವು ?
8. ಈ ರಾಜ್ಯದ ಯಾವ ಭಾಗಗಳಲ್ಲಿ ಹತ್ತಿಯನ್ನು ಬೆಳೆಯುವರು ? ಏಕೆ ?
9. ಯಾವ ಹಣ್ಣುಗಳಿಗಾಗಿ ಈ ರಾಜ್ಯವು ಹೆಸರಾಗಿದೆ? ಅವು ಎಲ್ಲಿ ಬೆಳೆಯುವವು ?
10. ಅ) ಕಾಫಿಯ ತೋಟಗಾರಿಕೆ ಈ ರಾಜ್ಯದಲ್ಲಿ ಹೇಗೆ ಪ್ರಾರಂಭವಾಯಿತು ?
    ಬ) ನವ ಮೈಸೂರು ರಾಜ್ಯದ ಬಾಹ್ಯ ರೇಖೆಯ ನಕಾಶದಲ್ಲಿ ಹತ್ತಿ, ಭತ್ತ, ಜೋಳ, ಕಾಫಿ ಇವುಗಳ ಕ್ಷೇತ್ರಗಳನ್ನು ಗುರಿತಿಸಿರಿ.
11. ಈ ರಾಜ್ಯದ ಅಡವಿಗಳಲ್ಲಿ ಕಾಣುಬರುವ ಮುಖ್ಯವಾದ ವನ್ಯಪಶುಗಳು ಯಾವು ? ಅವುಗಳ ರಕ್ಷಣೆಯನ್ನು ಎಲ್ಲಿ ಮಾಡುವರು ?
12. ' ರೇಶಿಮೆಯ ಹುಟ್ಟುವಳಿಯಲ್ಲಿ ಭಾರತದೊಳಗೆ ನವಮೈಸೂರು ರಾಜ್ಯವೆ ಮೊದಲನೆಯದಾಗಿದೆ ' ಹೇಗೆಂಬುದನ್ನು ವಿವೇಚಿಸಿರಿ.

## 8. : : : : : : : : : : ಖನಿಜಗಳು

ತಾಯಿಯು ತನ್ನ ಮಡಿಲಲ್ಲಿ ಬಚ್ಚಿಟ್ಟುಕೊಂಡ ವಸ್ತುಗಳನ್ನು ತನ್ನ ಪ್ರೀತಿಯ ಮಕ್ಕಳಿಗಾಗಿ ಕೊಡಮಾಡುವದಿಲ್ಲವೆ ? ಭೂಮಾತೆಯು ಅನೇಕ ಬೆಲೆಯುಳ್ಳ ವಸ್ತುಗಳನ್ನು ತನ್ನ ಒಡಲಿನಲ್ಲಿ ತನ್ನ ಮಕ್ಕಳಿಗಾಗಿ ಕಾದಿಟ್ಟುಕೊಂಡಿರುವಳು. ಅವುಗಳನ್ನು ಜನರು ಕಂಡು ಹಿಡಿದಿದ್ದಾರೆ, ಇನ್ನೂ ಕೆಲವು ಬೆಳಕಿಗೆ ಬರಬೇಕಾಗಿದೆ. 'ಖನನ' ವೆಂದರೆ ಅಗಿಯುವದು. ಈ ವಸ್ತುಗಳನ್ನು ಭೂಮಿಯಿಂದ ಅಗಿದು ತೆಗೆಯಬೇಕಾಗುವದರಿಂದ ಇವುಗಳಿಗೆ ' ಖನಿಜ ' ಗಳೆನ್ನುವರು. ಇವುಗಳನ್ನು ತೋಡಿ ತೆಗೆಯುವ ಸ್ಥಳಗಳಿಗೆ ' ಖಣಿ ' ಗಳೆನ್ನುವರು. ನವಮೈಸೂರು ರಾಜ್ಯದ ಹೆಚ್ಚಿನ ಭಾಗವು ಅತಿ ಪ್ರಾಚೀನ ಶಿಲೆಯಿಂದ ನಿರ್ಮಿತವಾದ ಪ್ರದೇಶವಾಗಿದೆ. ಇಲ್ಲಿ ವಿವಿಧವಾದ ಖನಿಜಗಳು ವಿಪುಲವಾಗಿ ದೊರೆಯುವವು. ಖನಿಜ ನಿಧಿಗಾಗಿ ಭಾರತದಲ್ಲಿಯೆ ಮೈಸೂರು

ರಾಜ್ಯಕ್ಕೆ ಹೆಚ್ಚಿನ ಸ್ಥಾನವಿದೆ. ನಮ್ಮ ರಾಜ್ಯದಲ್ಲಿ ದೊರೆಯುವ ಖನಿಜ ಸಂಪತ್ತು ವಿಪುಲವಾಗಿರುವಂತೆ, ವಿವಿಧವೂ ಆಗಿದೆ. ಖನಿಜಗಳು ಸಮೃದ್ಧಿ




ಯಿಂದ ಕೂಡಿದ ಮೂರು ಪಟ್ಟಿಗಳು ಈ ರಾಜ್ಯದಲ್ಲಿ ಕಂಡು ಬರುವವು. ಸೊಂಡೂರು, ಶಿವಮೊಗ್ಗ, ಬೆಳಗಾಂವಿಯ ಭಾಗಗಳಲ್ಲಿ ಖನಿಜಗಳ ಒಂದು ಪಟ್ಟಿಯು ಪಸರಿಸಿದೆ. ಕೋಲಾರ ಹಾಗೂ ಹಟ್ಟಿಯ ಬಂಗಾರದ ಖಣಿಗಳದು ಇನ್ನೊಂದು ಪಟ್ಟಿ. ಮೂರನೆಯದು ಕೊಡಗು ನೀಲಗಿರಿಗಳ ಭಾಗದಲ್ಲಿ ನೆಲೆಸಿದೆ.

ಚಿನ್ನ:—ಮೈಸೂರು ರಾಜ್ಯಕ್ಕೆ ಚಿನ್ನದ ನಾಡು' ಎಂದು ಕವಿಯು ಹೇಳಿರುವದು ಕೇವಲ ಅಭಿಮಾನದ ಮಾತಾಗಿಲ್ಲ, ಸತ್ಯ ಸಂಗತಿಯಾಗಿದೆ. ಭಾರತದ ಒಟ್ಟು ಚಿನ್ನದ ಹುಟ್ಟುವಳಿಯಲ್ಲಿ ನೂರಕ್ಕೆ 85 ರಷ್ಟು, ಮೈಸೂರು ರಾಜ್ಯದಲ್ಲಿಯೆ ಉತ್ಪನ್ನವಾಗುತ್ತಿದೆ. ಈ ರಾಜ್ಯದಲ್ಲಿ ಬಂಗಾರದ ಖಣಿಗಳು

ಎರಡು ಕಡೆಯಲ್ಲಿ ನೆಲೆಸಿವೆ. ಕೋಲಾರ ಹಾಗೂ ರಾಯಚೂರ ಜಿಲ್ಹೆಯ ಹಟ್ಟಿ ಯೆಂಬಲ್ಲಿ ಬಂಗಾರದ ಖಣಿಗಳಿವೆ. ಕೋಲಾರದ ಖಣಿಗಳು ಸುಮಾರು 10 ಸಾವಿರ ಅಡಿಗಳಷ್ಟು ಆಳವಾಗಿವೆ. ಜಗತ್ತಿನಲ್ಲಿ ಅತಿ ಹೆಚ್ಚು ಆಳವಾದ ಖಣಿಗಳಿವು. ಈ ಖಣಿಗಳಲ್ಲಿ ಉಪಯೋಗಿಸುವ ಯಂತ್ರ ಸಾಮುಗ್ರಿಯು ಅತ್ಯಂತ ಅಧುನಿಕವಾಗಿದೆ.

ಕೋಲಾರದ ಚಿನ್ನದ ಗಣಿಯಲ್ಲಿ ಅತಿ ಅಲ್ಪ ಪ್ರಮಾಣದಲ್ಲಿ ಬೆಳ್ಳಿಯೂ ದೊರೆಯುವದು.

ಈ ಖಣಿಗಳ ಒಡೆತನವು ಮೊನ್ನೆ ಮೊನ್ನೆಯವರೆಗೆ ಒಂದು ವಿದೇಶಿಯ ಕಂಪನಿಯ ಕೈಯಲ್ಲಿ ಇತ್ತು , ಮೈಸೂರು ರಾಜ್ಯ ಸರಕಾರವು ಇಂದು ಅವುಗಳ ಒಡೆತನವನ್ನೂ ಆಡಳಿತವನ್ನೂ ತನ್ನ ವಶಕ್ಕೆ ತೆಗೆದುಕೊಂಡಿದೆ.

' ಹಟ್ಟಿ ' ಯಲ್ಲಿಯ ಖಣಿಗಳ ಒಡೆತನವು ಒಂದು ಕಂಪನಿಗೆ ಸೇರಿದ್ದಾಗಿದೆ. ಕೊಳ್ಳೇಗಾಲ ತಾಲೂಕು, ಕಲಬುರ್ಗಿ ಜಿಲ್ಹೆ, ಬೆಳಗಾಂವಿ ಜಿಲ್ಹೆಯಲ್ಲಿ ಮುರಗೋಡ ಎಂಬಲ್ಲಿ, ಬಳ್ಳಾರಿ, ಹಾಗೂ ವಿಜಾಪೂರ ಜಿಲ್ಹೆಯ ಕೆಲವು ಭಾಗಗಳಲ್ಲಿ ಚಿನ್ನದ ಅದಿರು ದೊರೆಯಬಹುದೆಂಬ ನಿರೀಕ್ಷೆಯಿದೆ.

ಕಬ್ಬಿಣ :— ಚಿಕ್ಕಮುಗಳೂರು ಜಿಲ್ಹೆಯ ಬಾಬಾಬುಡನ್ ಬೆಟ್ಟ ( ಕೆಮ್ಮಣ್ಣುಗುಂಡಿ ) ದಲ್ಲಿ ಕಬ್ಬಿಣದ ಅದಿರು ವಿಪುಲವಾಗಿ ದೊರೆಯುತ್ತಿದೆ.



ಕೆಮ್ಮನಗುಂಡಿಯಿಂದ— ಕಬ್ಬಿಣದ ಅದಿರನ್ನು ಸಾಗಿಸುವದು

ಭದ್ರಾವತಿಯ ಕಬ್ಬಿಣ-ಉಕ್ಕುಗಳ ಕಾರಖಾನೆಗೆ ಇಲ್ಲಿ ದೊರೆಯುವ ಕಬ್ಬಿಣ ಅದಿರಿನ ಪೂರೈಕೆಯಾಗುತ್ತದೆ. ಶಿವಮೊಗ್ಗ, ಹಾಸನ ಹಾಗೂ ಮೈಸೂರು

ಜಿಲೆ ಗಳಲಿಯೂ ಕಬ್ಬಿಣ ಅದಿರು ಅಲ್ಪಪ್ರಮಾಣದಿಂದ ದೊರೆಯುತ್ತಿದೆ. ಸೊಂಡೂರಿನ ನೆರೆಯಲ್ಲಿ ದೊರೆಯುವ ಕಬ್ಬಿಣದ ಅದಿರು ಒಳ್ಳೇ ಶ್ರೇಷ್ಠ ತರಗತಿಯದಾಗಿರುವದು. ಕುಷ್ಟಗಿ ಹಾಗೂ ರಾಯಚೂರ ಜಿಲ್ಹೆಗಳಲ್ಲಿಯೂ ಕಬ್ಬಿಣದ ಅದಿರಿನ ಸಂಗ್ರಹವಿರುವದೆಂದು ಕಂಡುಬಂದಿದೆ.

ಮ್ಯಾಂಗನೀಜ :- ನೀವು ಹಂಪೆಯನ್ನು ನೋಡಿರುವಿರಲ್ಲವೆ ? ಹೊಸಪೇಟೆಯ ನೆರೆಯಲ್ಲಿ ಒಂದು ಚಿಕ್ಕ ಬೆಟ್ಟವಿದೆ. ಆ ಬೆಟ್ಟದ ತುದಿಯಲ್ಲಿ ವಿಜಯನಗರದ ರಾಜರು ಕಟ್ಟಿಸಿದ ಶಿವಾಲಯವಿದೆ. ನೀವು ಅಲ್ಲಿಗೆ ಹೋದರೆ ಅಥವಾ ಯಾರಾವರೂ ಹೋಗಿ ಬರುವವರಿದ್ದರೆ, ಆ ಬೆಟ್ಟದಲ್ಲಿಯ ಒಂದು ಕಲ್ಲಿನ ತುಣುಕನ್ನು ತರಹೇಳಿರಿ. ನಿಮ್ಮ ಗುರುಗಳಿಗೆ ಅದನ್ನು ತೋರಿಸಿರಿ. ಅದರಲ್ಲಿ ಹೊಳೆಯುವ ಗೆರೆಗೆರೆಗಳನ್ನು ಅವರು ತೋರಿಸುವರು. ಅವು ಮ್ಯಾಂಗನೀಜ ಲೋಹದ ಎಳೆಗಳು. ಮ್ಯಾಂಗನೀಜವೆಂಬುದು ಇಂಗ್ಲಿಷ ಶಬ್ದ, ' ಲೋಹಮುಂಡೂರ ' ವೆಂದು ಅದಕ್ಕೆ ದೇಶೀಯ ಭಾಷೆಯಲ್ಲಿ ಹೇಳುವರು. ಕಬ್ಬಿಣದಿಂದ ಉಕ್ಕನ್ನು ತಯಾರಿಸಲು ಈ ಲೋಹವನ್ನು ಅದರಲ್ಲಿ ಬೆರೆಸುವರು.

ಶಿವಮೊಗ್ಗ, ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು, ಬೆಳಗಾಂವಿ, ಬಳ್ಳಾರಿ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಹೆಗಳಲ್ಲಿ ಮ್ಯಾಂಗನೀಜದ ಅದಿರು ಸಮೃದ್ಧವಾಗಿ ದೊರೆಯುವದು. ಸೊಂಡೂರಿನ ನೆರೆಹೊರೆಯ ಕುಮಾರಸ್ವಾಮಿ ಬೆಟ್ಟ ಮುಂತಾದ ಬೆಟ್ಟಗಳಲ್ಲಿ ದೊರೆಯುವ ಈ ಲೋಹವು ಮೇಲ್ತರಗತಿಯದಾಗಿರುವದು.

ಅಭ್ರಕ: — ಇದಕ್ಕೆ ' ಅಭ್ರರಂಗ ' ವೆಂತಲೂ ಕರೆಯುವರು. ಅಭ್ರಕವು ಕಾಜಿನಂತೆ ಪಾರದರ್ಶಕವಾಗಿದೆ. ಅದು ಒಂದು ಬಗೆಯ ಶಿಲೆ—ರಂಗೋಲಿಯ ಕಲ್ಲಿನಂತೆ. ಈ ಶಿಲೆಯಲ್ಲಿ ಬೇಕಾದಷ್ಟು ತೆಳುವಾದ ಪದರುಗಳನ್ನು ಬೇರೆ ಬೇರೆಯಾಗಿ ತೆಗೆಯಲು ಬರುವದು. ರಂಗೋಲಿಯ ಹರಳಿನಂತೆ ಅಭ್ರಕವಾದರೂ ಬಿಸಿಲಿನಲ್ಲಿ ಚಮಕಿಸುವದು. ಮೈಸೂರು ರಾಜ್ಯದಲ್ಲಿ ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಲ್ಲಿ ತುಸು ಅಭ್ರಕವು ದೊರೆಯುವದು.

ಬಾಕ್ಸಾಯಿಟ :— ಈ ಖನಿಜದಿಂದ ಅಲ್ಯೂಮಿನಮ್ ಧಾತುವು ಹೊರಡುವದು. ಅಲ್ಯೂಮಿನಮ್‌ದ ಪಾತ್ರೆಗಳನ್ನು ನಿಮ್ಮ ಮನೆಯಲ್ಲಿ ನೀವು ನಿತ್ಯ ನೋಡುವಿರಿ. ಪಾತ್ರೆ ತಯಾರಿಕೆಗಿಂತಲೂ ಹೆಚ್ಚಿನ ಉಪಯೋಗವನ್ನು

ಈ ಧಾತುವಿನಿಂದ ಮಾಡಿಕೊಳ್ಳುವರು. ಅಲ್ಯೂಮಿನಮ್‌ದಲ್ಲಿ ಎರಡು ಒಳ್ಳೆ ಗುಣಗಳಿವೆ. ಅದು ಹಗುರಾಗಿದೆ, ಗಟ್ಟಿಯೂ ಆಗಿದೆ. ಆದುದರಿಂದ ವಿಮಾನ ಗಳ ಮೇಲ್ಮೈಯನ್ನು ರಚಿಸಲು ಇದು ಒಳ್ಳೇ ಉಪಯುಕ್ತವಾಗಿದೆ, ಅಗತ್ಯ ವಾಗಿದೆ. ಕಲ್ಲೆಣ್ಣೆಯನ್ನು ಶುದ್ಧಗೊಳಿಸಲೂ ಬಾಕ್ಸಾಯಿಟನ್ನು, ಉಪಯೋಗಿ ಸುವರು.

ನವ ಮೈಸೂರು ರಾಜ್ಯದಲ್ಲಿ ಬಾಕ್ಸಾಯಿಟ ಖನಿಜವು ಸಮೃದ್ಧವಾಗಿ ದೊರೆಯುತ್ತಿದೆ. ನಮ್ಮ ರಾಜ್ಯದ ಮಹತ್ವದ ಖನಿಜಗಳಲ್ಲಿ ಇದೂ ಒಂದಾ ಗಿದೆ. ಈ ಖನಿಜವು ಬೆಳಗಾಂವಿ ಜಿಲ್ಹೆಯಲ್ಲಿ ಅಧಿಕವಾಗಿ ದೊರೆಯುತ್ತಿದೆ. ಚಿಕ್ಕಮಂಗಳೂರು ಹಾಗೂ ಚಿತ್ರದುರ್ಗಗಳಲ್ಲಿಯೂ ಇದು ದೊರೆಯುವದು.

'ಕ್ರೋಮೈಟ':— ಇದು ನಮ್ಮ ರಾಜ್ಯದಲಿ ದೊರೆಯುವ ಇನ್ನೊಂದು ಮಹತ್ವದ ಖನಿಜವಾಗಿದೆ. ಇಂದು ಮನೆಮನೆಯಲ್ಲಿ ಬಳಸುವ 'ಸ್ಟೇನಲೆಸ್ ಸ್ಟೀಲ'ದ ಪಾತ್ರೆಗಳನ್ನು ನೋಡಿರುವಿರಿ. ಇವುಗಳ ತಯಾರಿಕೆ ಯಲಿ ಕ್ರೋಮೈಟದ ಉಪಯೋಗವಾಗುವದು. ಚರ್ಮ ಹದ ಮಾಡುವದ ರಲ್ಲಿಯೂ ಇದನ್ನು ಉಪಯೋಗಿಸುವರು.

ನಮ್ಮ ರಾಜ್ಯದಲ್ಲಿ ಕ್ರೋಮೈಟ ಹೆಚ್ಚಾಗಿ ದೊರೆಯುವದು ಶಿವ ಮೊಗ್ಗೆ, ಚಿಕ್ಕಮಗಳೂರು, ಚಿತ್ರದುರ್ಗ ಹಾಗೂ ಮೈಸೂರು ಜಿಲ್ಲೆಗಳಲ್ಲಿ. ಮೈಸೂರು ಜಿಲ್ಹೆಯಲ್ಲಿ ದೊರೆಯುವ ಕ್ರೋಮೈಟ ಉತ್ತಮ ತರಗತಿಯ ದಾಗಿದೆ.

ಇವುಗಳಲ್ಲದೆ ರಾಜ್ಯದ ಕೆಲವು ಭಾಗಗಳಲ್ಲಿ ದೊರೆಯುವ 'ಚೀನೀ ಮಣ್ಣು' ಹಾಗೂ ಜಿಗಟು ಮಣ್ಣು ಉಪಯುಕ್ತವಾಗಿವೆ. ಚೀನಿ ಮಣ್ಣಿ ನಿಂದ ಬಗೆಬಗೆಯ ವಸ್ತುಗಳನ್ನು ತಯಾರಿಸುವ ಕಾರ್ಖಾನೆಯನ್ನು ರಾಜ್ಯ ಸರಕಾರವೆ ನಡೆಸುವದು. ಮಂಗಳೂರಿನ ಹಂಚಿನ ಕಾರ್ಖಾನೆಗಳೂ ಹೆಸ ರಾಗಿವೆ.

ಸುಣ್ಣದ ಕಲ್ಲು: ಇದು ಈ ರಾಜ್ಯದಲ್ಲಿ ಸಿಗುವ ಇನ್ನೊಂದು ಬೆಲೆಯುಳ್ಳ ಖನಿಜವಾಗಿದೆ. ಮೈಸೂರು, ಶಿವಮೊಗ್ಗೆ, ವಿಜಾಪೂರ ಮುಂತಾದ ಜಿಲ್ಹೆಗಳಲ್ಲಿ ಇದು ದೊರೆಯುತ್ತಿದೆ. ಸಿಮೆಂಟಿನ ತಯಾರಿಕೆ ಯಲ್ಲಿ ಇದು ಅಗತ್ಯವಾಗಿದೆ.

ವಿಜಾಪೂರ ಜಿಲ್ಹೆಯಲ್ಲಿ ಕಲಾದಗಿಯಿಂದ ತಾಳೀಕೋಟೆಯ ವರೆಗೆ ಸುಣ್ಣದ ಕಲ್ಲಿನ ಒಂದು ಅಂಕುಡೊಂಕಾದ ಪಟ್ಟಿಯೇ ನೆಲೆಸಿದೆ. ಉಸುಕು

ಕಲ್ಲು, ಪಾಟೀ ಕಲ್ಲು ಕೂಡ ಇದೇ ಜಿಲ್ಲೆಗಳಲ್ಲಿ ದೊರೆಯುವವು ' ಇಲ್ಲಿ ಕಂಡು ಬರುವ ಪಾಟೀಕಲ್ಲುಗಳು ಜಗತ್ತಿನಲ್ಲಿಯೇ ಶ್ರೇಷ್ಠವಾದವುಗಳು.

ಇನ್ನೂ ಅನೇಕ ಖನಿಜಗಳು ಈ ರಾಜ್ಯದಲ್ಲಿ ಅಲ್ಲಲ್ಲಿ ದೊರೆಯುವವು. ಆದರೆ ಅವುಗಳ ಉತ್ಪತ್ತಿಯು ಅಷ್ಟೊಂದು ಅಧಿಕವಾಗಿರುವದಿಲ್ಲ.

ನೀವು ವಾಸಿಸುವ ಜಿಲ್ಹೆಯಲ್ಲಿ ಯಾವ ಖನಿಜಗಳು ದೊರೆಯುತ್ತಿವೆ ? ಜಿಲ್ಹೆಯ ಯಾವ ಭಾಗದಲ್ಲಿ ? ಎಂಬುದನ್ನು ಗೊತ್ತು ಮಾಡಿಕೊಳ್ಳಿರಿ. ಅಲ್ಲಿ ದೊರೆಯುವ ಅದಿರಿನ ಒಂದು ತುಣುಕನ್ನು ಸಂಪಾದಿಸಿರಿ. ಅದರ ಬಣ್ಣ, ಭಾರ' ಹೊಳವುಗಳನ್ನು ಚೆನ್ನಾಗಿ ನಿರೀಕ್ಷಿಸಿರಿ. ಆಂದರೆ, ಅಂಥ ಅದರಿನ ಶಿಲೆ ಬೇರೆ ಎಲ್ಲಿ ಯಾವರೂ ಕಂಡುಬಂದರೆ ನೀವು ಗುರುತಿಸಬಲ್ಲಿರಿ.

## (8) ಅಭ್ಯಸನಗಳು

1. ' ಖನಿಜ ' ವೆಂದು ಯಾವುದಕ್ಕೆ ಹೇಳುವರು ? ಖನಿಜಗಳು ಹೆಚ್ಚಾಗಿ ಎಲ್ಲಿ ದೊರೆಯುವವು ?
2. ಖನಿಜಗಳಿಂದ ಕೂಡಿದ ಪಟ್ಟಿಗಳು ನಮ್ಮ ರಾಜ್ಯದ ಯಾವ ಭಾಗಗಳಲ್ಲಿ ಕಂಡು ಬರುವವು ?
3. ' ಚಿನ್ನದ ನಾಡು ' ಮೈಸೂರು ಎಂಬ ಹೊಗಳಿಕೆ ಈ ರಾಜ್ಯಕ್ಕೆ ಹೇಗೆ ಸಾರ್ಥಕವಾಗಿದೆ ?
4. ಕಬ್ಬಿಣದ ಅದಿರು ನಮ್ಮ ರಾಜ್ಯದ ಯಾವ ಭಾಗದಲ್ಲಿ ಸಮೃದ್ಧವಾಗಿ ದೊರೆಯುವದು ?
5. (ಅ) ಮ್ಯಾಂಗನೀಜ, ಅಭ್ರಕ, ಕ್ರೋಮೈಟ—ಇವುಗಳ ಉಪಯೋಗವನ್ನು ಬರೆಯಿರಿ.
   (ಬ) ನಮ್ಮ ರಾಜ್ಯದ ಬಾಹ್ಯರೇಷೆಯ ನಕಾಶದಲ್ಲಿ ಇವು ದೊರೆಯುವ ಸ್ಥಳಗಳನ್ನು ಗುರುತಿಸಿರಿ.
6. (ಅ) ಅಲ್ಯುಮಿನಮ್ ಯಾವ ಖನಿಜದಿಂದ ಹೊರಡುವದು ?
   (ಬ) ಇಂದಿನ ಕಾಲದಲ್ಲಿ ಅಲ್ಯುಮಿನಮ್‌ಗೆ ಒಳ್ಳೇ ಮಹತ್ವವಿದೆ. ಏಕೆ ?
7. ನಮ್ಮ ರಾಜ್ಯದ ಖನಿಜಗಳಾದ ಯಾವ ಕಲ್ಲುಗಳು—ಮಣ್ಣುಗಳು ಉಪಯುಕ್ತವಾಗಿವೆ ?

## 9. : : : : : : : ಕೈಗಾರಿಕೆಗಳು—ಉದ್ಯಮಗಳು

ಕೈಗಾರಿಕೆಗಳು:— ಒಕ್ಕಲುತನವೇ ಸಮಗ್ರ ಭಾರತದ ಮುಖ್ಯ ಉದ್ಯೋಗವೆಂದು ಹೇಳುವದುಂಟು. ಆದರೆ ಭಾರತದ ಹಿಂದಿನ ಇತಿಹಾಸವನ್ನು ನೋಡಿದರೆ, ಈ ಮಾತು ಸಂಪೂರ್ಣ ಸತ್ಯವೆಂದು ಹೇಳುವಂತಿಲ್ಲ. ಬಹಳ ಹಿಂದಿನ ಕಾಲದಿಂದಲೂ ಈ ದೇಶವು ಅನೇಕ ಕೈಗಾರಿಕೆಗಳಿಗಾಗಿ ಹೆಸರಾಗಿದೆ. ಇಲ್ಲಿ ತಯಾರಿಸಿದ ನಯವಾದ ಬಟ್ಟೆಗಾಗಿ ಯುರೋಪದ ದೇಶಗಳು ಹಾತೊರೆಯುತ್ತಿದ್ದವು. ಕಟ್ಟಿಗೆ-ಕಲ್ಲುಗಳಲ್ಲಿ ಕಟೆದ, ಕೆತ್ತಿದ ಸುಂದರವಾದ ಒಡವೆಗಳನ್ನು ಇಲ್ಲಿಂದ ದೂರದೂರದ ದೇಶಗಳಿಗೆ ವರ್ತಕರು




ತೆಗೆದುಕೊಂಡು ಹೋಗುತ್ತಿದ್ದರು. ಕೆಲವೊಂದು ಕಾರಣಗಳಿಗಾಗಿ ಈ ಕೈಗಾರಿಕೆಗಳು ಅಳಿದು ಹೋದವು, ಉಳಿದವುಗಳಿಗೆ ಉತ್ತೇಜನವಿರಲಿಲ್ಲ. ಗಾಂಧೀಜಿಯವರು ಅಳಿದುಹೋಗಲಿರುವ ಈ ಕೈಗಾರಿಕೆಗಳಿಗೆ ಮತ್ತೆ ಜೀವ

ಕಳೆ ತುಂಬಿದರು. ಸುಗ್ಗಿ ಮುಗಿದ ನಂತರ ನಮ್ಮ ದೇಶದ ಒಕ್ಕಲಿಗರಿಗೆ ಹೆಚ್ಚಿನ ಕೆಲಸವಿರುವದಿಲ್ಲ. ಈ ಬಿಡುವಿನ ಸಮಯವನ್ನು ಅವರು ಕೈಗಾರಿಕೆಗಾಗಿ ಉಪಯೋಗಿಸುವಂತಿದೆ. ಇವುಗಳಿಂದ ಬರುವ ತುಸು ಹಣವು ಕೂಡ ಅವರಿಗೆ ಸಂಸಾರಕ್ಕೆ ಸಹಾಯಕವಾಗುವದು. ಒಕ್ಕಲಿಗರ ಹಣದ ಅಡಚಣಿಯು ತುಸುಮಟ್ಟಿಗೆ ಕಡಿಮೆಯಾಗಬೇಕು. ಹಾಗೂ ಕೈಗಾರಿಕೆಯ ಒಡವೆಗಳು ಹೆಚ್ಚು ಒಳ್ಳೆಯವುಗಳಾಗಬೇಕು ಎಂಬೀ ಉದ್ದೇಶದಿಂದ ನಮ್ಮ ಸರಕಾರವು ಅವುಗಳಿಗೆ ನೆರವು ನೀಡುತ್ತಿದೆ, ಉತ್ತೇಜನ ಕೊಡುತ್ತಿದೆ.

ಪೂರ್ವದ ಹಾಗೂ ಇಂದಿನ ವಿಶಾಲ ಮೈಸೂರರಾಜ್ಯದಲ್ಲಿ ಕೆಲವೊಂದು ಕೈಗಾರಿಕೆಗಳು ಪರಂಪರೆಯಿಂದ ಬೆಳೆದು ಬಂದಿವೆ. ಅವುಗಳಲ್ಲಿ ನೇಕಾರಿಕೆ ಮುಖ್ಯವಾದುದು. ನಮ್ಮ ಹೆಣ್ಣು ಮಕ್ಕಳೇ ಹೆಚ್ಚಾಗಿ ಈ ಕೈಗಾರಿಕೆಯನ್ನು ಬದುಕಿಸಿಕೊಂಡು ಬಂದಿರುವರು. ಅವರ ನಿತ್ಯದ ಬಟ್ಟೆಗಳಾದ ಸೀರೆ ಖಣಗಳನ್ನು, ಹಬ್ಬದ ಬಟ್ಟೆಗಳಾದ ಪತ್ತಲಪೀತಾಂಬರಗಳನ್ನು ಕೈಮಗ್ಗದ ನೇಕಾರಿಕೆಯೆ ಒದಗಿಸುತ್ತಿರುವದು. ಇತ್ತೀಚೆಗೆ ಕೆಲವೊಂದು ಸ್ಥಳಗಳಲ್ಲಿ ಕೈಮಗ್ಗಗಳು ಕೂಡ ಯಾಂತ್ರಿಕ ಶಕ್ತಿಯ ನೆರವನ್ನು ತೆಗೆದುಕೊಳ್ಳುತ್ತಿರುವವು.

ನೇಕಾರಿಕೆಯು ನಮ್ಮ ರಾಜ್ಯದ ಎಲ್ಲ ಭಾಗಗಳಲ್ಲಿಯೂ ತುಸು ಹೆಚ್ಚು ಕಡಿಮೆಯಾಗಿ ಸಾಗಿ ಬಂದಿದೆ. ಮೈಸೂರು, ದಾವಣಗೆರೆ, ಇಳಕಲ್ಲು, ಗುಳೇದಗುಡ್ಡ, ಗದಗು–ಬೆಟಗೇರಿ, ಬೆಳಗಾಂವಿ, ರಬಕವಿ ಮುಂತಾದ ಸ್ಥಳಗಳು ಈ ರಾಜ್ಯದ ನೇಕಾರಿಕೆಯ ಕೇಂದ್ರಗಳಾಗಿವೆ. ಇಲ್ಲಿ ತಯಾರಿಸುವ ಸೀರೆ ಖಣಗಳಿಗೆ ಹೊರನಾಡುಗಳಲ್ಲಿಯೂ ಬೇಡಿಕೆಯಿದೆ. ಯಂತ್ರಗಳ ಸ್ಪರ್ಧೆಯಲ್ಲಿ ಕೈಮಗ್ಗದ ನೇಕಾರಿಕೆ ಅಳಿದು ಹೋಗಬಾರದೆಂದು ಸರಕಾರವು ನೇಕಾರರಿಗೆ ಅಗತ್ಯವಿರುವ ನೆರವನ್ನು ನೀಡುತ್ತಿದೆ. ನೇಕಾರರ ಮಕ್ಕಳು ತಮ್ಮ ಮನೆತನದ ಉದ್ಯೋಗವನ್ನು ಮುಂದೆ ಸಾಗಿಸಬೇಕು, ಅದರಲ್ಲಿ ಪ್ರಗತಿಯನ್ನು ಸಾಧಿಸಬೇಕು. ಇದಕ್ಕಾಗಿ ಅವರಿಗೆ ಶಿಷ್ಯವೃತ್ತಿಯನ್ನು ಕೊಟ್ಟು ತರಬೇತು ಮಾಡಲಾಗುತ್ತಿದೆ.


ನೇಕಾರಿಕೆ

**ಹಸ್ತಿದಂತ ಹಾಗೂ ಗಂಧದ ಕಟ್ಟಿಗೆಯ ಕಲಾಕೃತಿಗಳು :–**

ಇವು ನಮ್ಮ ರಾಜ್ಯದ ಹೆಸರಾದ ಕೈಗಾರಿಕೆಗಳಾಗಿವೆ. ಪ್ರಾಚೀನ ಕಾಲ ದಿಂದಲೂ ಈ ಕಲೆಯು ನಮ್ಮ ರಾಜ್ಯದಲ್ಲಿ ಬೆಳೆದು ಬಂದಿದೆ. ಈ ಕಲೆ ಯಲ್ಲಿ ತೊಡಗಿದವರಿಗೆ 'ಗುಡಿಗಾರ'ರೆಂದು ಹೇಳುವರು. ಕುಮಟಾ, ಹೊನ್ನಾ ವರ, ಸೊರಬ ಹಾಗೂ ಶಿವಮೊಗ್ಗೆ ಈ ಸ್ಥಳಗಳಲ್ಲಿ ಗುಡಿಗಾರರ ಮನೆತನ ಗಳು ಇನ್ನೂ ಉಳಿದುಕೊಂಡಿವೆ. ಮೂರ್ತಿಗಳು, ಪಶು ಪಕ್ಷಿಗಳು ಮೊದ ಲಾದವುಗಳನ್ನು ಹಸ್ತಿದಂತದಲ್ಲಿ ಹಾಗೂ ಗಂಧದ ಕಟ್ಟಿಗೆಯಲ್ಲಿ ಇವರು ಅಂದ ವಾಗಿ ರಚಿಸುವರು. ಇವರ ಕತ್ತನೆಯ ಕೆಲಸ ಸೂಕ್ಷ್ಮವಾಗಿದೆ. ಕುಶಲತೆ ಯಿಂದ ಕೂಡಿದೆ. ಉತ್ತೇಜನವಿಲ್ಲದೆ ಗುಡಿಗಾರರ ಈ ಶ್ರೇಷ್ಠ ಕಲೆಯು ಅರೆಜೀವವಾಗಿ ಉಳಿದಿತ್ತು. ಇಂದು ಸರಕಾರವು ಈ ಕಲೆಗೆ ಪ್ರೋತ್ಸಾಹ ಕೊಡುತ್ತಿದೆ. ಈ ಕಲೆಯಲ್ಲಿ ಶಿಕ್ಷಣವನ್ನು ಕೊಡಲು ಸಾಗರದಲ್ಲಿ ಒಂದು ಶಾಲೆಯಯನ್ನು ಸ್ಥಾಪಿಸಿರುವರು; ಮೈಸೂರಿನ ಚಾಮರಾಜೇಂದ್ರ ಸಂಸ್ಥೆ ಯಲ್ಲಿಯೂ ಈ ಕಲೆಯಲ್ಲಿ ಶಿಕ್ಷಣವನ್ನು ಕೊಡುತ್ತಿರುವರು.

ಕಟ್ಟಿಗೆಯ ವಸ್ತುಗಳಲ್ಲಿ ಹಸ್ತಿದಂತವನ್ನು ತುಂಬುವದು ಈ ರಾಜ್ಯದ ಪ್ರಾಚೀನ ಕೈಗಾರಿಕೆಗಳಲ್ಲಿ ಒಂದಾಗಿದೆ. ಚಿಕ್ಕ ಪೆಟ್ಟಿಗೆ, ಕೈಗೋಲಿನ ಹಿಡಿಕೆ, ಬಾಗಿಲದ ಚೌಕಟ್ಟು, ಇವೇ ಮೊದಲಾದ ವಸ್ತುಗಳಲ್ಲಿ ಅಂದವಾದ ಸುಳುವು ಹೊಳವುಗಳನ್ನು ಇವರು ತುಂಬುವರು. ರೋಜವುಡ್ ಕಟ್ಟಿಗೆಯಲ್ಲಿ ಅನೇಕ ಆಕೃತಿಗಳನ್ನು ಹಸ್ತಿದಂತದಲ್ಲಿ ತುಂಬಿದ ಅನೇಕ ವಸ್ತು ಗಳಿಗೆ ವಿದೇಶಗಳಲ್ಲಿಯೂ ಬೇಡಿಕೆಯಿದೆ.



ತಾಮ್ರ-ಹಿತ್ತಾಳೆ ಪಾತ್ರೆಗಳು

ತಾಮ್ರ-ಹಿತ್ತಾಳೆ ವಸ್ತುಗಳ ತಯಾ ರಿಕೆಯೂ ಒಂದು ಕೈಗಾರಿಕೆಯಾಗಿದೆ. ನಾಗ ಮಂಗಲ, ಮೈಸೂರು, ಮಂಗಳೂರು, ಹುಬ್ಬಳ್ಳಿ, ಗದಗು, ವಿಜಾಪೂರ ಜಿಲ್ಹೆಯ ಗುಡೂರು ಈ ಊರುಗಳಲ್ಲಿ ಈ ಕೈಗಾರಿ ಕೆಯು ನಡೆಯುವದು. ತಾಮ್ರ, ಹಿತ್ತಾಳೆ, ಕಂಚುಗಳಿಂದ ಮನೆಗೆಲಸದ ಪಾತ್ರೆಗಳನ್ನೂ, ಮೂರ್ತಿಗಳನ್ನೂ ಇಲ್ಲಿಯ 'ಬೋಗಾರ'ರು ರಚಿಸುವರು ನಾಗಮಂಗಲದ ತಾಂತ್ರಿಕ ಶಾಲೆಯಲ್ಲಿ ಈ ಕಲೆಯ ಶಿಕ್ಷಣವನ್ನು ಕೊಡ ಲಾಗುತ್ತಿದೆ.

**ಮಕ್ಕಳ ಆಟದ ಒಡವೆಗಳು** :— ಅರಗಿನಲ್ಲಿ ಮಕ್ಕಳ ಆಟದ ಒಡವೆಗಳ ತಯಾರಿಕೆಯಲ್ಲಿ ಮೈಸೂರು ಮೊದಲಿನಿಂದಲೂ ಹೆಸರಾಗಿದೆ. ಮೈ-ಸೂರು ರಾಜ್ಯದ ಅಡವಿಗಳಲ್ಲಿ ದೊರೆಯುವ ಒಂದು ಬಗೆಯ ಕಟ್ಟಿಗೆಯನ್ನು ಇದಕ್ಕಾಗಿ ಉಪಯೋಗಿಸುವರು.


ಕಟ್ಟಿಗೆಯ ಒಡವೆಗಳು

ಹೂವಿನ ಪಾತ್ರೆ, ಊದು ಬತ್ತಿಯ ಪಾತ್ರೆ, ದೌತಿ, ಲೇಖಣಿಯ ಹಿಡಿಕೆ ಮುಂತಾದ ವಸ್ತುಗಳನ್ನು ಇದರಿಂದ ಸಿದ್ಧಗೊಳಿಸುವರು. ಚಿಕ್ಕಮಗಳೂರು, ನಾಗಮಂಡಲಗಳಲ್ಲಿ ಈ ಕಲೆಯಲ್ಲಿ ಶಿಕ್ಷಣ ಕೊಡುವರು.

ಕೊಪ್ಪಳದಿಂದ 8 ಮೈಲಿನ ಮೇಲೆ ಕಿನ್ಹಾಳವೆಂಬ ಹಳ್ಳಿಯಿದೆ. ಅಲ್ಲಿ ' ಚಿತ್ರಕಾರ ' ರೆಂಬ ಕೆಲವು ಮನೆತನಗಳಿರುವವು. ಕಟ್ಟಿಗೆಯ ಗೊಂಬೆ, ಹಣ್ಣು-ಕಾಯಿಗಳು, ಪಶು-ಪಕ್ಷಿಗಳು, ತೊಟ್ಟಿಲು ಇವುಗಳನ್ನು ಈ ಮನೆತನದವರು ಒಳ್ಳೇ ಮನೋಹರವಾಗಿ ಮಾಡುವರು. ವಿವಿಧ ದೇಶಗಳ ಗೊಂಬೆಗಳ ಪ್ರದರ್ಶನದಲ್ಲಿ ಕಿನ್ಹಾಳದ ಈ ಕಲೆಯು ಮನ್ನಣೆ ಪಾರಿತೋಷಕಗಳನ್ನು ಪಡೆದಿದೆ. ಒಂದು ಬಗೆಯ ಕಬ್ಬಿಣದ ತೆಳುವಾದ ತಗಡುಗಳಿಂದ ಬಗೆಬಗೆಯ ಒಡವೆಗಳನ್ನು ತಯಾರಿಸುವದು, ನಮ್ಮ ರಾಜ್ಯದಲ್ಲಿ ಅನೇಕ ತಲೆಮಾರುಗಳಿಂದ ಸಾಗಿ ಬಂದ ಒಂದು ಉದ್ಯೋಗವಾಗಿದೆ. ಹೈದರಾಬಾದದಿಂದ 100 ಮೈಲುಗಳ ಅಂತರದಲ್ಲಿರುವ ಬೀದರ ಎಂಬಲ್ಲಿ ಈ ಕೈಗಾರಿಕೆಯು ನಡೆಯುತ್ತಿದೆ. ಈ ಊರಿನ ಹೆಸರಿನಿಂದಲೇ ಈ ಕೈಗಾರಿಕೆಯನ್ನು ಕರೆಯುವದುಂಟು. ಹೂವಿನ ಹೂಜೆಗಳು, ಆಭರಣದ ಚಿಕ್ಕ ಪೆಟ್ಟಿಗೆಗಳು, ಬಿರಡಿಗಳು ಇವೇ ಮೊದಲಾದ ಅನೇಕ ಉಪಯುಕ್ತ ವಸ್ತುಗಳನ್ನು ಇಲ್ಲಿ ತಯಾರಿಸುವರು.

ಬೆಳ್ಳಿ, ಬಂಗಾರದ ಅಂದವಾದ ಒಡವೆಗಳನ್ನೂ, ಅಲಂಕಾರಗಳನ್ನೂ ನಮ್ಮ ರಾಜ್ಯದ ' ಸೋನೆಗಾರ 'ರು (ಪತ್ತಾರರು) ಮನಮೆಚ್ಚುವಂತೆ ಮಾಡುವರು. ಬಂಗಾರಗಳಲ್ಲಿ ಹರಳುಗಳನ್ನು ಕೆಚ್ಚುವ ಇಲ್ಲಿಯ ' ಕುಂದಣಗಾರ ' ರೂ ಕುಶಲರಾಗಿರುವರು. ಮೈಸೂರು, ಮಂಗಳೂರು, ಬೆಂಗಳೂರು, ಕಾರವಾರ ಮುಂತಾದ ಸ್ಥಳಗಳಲ್ಲಿ ಈ ಕಲೆಯಲ್ಲಿ ಕುಶಲರಾದವರುಂಟು.

ನಮ್ಮ ರಾಜ್ಯದಲ್ಲಿಯ ಮೂರ್ತಿ ಶಿಲ್ಪವೂ ಶ್ರೇಷ್ಠವಾಗಿದೆ. ಮೂರ್ತಿ ಶಿಲ್ಪವೆಂದರೆ ಕಲ್ಲಿನಲ್ಲಿ ಮೂರ್ತಿಗಳನ್ನು ಕಟೆಯುವದು. ಬೇಲೂರ, ಹಳೆಬೀಡುಗಳಲ್ಲಿಯ 'ಶಿಲಾಬಾಲಿಕೆ' ಯರನ್ನು ರಚಿಸಿ ಜಗತ್ತನ್ನೇ ಬೆರಗುಗೊಳಿಸಿದ ನಾಡಿದು. ಅಂದಿನ ಸಂಪ್ರದಾಯ, ಆಗಿನ ಕಾಲದ ಕಲಾ ಕುಶಲತೆ ಇನ್ನೂ ಈ ನಾಡಿನಲ್ಲಿ ಪೂರ್ಣವಾಗಿ ಮಾಯವಾಗಿಲ್ಲ. ದೇವತೆಗಳ ಹಾಗೂ ಇಂದಿನ ಮಹಾಪುರುಷರ ಮೂರ್ತಿಗಳನ್ನು ಇಲ್ಲಿಯ ಶಿಲ್ಪಿಗಳು ಅಂದವಾಗಿ ನಿರ್ಮಿಸುವರು.



ಮೂರ್ತಿ ಶಿಲ್ಪ-ವಿಗ್ರಹಗಳು

**ಕಂಬಳಿಗಳ ತಯಾರಿಕೆಯೂ** ನಮ್ಮ ರಾಜ್ಯದಲ್ಲಿ ಪೂರ್ವದಿಂದಲೂ ನಡೆದು ಬಂದ ಒಂದು ಕೈಗಾರಿಕೆಯಾಗಿದೆ. ತಪ್ಪಲು ಪ್ರದೇಶದ ಹುಲ್ಲುಗಾವಲುಗಳಲ್ಲಿ ಕುರಿಗಳನ್ನು ಹೆಚ್ಚಾಗಿ ಸಾಕುವರು. ಇವುಗಳ ಉಣ್ಣೆಯಿಂದ ಕಂಬಳಿ, ಧಾಬಳಿಗಳನ್ನು ತಯಾರಿಸುವರು. ತುಮಕೂರು ಜಿಲ್ಹೆಯ ಪಾವಗಡ, ಚಿಕ್ಕನಾಯಕನಹಳ್ಳಿ, ಹಾಸನ ಜಿಲ್ಹೆಯ ಅರಸಿಕೇರಿ, ಹೊಳೆನರಸೀಪುರ ತಾಲೂಕು, ಚಿತ್ರದುರ್ಗ, ದಾವಣಗೆರೆ, ವಿಜಾಪೂರ ಜಿಲ್ಹೆಯ ಕುಂದರಗಿ, ಕಲಾದಗಿ— ಈ ಸ್ಥಳಗಳಲ್ಲಿ ಕಂಬಳಿಗಳನ್ನು ನೇಯುವ ಉದ್ಯೋಗವು ನಡೆಯುವದು.

ಬೆಂಗಳೂರು, ನವಲಗುಂದಗಳಲ್ಲಿ ತಾಳಿಕೆಯ ಬಣ್ಣಗಳುಳ್ಳ ಅಂದವಾದ ಜಮುಖಾನೆಗಳನ್ನು ನೇಯುವರು. ವಿದೇಶಗಳಲ್ಲಿಯೂ ಇವಕ್ಕೆ ಬೇಡಿಕೆಯಿದೆ.

**ಚರ್ಮವನ್ನು ಹದಗೊಳಿಸುವದು, ಅದಕ್ಕೆ ಬಣ್ಣ ಹಾಕುವದು :–**

ಇವುಗಳಾದರೂ ಇಲ್ಲಿಯ ಕೈಗಾರಿಕೆಗಳಾಗಿವೆ. ವಿಜಾಪುರವು ಒಂದು ಕಾಲಕ್ಕೆ 'ಮೊಚ್ಚೆಯ ಜೋಡು' ಗಳಿಗಾಗಿ ಹೆಸರು ಗಳಿಸಿತ್ತು. ಇಂದು ವಿಜಾಪೂರ, ಕಲ್ಲಾದಗಿ, ಸೊರಬಗಳಲ್ಲಿ ತಯಾರಿಸುವ ಮೆಟ್ಟುಗಳು ತಾಳಿಕೆಗಾಗಿ ಹೆಸರಾಗಿವೆ. ತೊಗಲಿನ ಈ ಕೈಕೆಲಸದಲ್ಲಿ ತರಬೇತಿಯನ್ನು ಕೊಡಲು ರಾಯಚೂರು, ಚೆನ್ನ

ಪಟ್ಟಣಗಳಲ್ಲಿ ವರ್ಗಗಳನ್ನು ಏರ್ಪಡಿರಿಸಿರುವರು.

**ಪಿಂಗಾಣಿ** (ಮಣ್ಣಿನ ಪಾತ್ರೆಗಳು), ಇಟ್ಟಿಗೆ ಮತ್ತು ಹಂಚುಗಳನ್ನು ತಯಾರಿಸುವದು ಈ ರಾಜ್ಯದ ಮಹತ್ವದ ಕೈಗಾರಿಕೆಯಲ್ಲಿ ಒಂದಾಗಿದೆ; ಅನೇಕ ಶತಮಾನಗಳಿಂದ ನಡೆದುಬಂದಿದೆ.

ಮಂಗಳೂರಿನಲ್ಲಿ ಹಂಚುಗಳ ತಯಾರಿಕೆಯು ಮಹತ್ವದ ಉದ್ಯೋಗವಾಗಿದೆ. ಕರಾವಳಿಯ ಪ್ರದೇಶದಲ್ಲಿ ಅನೇಕ ಹಂಚಿನ ಕಾರಖಾನೆಗಳಿವೆ. ದಕ್ಷಿಣ ಕನ್ನಡದಿಂದ ಭಾರತದ ಅನ್ಯರಾಜ್ಯಗಳಿಗೂ, ಹೊರನಾಡುಗಳಿಗೂ ಹಂಚುಗಳನ್ನು ಕಳಿಸುವರು. ಮಂಗಳೂರು ಮಾದರಿಯ ಹಂಚುಗಳನ್ನು ಬೆಳಗಾಂವಿ ಜಿಲ್ಹೆಯ ಖಾನಾಪೂರದಲ್ಲಿಯೂ ಇತ್ತೀಚೆಗೆ ತಯಾರಿಸ ಹತ್ತಿರುವರು. ಕಾರವಾರ, ಧಾರವಾಡ ವಿಜಾಪೂರ ಜಿಲ್ಹೆಗಳಲ್ಲಿ ಈ ಬಗೆಯ ಹಂಚುಗಳಿಗೆ ಉಪಯುಕ್ತವಾದ ಮಣ್ಣು ದೊರೆಯುವದು. ಇಲ್ಲಿಯೂ ಈ ಉದ್ಯೋಗವನ್ನು ಪ್ರಾರಂಭಿಸುವ ಸಾಧ್ಯತೆ ಇದೆ.



ಮಂಗಳೂರು ಹಂಚುಗಳು

ಬೆಳಗಾಂವಿ ಜಿಲ್ಹೆಯಲ್ಲಿ ಮಣ್ಣಿನ ಒಡವೆಗಳನ್ನು ತಯಾರಿಸುವ ಎಲ್ಲ ಸೌಕರ್ಯಗಳಿವೆ. ಖಾನಾಪೂರದಲ್ಲಿ ಮೆರುಗಿನ ಕಪ್ಪು ಬಸಿ, ಭರಣಿ ಮೊದಲಾದವುಗಳನ್ನು ತಯಾರಿಸುವರು. ಖಾನಾಪೂರದಲ್ಲಿಯ ರಾಜ್ಯ ಸರಕಾರದ ಪಿಂಗಾಣಿಯ ಕೇಂದ್ರವು ಈ ಕೈಗಾರಿಕೆಗೆ ಬೇಕಾಗುವ ಕಚ್ಚಾ ಸರಕು, ಉಪಕರಣಗಳನ್ನು ಕೆಲಸಗಾರರಿಗೆ ಪೂರೈಸುತ್ತಿದೆ.

**ಉದಬತ್ತಿ:**— (ಅಗರಬತ್ತಿ) ಹಾಗೂ ಸುವಾಸಿಕ ದ್ರವ್ಯಗಳನ್ನು ಈ ರಾಜ್ಯದ ಅನೇಕ ಸ್ಥಳಗಳಲ್ಲಿ ಎಂದಿನಿಂದಲೂ ತಯಾರಿಸುತ್ತಿರುವರು. ಇವುಗಳನ್ನು ತಯಾರಿಸುವ ಸುಮಾರು 300 ಕೇಂದ್ರಗಳು ಮೈಸೂರು ರಾಜ್ಯದಲ್ಲಿವೆ. ಬಹಳ ಜನರಿಗೆ ಇವುಗಳಿಂದ ಮನೆಯಲ್ಲಿಯ ಬಿಡುವಿನ ಕೆಲಸ ದೊರೆಯುತ್ತಿದೆ. ಅನೇಕ ಹೆಣ್ಣುಮಕ್ಕಳು ತಮ್ಮ ಬಿಡುವಿನ ಸಮಯದಲ್ಲಿ ಊದಬತ್ತಿಗಳನ್ನು ತಯಾರಿಸಿ ತುಸು ಗಳಿಕೆಯನ್ನು ಮಾಡಿಕೊಳ್ಳುವರು. ಈ ಕೈಗಾರಿಕೆಗೆ ಬೇಕಾಗುವ ಕಚ್ಚಾ ಸರಕುಗಳು ಕೆಲಸಗಾರರಿಗೆ ದೊರೆಯುವಂತೆ ಸರಕಾರವು ಏರ್ಪಾಡುಮಾಡಿದೆ.

**ಚಾಪೆ ಹೆಣೆಯುವದು:**— ಈ ರಾಜ್ಯದ ಒಂದು ಮಹತ್ವದ ಕೈಗಾ

ರಿಕೆಯಾಗಿದೆ. ಒಂದು ಬಗೆಯ ಮೃದುವಾದ ಹುಲ್ಲು, ಬಿದಿರು, ಈಚಲ, ತಾಡಗಳ ಗರಿ ಇವುಗಳನ್ನು ಚಾಪೆಗಳ ಹೆಣಿಕೆಗಾಗಿ ಉಪಯೋಗಿಸುವರು. ಈ ಚಾಪೆ ಗಳಲ್ಲಿಯೂ ನಾವು ಕಲೆ, ಕುಸುರುಗಳನ್ನು ಕಾಣಬಹದು. ಕೆಂಗೇರಿ, ಹಾಸನ ಮುಂತಾದ ಸ್ಥಳಗಳಲ್ಲಿ ಈ ಕೈಗಾರಿಕೆ ಹೆಚ್ಚಾಗಿ ನಡೆಯುವದು.

ಬೆತ್ತದ ವಸ್ತುಗಳನ್ನು ತಯಾರಿಸುವದು ಇನ್ನೊಂದು ಕೈಗಾರಿಕೆ. ಬೆತ್ತದ ಎಳೆಗಳಿಂದ ಹೂಬುಟ್ಟಿಗಳು, ಚಿಕ್ಕದೊಡ್ಡ ಪೆಟ್ಟಿಗೆಗಳು, ಆಸನಗಳು ಇವೇ ಮುಂತಾದ ನಿತ್ಯೋಪಯೋಗದ ಹಾಗೂ ಶೋಭೆಯ ಒಡವೆಗಳನ್ನು ಸುಂದರವಾಗಿ ರಚಿಸುವರು. ದೇಶದ ಎಲ್ಲ ಭಾಗಗಳಿಂದಲೂ ಈ ವಸ್ತುಗಳಿಗೆ ಬೇಡಿಕೆಯಿರುವದು. ಮೈಸೂರು, ಚಿಕ್ಕಮಗಳೂರುಗಳಲ್ಲಿ ಈ ಕೈಗಾರಿಕೆಯು ಕಂಡುಬರುವದು.

ಜೇನುತುಪ್ಪವನ್ನು ತಯಾರಿಸುವದು ಇತ್ತೀಚೆಯ ಒಂದು ಹೊಸ ಉದ್ಯಮವಾಗಿದೆ. ಈ ಕೆಲಸವನ್ನು ಇಂದು ಸುವ್ಯವಸ್ಥಿತವಾಗಿ ಮಾಡು ತ್ತಿರುವರು. ಜೇನುಹುಳಗಳನ್ನು ವಿಶಿಷ್ಟವಾದ ಪೆಟ್ಟಿಗೆಗಳಲ್ಲಿ ಸರಿಯಾಗಿ ಸಾಕುವದು, ಹುಳಗಳು ಸಾಯದಂತೆ ಜೇನುತುಪ್ಪವನ್ನು ಆಧುನಿಕ ಸಾಧನಗಳಿಂದ ತೆಗೆಯುವದು, ಈ ಉದ್ಯೋಗದಲ್ಲಿ ಇವು ಹೊಸ ವಿಧಾನಗಳಾಗಿವೆ. ಹೊನ್ನಾವರವು ಈ ಉದ್ಯೋಗದಲ್ಲಿ ಮುಂದೆ ಬಂದಿದೆ. ಹೀಗೆ ತಯಾರಿಸಿದ 'ಅಹಿಂಸಾ ಜೇನುತುಪ್ಪ'ವು ಖಾದಿ ಗ್ರಾಮೋದ್ಯೋಗಗಳ ಅಂಗಡಿಗಳಲ್ಲಿ ದೊರೆಯುವದು.



ಹೊಸ ಮಾದರಿಯ ಜೇನುಹುಟ್ಟು

ನೂಲು, ರೇಶಿಮೆಗಳಿಗೆ ಬಣ್ಣ ಹಾಕುವದು ಹಾಗೂ ಬಟ್ಟೆಗೆ ಅಚ್ಚು ಹಾಕುವದು ಈ ಉದ್ಯೋಗಗಳೂ ಅಲ್ಲಲ್ಲಿ ಸಾಗಿರುವವು.

ಸ್ಥಳಿಕವಾಗಿ ದೊರೆಯುವ ಕಚ್ಚಾ ವಸ್ತುಗಳನ್ನು ಉಪಯೋಗಿಸಿಕೊಳ್ಳುವದು, ಉಳಿತಾಯದ ಸಮಯದಲ್ಲಿ ಅವುಗಳಿಂದ ಉಪಯುಕ್ತವಾದ ಒಡವೆಗಳನ್ನು ಕೈಯಿಂದ ಇಲ್ಲವೆ ಕ್ವಚಿತ್ತಾಗಿ ಯಂತ್ರಗಳಿಂದ ಸಿದ್ಧಗೊಳಿಸು

ವದು, ಇವು ಕೈಗಾರಿಕೆಯ ಮೂಲೋದ್ದೇಶಗಳಾಗಿವೆ. ಆದುದರಿಂದ ಕೈಗಾರಿಕೆಗಳು ಸ್ವತಂತ್ರ ಉದ್ಯೋಗಗಳಾಗಿಯೂ ಬೆಳೆದು ಬಂದಿವೆ. ಈ ರಾಜ್ಯದ ಮುಖ್ಯ ಕೈಗಾರಿಕೆಗಳ ಬಗ್ಗೆ ನೀವು ತಿಳಿದುಕೊಂಡಿರುವಿರಿ.

**ಉದ್ದಿಮೆಗಳು:—** ಕಚ್ಚಾ ಸರಕುಗಳನ್ನು ದೊಡ್ಡ ಪ್ರಮಾಣದಲ್ಲಿ ಬಳಸಿಕೊಳ್ಳುವದು, ಯಂತ್ರಗಳ ಸಹಾಯದಿಂದ ಕಾರಖಾನೆಗಳಲ್ಲಿ ಅಷ್ಟೇ ದೊಡ್ಡ ಪ್ರಮಾಣದಿಂದ ಸಿದ್ಧವಸ್ತುಗಳನ್ನು ತಯಾರಿಸುವದು, ಸಾವಿರಾರು ಜನರನ್ನು ಈ ಕೆಲಸದಲ್ಲಿ ತೊಡಗಿಸುವದು ಇವುಗಳಿಗೆ 'ಉದ್ದಿಮೆ', 'ಭಾರೀ ಉದ್ದಿಮೆ' ಗಳೆಂದು ಹೇಳುವರು. ಈ ರಾಜ್ಯದಲ್ಲಿಯ ಕೆಲವು ಪ್ರಮುಖ ಉದ್ದಿಮೆಗಳ ಪರಿಚಯವನ್ನು ಇನ್ನು ನೀವು ಮಾಡಿಕೊಳ್ಳಬೇಕು.

**ಮೈಸೂರು ಕಬ್ಬಿಣ ಉಕ್ಕುಗಳ ಕಾರಖಾನೆ:—** ಭದ್ರಾವತಿಯಲ್ಲಿ ದಿನದಿನಕ್ಕೆ ಮುಂದಡಿಯಿಡುತ್ತಿರುವ ಈ ಕಾರಖಾನೆ ಮೈಸೂರು ಭಾರತಗಳಿಗೆ ರಡಕ್ಕೂ ಕೀರ್ತಿಯನ್ನು ತರುತ್ತಿದೆ. ವಿಶ್ವೇಶ್ವರಯ್ಯನವರ ಮುನ್ನೋಟದ ಮಹಾಕೃತಿಯಿದು. ಭದ್ರಾವತಿಯಲ್ಲಿ 1923 ರಲ್ಲಿ ಇದರ ಸ್ಥಾಪನೆಯಾಯಿತು. ಬಾಬಾ ಬುಡನ್‌ಗಿರಿ ಶ್ರೇಣಿಯ ಕೆಮ್ಮನಗುಂಡಿ ಬೆಟ್ಟಗಳಿಂದ ಈ ಕಾರಖಾನೆಗೆ ಬೇಕಾದಷ್ಟು ಕಬ್ಬಿಣದ ಅದಿರಿನ ಪೂರೈಕೆಯಾಗುವದು. ಈ ರಾಜ್ಯದಲ್ಲಿ ಕಲ್ಲಿದ್ದಲಿಯ ಕಣಿಗಳಿಲ್ಲ. ಹೊರಗಿನಿಂದ ತರಿಸುವದು ವೆಚ್ಚದ ಕೆಲಸ. ಆದುದರಿಂದ ಸುತ್ತಲಿನ ಅಡವಿಗಳಲ್ಲಿ ದೊರೆಯುವ ಕಟ್ಟಿಗೆಯಿಂದ ತಯಾರಿಸಿದ ಇದ್ದಲಿಯನ್ನೇ ಈ ಕಾರಖಾನೆಯಲ್ಲಿ ಉಪಯೋಗಿಸುವರು. ಜೋಗದ ಜಲಪಾತದಿಂದ ಸಿಗುವ ವಿದ್ಯುತ್‌ಶಕ್ತಿಯನ್ನು ಇತ್ತೀಚೆಗೆ ಉಪಯೋಗಿಸುತ್ತಿರುವರು. ಕಲ್ಲಿದ್ದಲಿಗೆ ಪ್ರತಿಯಾಗಿ ಇದ್ದಲಿಯನ್ನು ಉಪಯೋಗಿಸುವ ಕಬ್ಬಿಣ ಕಾರಖಾನೆ ಭಾರತದಲ್ಲಿ ಇದು ಒಂದೇ ಅಗಿದೆ. ನೀರಿನ ನಳಗಳಿಗೆ ಬೇಕಾಗುವ ಬೀಡಿನ ಕೊಳವೆ ಮುಂತಾದ ಕಬ್ಬಿಣ ಉಕ್ಕುಗಳ ವಿವಿಧ ವಸ್ತುಗಳನ್ನು ಇಲ್ಲಿ ತಯಾರಿಸುವರು. ರಾಜ್ಯ ಸರಕಾರವೆ ಈ ಕಾರಖಾನೆಯನ್ನು ನಡೆಸುವದು.

**ಸಿಮೆಂಟ ಕಾರಖಾನೆ:—** ಸಿಮೆಂಟ ತಯಾರಿಕೆಗೆ ಸುಣ್ಣದ ಕಲ್ಲುಗಳು ಬೇಕಾಗುವವು. ನದಿಗಳಿಗೆ ಕಟ್ಟಿದ ಆಣೆಕಟ್ಟುಗಳಿಗಾಗಿ, ಕಟ್ಟಡಗಳಿಗಾಗಿ ಸಿಮೆಂಟು ಹೆಚ್ಚಿನ ಪ್ರಮಾಣದಲ್ಲಿ ಬೇಕಾಗುವದು. ಭದ್ರಾವತಿ ಹಾಗೂ ವಿಜಾಪೂರ ಜಿಲ್ಲೆಯ ಬಾಗಲಕೋಟಗಳಲ್ಲಿ ಸಿಮೆಂಟಿನ ಕಾರಖಾನೆಗಳಿರು

ವವು. ಇವುಗಳಲ್ಲಿ ಸಿಮೆಂಟಿನ ಉತ್ಪತ್ತಿಯೂ ಹೆಚ್ಚುತ್ತಿದೆ. ತರಗತಿಯೂ ಶ್ರೇಷ್ಠವಾಗಿದೆ.

**ಸಾಬೂನಿನ ಕಾರ್ಖಾನೆ:—** ಈ ಕಾರಖಾನೆಯನ್ನು ಸರಕಾರವೆ ನಡೆಸುವದು. 1918ರಲ್ಲಿ ಇದನ್ನು ಸ್ಥಾಪಿಸಲಾಯಿತು. ಕಾರಖಾನೆಯ ನೂತನ ಕಟ್ಟಡವು ಬೆಂಗಳೂರಿನ 'ರಾಜಾಜಿ ನಗರ' ವೆಂಬ ಭಾಗದಲ್ಲಿದೆ. ಮನೆ ಬಳಿಕೆಯ ವಿವಿಧ ಸಾಮಾನುಗಳನ್ನು ಇಲ್ಲಿ ತಯಾರಿಸುವರು ನಿಮ್ಮ ಮೆಚ್ಚಿನ 'ಮೈಸೂರು ಸ್ಯಾಂಡಲ್ ಸೋಪು' ಇಲ್ಲಿಯೆ ಸಿದ್ಧವಾಗುವದು.

**ಸರಕಾರದ ಪಿಂಗಾಣಿ ಕಾರಖಾನೆ:–**ಬೆಂಗಳೂರಿನಲ್ಲಿ 1932 ರಲ್ಲಿ ಇದನ್ನು ಪ್ರಾರಂಭಿಸಿದರು. ನಿತ್ಯೋಪಯೋಗದ ಕಪ್ಪು, ಬಸಿ, ಭರಣಿ ಮೊದಲಾದ ಪಿಂಗಾಣಿ ಒಡವೆಗಳನ್ನು ಇಲ್ಲಿ ತಯಾರಿಸುವರು. ಜೊತಗೆ ವಿದ್ಯುತ್ತಿನ ಯಂತ್ರಗಳಲ್ಲಿ ಉಪಯೋಗಿಸುವ ಅನೇಕ ವಸ್ತುಗಳನ್ನು ಈ ಕಾರಖಾನೆಯು ದೊಡ್ಡ ಪ್ರಮಾಣದಲ್ಲಿ ಪೂರೈಸುವದು.

**ಸರಕಾರದ ಶ್ರೀಗಂಧದ ಎಣ್ಣೆಯ ಕಾರಖಾನೆ:—** ಮೈಸೂರು ಶಿವಮೊಗ್ಗೆಗಳಲ್ಲಿ ಈ ಕಾರಖಾನೆಗಳಿರುವವು. ಗಂಧದ ಗಿಡಗಳ ಉತ್ಪತ್ತಿಗೆ ಹೆಸರಾದ ಕೊಡಗು, ಧಾರವಾಡ ಮುಂತಾದ ಪ್ರದೇಶಗಳು ನವಮೈಸೂರು ರಾಜ್ಯದಲ್ಲಿ ಇಂದು ಸೇರ್ಪಡೆಯಾಗಿವೆ. ಆದುದರಿಂದ ನಮ್ಮ ರಾಜ್ಯದ ಶ್ರೀಗಂಧದ ಎಣ್ಣೆಯ ಹುಟ್ಟುವಳಿಯು ಇನ್ನೂ ಎಷ್ಟೋ ಪಟ್ಟು ಹೆಚ್ಚಬಹುದಾಗಿದೆ.

**ಸರಕಾರದ ರೇಶಿಮೆ ಗಿರಣಿ:—** ಮೈ ಸೂ ರಿ ನ ಲ್ಲಿ ಇದನ್ನು 1932 ರಲ್ಲಿ ಪ್ರಾರಂಭಿಸಿರುವರು. ಇದರಲ್ಲಿ ಒಳ್ಳೆ ತರಗತಿಯ ರೇಶಿಮೆ ಸೀರೆ, ಖಣ, ಮಡಿ ಮೊದಲಾದ ವಸ್ತ್ರಗಳು ಸಿದ್ಧವಾಗುವವು. ಮೈಸೂರಿನ ರೇಶಿಮೆ ಬಟ್ಟೆಗಳು ತಮ್ಮ ನಯ, ನುಣ್ಪು, ಹೊಳಪು, ಕಸೂತಿಯ ಕಲೆಗಳಿಗಾಗಿ ಪ್ರಸಿದ್ಧಿಯನ್ನು ಪಡೆದಿರುವವು.

**ಸಲಕರಣೆಗಳ ಕಾರಖಾನೆ:—** ಮನೆಗೆಲಸ, ಹೊಲಗೆಲಸಗಳಿಗಾಗಿ ಗುದ್ದಲಿ, ಸಲಕೆ, ಕೊಯ್ತು, ಕುಡುಗೋಲುಗಳು ಬೇಕಾಗುವದಿಲ್ಲವೆ? ಅವುಗಳನ್ನು ತಯಾರಿಸುವ ಕಾರಖಾನೆಯೂ ನಮ್ಮ ರಾಜ್ಯದ ಹಾಸನದಲ್ಲಿ ಇರುವದು. ಇಲ್ಲಿ ತಯಾರಾದ ಈ ಬಗೆಯ ಸಲಕರಣೆಗಳನ್ನು ಕೇಂದ್ರ ಸರಕಾರಕ್ಕೆ ಪೂರೈಸುತ್ತಾರೆ. ಒಕ್ಕಲಿಗರಲ್ಲಿಯೂ ಇವು ಲೋಕಪ್ರಿಯವಾಗಿವೆ.

ಇವುಗಳಲ್ಲದೆ ಅನೇಕ ಖಾಸಗೀ ಕಂಪನಿಗಳು ಕೆಲವೊಂದು ಕಾರಖಾನೆಗಳನ್ನು ನಡೆಸುತ್ತಿರುವರು. ಅವುಗಳಲ್ಲಿ ಮುಖ್ಯವಾದವುಗಳು :

**ಹಿಂದುಸ್ತಾನ ವಿಮಾನ ಕಾರಖಾನೆ :–** ಬೆಂಗಳೂರಿನ ನೆರೆಯಲ್ಲಿಯ ಈ ಕಾರಖಾನೆಯಲ್ಲಿ ವಿಮಾನಗಳನ್ನು ತಯಾರಿಸುವರು. ಭಾರತ ವಿಮಾನ ಪಡೆಗೆ ಬೇಕಾಗುವ ಕೆಲವೊಂದು ಬಗೆಯ ವಿಮಾನುಗಳು ಇಲ್ಲಿ ತಯಾರಾಗುವವು. ಇಲ್ಲಿ ಇತ್ತೀಚೆಗೆ ಹೊಸ ಮಾದರಿಯಾಗಿ ತಯಾರಿಸಿದ ಒಂದು ವಿಮಾನವು ಒಕ್ಕಲಿಗರಿಗೆ ಒಳ್ಳೇ ಸಹಾಯಕವಾಗಿದೆ. ಬೆಳೆಗಳಿಗೆ ತಗುಲಿದ ರೋಗದ ಕೀಟಕಗಳನ್ನು ನಾಶಗೊಳಿಸಲು ಈ ವಿಮಾನದಿಂದ ಗಂಧಕದ ಹುಡಿ ಮೊದಲಾದವುಗಳನ್ನು ಬೆಳೆಗಳ ಮೇಲೆ ಹರಡಲು ಬರುವಂತಿದೆ. ಈ ಹೊಸ ಮಾದರಿಯ ವಿಮಾನಕ್ಕೆ ' ಕೃಷಿಕ ' ವೆಂದು ಹೆಸರಿಟ್ಟಿರುವರು. ಸಮಗ್ರ ಲೋಹದ ತಗಡುಗಳಿಂದ ರಚಿಸಿದ ರೇಲ್ವೆ ಡಬ್ಬಿಗಳೂ ಇಲ್ಲಿ ಸಿದ್ಧವಾಗುವವು.


ಟೆಲಿಫೋನು

**ಭಾರತ ಟೆಲಿಫೋನ ಕಾರಖಾನೆ:-** 1948ರಲ್ಲಿ ಬೆಂಗಳೂರಿನ ನೆರೆಯಲ್ಲಿ ಈ ಕಾರಖಾನೆಯನ್ನು ಪ್ರಾರಂಭಿಸಿರುವರು ಇಲ್ಲಿ ಸಿದ್ಧವಾಗುವ ಟೆಲಿಫೋನು ಯಂತ್ರಗಳು ವಿದೇಶಗಳಲ್ಲಿ ತಯಾರಾದವುಗಳಿಗೆ ಸಮವಾಗಿವೆ.

**ಮೈಸೂರು ಸಕ್ಕರೆ ಕಾರಖಾನೆ :-** ಮಂಡ್ಯದಲ್ಲಿ ಸ್ಥಾಪಿತವಾದ ಈ ಕಾರಖಾನೆಯು ಭಾರತದಲ್ಲಿಯೆ ಅತಿ ದೊಡ್ಡ ಸಕ್ಕರೆಯ ಕಾರಖಾನೆಗಳಲ್ಲಿ ಒಂದಾಗಿದೆ. ಹತ್ತು ಸಾವಿರ ಎಕರೆ ಭೂಮಿಯಲ್ಲಿ ಆರು ಸಾವಿರ ರೈತರು ಬೆಳೆಯುವ ಕಬ್ಬು ಈ ಗಿರಣಿಗೆ ಪೂರೈಕೆಯಾಗುವದು.

**ಮೈಸೂರು ಕಾಗದ ಕಾರಖಾನೆ :—** ಭದ್ರಾವತಿಯಲ್ಲಿ 1936 ರಲ್ಲಿಯೆ ಈ ಗಿರಣಿಯನ್ನು ಸ್ಥಾಪಿಸಿರುವರು. ಕಾಗದದ ತಯಾರಿಕೆಗೆ ಬೇಕಾಗುವ ಬಿದಿರು, ಹುಲ್ಲು, ಮಿದು ಕಟ್ಟಿಗೆ ಸುತ್ತಲಿನ ಕಾಡುಗಳಲ್ಲಿ ದೊರೆಯುವದು. ಎಲ್ಲ ಬಗೆಯ ಕಾಗದಗಳನ್ನೂ ಇಲ್ಲಿ ತಯಾರಿಸುವರು. ಕಾಡುಕೋಣದ ಮುದ್ರೆಯುಳ್ಳ ಮೈಸೂರು ಕಾಗದವನ್ನು ನೀವು ಉಪಯೋಗಿಸು

ವಿರಿ. ಅದು ಇಲ್ಲಿಯೆ ಸಿದ್ಧವಾದುದು. ಈ ರಾಜ್ಯದಲ್ಲಿ ದಾಂಡೇಲಿಯಲ್ಲಿಯೂ



ಕಾಡುಕೋಣಗಳು

ಕಾಗದದ ಗಿರಣಿಯು ತನ್ನ ಉತ್ಪತ್ತಿಯನ್ನು ಪ್ರಾರಂಭಿಸಿದೆ.

ಬೆಂಗಳೂರಿನಲ್ಲಿ ನೂಲು, ಉಣ್ಣೆ, ರೇಶಿಮೆ ಬಟ್ಟೆ ತಯಾರಿಸುವ ಗಿರಣಿಗಳಿವೆ. ಮೈಸೂರು, ದಾವಣಗೆರೆಗಳಲ್ಲಿ ನೂಲಿನ ಬಟ್ಟೆಯ ಗಿರಣಿಗಳಿವೆ.

ಶಿವಮೊಗ್ಗೆಯಲ್ಲಿ ಬೆಂಕೀ (ಕಡ್ಡೀ) ಪೆಟ್ಟಿಗೆಯ ಕಾರಖಾನೆಯಿದೆ. ಬೆಂಗಳೂರು, ದಾವಣಗೆರೆಗಳಲ್ಲಿ ವನಸ್ಪತಿ ತುಪ್ಪವನ್ನು ತಯಾರಿಸುವ ಕಾರಖಾನೆಗಳಿವೆ. ನೆಲಗಡಲೆ ( ಶೇಂಗಾ ) ಹಾಗೂ ಎಳ್ಳು ಇವುಗಳ ಎಣ್ಣೆಯಿಂದ ವನಸ್ಪತಿಗ ತುಪ್ಪವನ್ನು ತಯಾರಿಸುವರು.

ರಾಸಾಯನಿಕ ಗೊಬ್ಬರ ಹಾಗೂ ರಾಸಾಯನಿಕ ದ್ರವ್ಯಗಳನ್ನು ತಯಾರಿಸಲು ಬೆಳಗುಳ ರೇಲ್ವೆ ನಿಲ್ದಾಣದ ನೆರೆಯಲ್ಲಿ ಒಂದು ಕಾರಖಾನೆಯು 1937ರಲ್ಲಿಯೆ ಪ್ರಾರಂಭವಾಗಿದೆ. ಬೆಂಗಳೂರಿನಲ್ಲಿ ಐ. ಟಿ. ಎಲ್. ಎಂಬ ಹೆಸರಿನ ಒಂದು ಕಾರಖಾನೆಯಲ್ಲಿ ವಿವಿಧವಾದ ಔಷಧಗಳನ್ನು ತಯಾರಿಸುವರು. ಬೆಂಗಳೂರಿನಲ್ಲಿ ವಿದ್ಯುದ್ದೀಪಗಳನ್ನು ತಯಾರಿಸುವ ಕಾರಖಾನೆಯೂ ಇರುವದು. ಬೆಂಗಳೂರು ಜಿಲ್ಹೆಯ ಜಲಹಳ್ಳಿ ಎಂಬಲ್ಲಿ ಯಾಂತ್ರಿಕ ಉಪಕರಣಗಳನ್ನು ತಯಾರಿಸುವ ಕಾರಖಾನೆಯಿರುವದು. ಅದರಲ್ಲಿ ಕಬ್ಬಿಣದ ಗಾಡ, ತೂತು ತೆಗೆಯುವ ಸಾಧನ ಮುಂತಾದವುಗಳನ್ನು ತಯಾರಿಸುವರು. ಬೆಂಗಳೂರಿನ ಒಂದು ಉಪನಗರದಲ್ಲಿ ಕಿರ್ಲೋಸ್ಕರ ಕಂಪನಿಯ ವಿದ್ಯುತ್ ಸಲಕರಣೆಗಳ ಕಾರಖಾನೆಯಿದೆ. ವಿದ್ಯುತ್ತಿನ ಯಂತ್ರಗಳನ್ನೂ ಅವುಗಳಿಗೆ

ಅಗತ್ಯವಿರುವ ಸಲಕರಣೆಗಳನ್ನೂ ಅಲ್ಲಿ ತಯಾರಿಸುವರು.

ನಮ್ಮ ರಾಜ್ಯದ ಇನ್ನೊಂದು ಔದ್ಯೋಗಿಕ ಕೇಂದ್ರವಾದ ಹುಬ್ಬಳಿಯಲ್ಲಿ ಸಿದ್ಧೇಶ್ವರ, ಧನಲಕ್ಷ್ಮಿ, ಪ್ರಭಾತ ಕಬ್ಬಿಣ ಕಾರಖಾನೆಗಳಿವೆ.



ಕಬ್ಬಿಣ ಮಂಚ



ತೊಟ್ಟಿಲು



ತಿಜೋರಿ

ಇವರು ಭದ್ರವಾದ ತಿಜೋರಿ, ಮಂಚ, ತೊಟ್ಟಿಲುಗಳನ್ನು ತಯಾರಿಸುವರು. ಇತ್ತೀಚೆಗೆ ಸುತ್ತಿಕೊಳ್ಳುವ ಕಬ್ಬಿಣದ ತಗಡಿನ ಬಾಗಿಲುಗಳನ್ನೂ ಸಿದ್ಧಗೊಳಿಸುತ್ತಿರುವರು.

ನವಮೈಸೂರು ರಾಜ್ಯದ ವಿವಿಧ ಕೈಗಾರಿಕೆ ಹಾಗೂ ಉದ್ದಿಮೆಗಳ ಅಲ್ಪ ಪರಿಚಯವನ್ನು ನೀವು ಮಾಡಿಕೊಂಡಿರುವಿರಿ. ಬೆಂಗಳೂರು, ಮೈಸೂರು, ಭದ್ರಾವತಿ, ಮಂಡ್ಯ, ತುಮಕೂರು, ದಾವಣಗೆರೆ, ಹುಬ್ಬಳ್ಳಿ ಇವು ಈ ರಾಜ್ಯದಲ್ಲಿ ಉದ್ಯಮಗಳ ಕೇಂದ್ರಗಳೆಂಬುದು ನಿಮಗೆ ಕಂಡುಬಂದಿದೆ. ನಿಮ್ಮ ಶಾಲೆಯ ಪ್ರವಾಸಗಳಲ್ಲಿ ಇಲ್ಲವೆ ಯಾವದೇ ನಿಮಿತ್ತಕ್ಕಾಗಿ ಈ ಊರುಗಳಿಗೆ ನೀವು ಹೋದರೆ ಅಲ್ಲಲ್ಲಿಯ ಉದ್ಯಮಗಳ ಕಾರಖಾನೆಗಳನ್ನು ನಿರೀಕ್ಷಿಸಿರಿ. ನಿಸರ್ಗದ ಕೃಪೆಯಿಂದ ಈ ರಾಜ್ಯಕ್ಕೆ ವಿಪುಲವಾದ ಖನಿಜ ಸಂಪತ್ತು, ಅರಣ್ಯ ಸಂಪತ್ತು ದೊರೆತಿದೆ. ಇವುಗಳ ನೆರವಿನಿಂದ ವಿವಿಧ ಉದ್ದಿಮೆಗಳು ಹೇಗೆ, ಎಲ್ಲಿ ಉದಯವಾಗಿವೆ ಎಂಬುದನ್ನು ತಿಳಿದುಕೊಳ್ಳಿರಿ.

ಉದ್ದಿಮೆ ಕೈಗಾರಿಕೆಗಳಲ್ಲಿ ಸಮಗ್ರ ಭಾರತದಲ್ಲಿ ಮೈಸೂರು ಮೊದಲಿನಿಂದಲೂ ಮುಂದೆ ಬಂದಿದೆ. ಬೇರೆ ಯಾವ ರಾಜ್ಯಕ್ಕಿಂತಲೂ ನಮ್ಮ ರಾಜ್ಯದಲ್ಲಿ ಕೈಗಾರಿಕೆ ಉದ್ಯಮಗಳ ಸಂಖ್ಯೆಯೂ ಹೆಚ್ಚಿದೆ. ವಿವಿಧತೆಯೂ ಹೆಚ್ಚಿಗಿದೆ. ನೀವು ಹೈಸ್ಕೂಲಿನ ಶಿಕ್ಷಣವನ್ನು ಮುಗಿಸಿದ ಮೇಲೆ, ಇಲ್ಲವೆ ಹೈಸ್ಕೂಲಿನಲ್ಲಿ ಕಲಿಯುವಾಗಲೆ ನಿಮ್ಮ ಒಲವಿನ ಒಂದು ಕೈಗಾರಿಕೆ ಕಲಿಯಬಹುದು. ತಾಂತ್ರಿಕ ತರಬೇತಿಯನ್ನು ಪಡೆಯಬಹುದು. ನಮ್ಮ ರಾಜ್ಯದ ಉದ್ದಿಮೆಗಳಲ್ಲಿ ಕೆಲಸ ಮಾಡಲು ಈ ತರಬೇತಿಯನ್ನು ಪಡೆದ ಕುಶಲ ಕೆಲಸಗಾರರು ಯಾವಾಗಲೂ ಬೇಕಾಗುವರು. ನಿಮಗೆ ಅವುಗಳಲ್ಲಿ ಸ್ಥಾನವಿದೆ, ಸ್ವಾಗತವಿದೆ.

## ಅಭ್ಯಸನಗಳು

1. ಮೈಸೂರು ರಾಜ್ಯದ ಎರಡು ಮುಖ್ಯವಾದ ಕೈಗಾರಿಕೆಗಳು ಯಾವು ? ಅವುಗಳಿಗೆ ಭೂಗೋಲದ ಸಂಗತಿಗಳು ಹೇಗೆ ಅನುಕೂಲವಾಗಿವೆ ?
2. ಈ ರಾಜ್ಯದ ನೇಕಾರಿಕೆಯು ಕೇಂದ್ರಗಳು ಎಲ್ಲಿವೆ ? ಅವುಗಳಲ್ಲಿ ಯಾವ ಸರಕುಗಳನ್ನು ಉತ್ಪಾದಿಸುವರು ?
3. ಗುಡಿಗಾರರು, ಚಿತ್ರಕಾರರು, ಜೋಗಾರರು ಇವರ ಬಗ್ಗೆ ಟಿಪ್ಪಣಿ ಬರೆಯಿರಿ.
4. (ಅ) ಕೈಗಾರಿಕೆ–ಉದ್ಯಮಗಳಲ್ಲಿ ಭೇದವೇನು ?
   (ಬ) ಉದ್ದಿಮೆಗಳಿಗೆ ಯಾವ ಸಂಗತಿಗಳು ಅಗತ್ಯವಾಗಿರುವವು ?
5. ಭೌಗೋಲಿಕ ಕಾರಣಗಳನ್ನು ಕೊಡಿರಿ :—
   (1) ಮಂಗಳೂರಿನಲ್ಲಿ ಹಂಚಿನ ಕಾರಖಾನೆಗಳಿರುವವು.
   (2) ಭದ್ರಾವತಿಯಲ್ಲಿ ಕಬ್ಬಿಣ–ಉಕ್ಕುಗಳ ಕಾರಖಾನೆಯಲ್ಲಿ ಕಟ್ಟಿಗೆ ಇದ್ದಲಿಗಳನ್ನು ಉಪಯೋಗಿಸುವರು.
   (3) ಕರಾವಳಿಯ ಪ್ರದೇಶದಲ್ಲಿ ಟೆಂಗಿನ ಗಿಡದಿಂದ ಅನೇಕ ವಸ್ತುಗಳನ್ನು ತಯಾರಿಸುವರು.
   (4) ಮೈಸೂರು ರಾಜ್ಯದಲ್ಲಿ ಅನೇಕ ಉದ್ದಿಮೆಗಳಿಗೆ ಅನುಕೂಲತೆ ಇರುವದು.
   (5) ಬಾಗಿಲುಕೋಟೆಯಲ್ಲಿ ಸಿಮೆಂಟಿನ ಕಾರಖಾನೆ ಇರುವದು.
   (6) ಭದ್ರಾವತಿ, ದಾಂಡೇಲಿಗಳಲ್ಲಿ ಕಾಗದ ತಯಾರಿಕೆಯ ಕಾರಖಾನೆಗಳಿರುವವು.
6. ಮೈಸೂರು ರಾಜ್ಯದಲ್ಲಿ ಸರಕಾರವೇ ನಡೆಸುತ್ತಿರುವ ಕೆಲವು ಮುಖ್ಯ ಉದ್ದಿಮೆಗಳು ಯಾವವು ?
7. ನಿಮಗೆ ಸನಿಹದಲ್ಲಿರುವ ಒಂದು ಕೈಗಾರಿಕೆಯ ಇಲ್ಲವೆ ಉದ್ಯಮದ ಕೇಂದ್ರವನ್ನು ನೋಡಿ ಬನ್ನಿರಿ. ಅಲ್ಲಿ ನಡೆಯುತ್ತಿರುವ ಕಾರ್ಯವನ್ನು ವಿವರವಾಗಿ ವರ್ಣಿಸಿರಿ.

## 10. : : : : : : ಸಾರಿಗೆ–ಸಂಚಾರಗಳ ಸಾಧನಗಳು

ಕೈಗಾರಿಕೆ ಹಾಗೂ ಉದ್ಯಮಗಳಿಗೆ ಅಗತ್ಯವಿರುವ ಕಚ್ಚಾ ವಸ್ತುಗಳನ್ನು ಹೊರಗಿನಿಂದ ತರಬೇಕಾಗುವದು. ಸಿದ್ಧವಾದ ಸರಕುಗಳನ್ನು,

ಬೇಡಿಕೆಯಿರುವಲ್ಲಿಗೆ ಕಳಿಸಬೇಕಾಗುವದು. ಇದಲ್ಲದೆ ಜನರೂ ವ್ಯಾಪಾರ ವ್ಯವಹಾರಗಳಿಗಾಗಿ ಊರಿಂದ ಊರಿಗೆ ಹೋಗಿ ಬರಬೇಕಾಗುವದು. ' ನಮ್ಮಷ್ಟಕ್ಕೆ ನಾವು ', ' ನಾವಾಯಿತು ನಮ್ಮ ಊರಾಯಿತು ';— ಎಂದು ಮನೆ ಹಿಡಿದು ಕೂಡುವ ಕಾಲವು ಬಹಳ ಹಿಂದೆ ಉಳಿಯಿತು. ಪ್ರವಾಸವು ಹೆಚ್ಚಾಗಿದೆ. ಸರಕುಗಳ ಸಾಗಾಟವೂ ಅಗತ್ಯವಾಗಿದೆ. ಕೇವಲ ವಾಹನ ಗಳಿದ್ದರೆ ತೀರದು. ವಾಹನಗಳ ಓಡಾಟಕ್ಕೆ, ದೇಶದ ಬೇರೆ ಬೇರೆ ಭಾಗ ಗಳನ್ನು ಸಂಧಿಸುವಂತೆ ಸುರಕ್ಷಿತವಾದ ಮಾರ್ಗಗಳು ಬೇಕಾಗುವವು. ಈ ಮಾರ್ಗಗಳ ಸಹಾಯದಿಂದಲೆ ಜನರು ಪ್ರವಾಸ ಮಾಡುವರು; ಸರಕುಗಳನ್ನು ಸಾಗಿಸುವರು. ಆದುದರಿಂದ ಈ ಮಾರ್ಗಗಳಿಗೆ **' ಸಾರಿಗೆ-ಸಂಚಾರಗಳ ಸಾಧನಗಳು '** ಎಂದು ಹೇಳುವದುಂಟು.

ಇಂದಿನ ಮಾರ್ಗಗಳು ಮೂರು ವಿಧವಾಗಿವೆ. ಭೂಮಾರ್ಗಗಳು, ಜಲ ಮಾರ್ಗಗಳು, ವಾಯುಮಾರ್ಗಗಳು : ಹಿಂದಿನ ಕಾಲದಲ್ಲಿ ವಾಯುಮಾರ್ಗ ಗಳಿರಲಿಲ್ಲ. ವಿಮಾನಗಳ ಶೋಧವಾದಂದಿನಿಂದ, ವಿಮಾನಸಂಚಾರದ ವಾಯುಮಾರ್ಗವು ಹೊಸದಾಗಿ ನಿರ್ಮಾಣವಾಯಿತು. ನೀರಿನಲ್ಲಿ ಚಲಿಸುವ ಹಡಗುಗಳಿಗೆ, ಆಕಾಶದಲ್ಲಿ ಸಂಚರಿಸುವ ವಿಮಾನುಗಳಿಗೆ ಹಣ ವೆಚ್ಚ ಮಾಡಿ ಮಾರ್ಗಗಳನ್ನು ಚಲಿಸಬೇಕಾಗುವದಿಲ್ಲ— ಈ ಮಾತು ನಿಮಗೆ ತಿಳಿದಿದೆ.

ಭೂಮಾರ್ಗಗಳು ಎರಡು ಬಗೆಯಾಗಿವೆ :– 1 ) ಲೈನು ಮಾರ್ಗ 2 ) ರೇಲು ಮಾರ್ಗ :– ಸಂಚಾರ, ಸಾರಿಗೆಗಳಿಗೆ ರೇಲು-ಮಾರ್ಗವೆ ಹೆಚ್ಚು ಸಹಾಯಕವಾಗಿದೆ.

**ರೇಲು ಮಾರ್ಗ** :– ಇವುಗಳಿಗೆ ಉಗಿಬಂಡಿಯ ಮಾರ್ಗಗಳೆಂತಲೂ ಹೇಳುವರು. ನೀವು ಹುಟಗಿಯಿಂದ ರಾಯಚೂರು ಕಲಬುರ್ಗಿಗಳ ಕಡೆಗೆ ಹೋದರೆ ನಿಮಗೆ ಅಲ್ಲಿ ಬೇರೆ ಪ್ರಕಾರದ ರೇಲಿನ ಕಂಬಿಗಳು ( ಹಳಿಗಳು ) ಕಂಡು ಬರುವವು. ಕಂಬಿಗಳ ಗಾತ್ರವೂ ದೊಡ್ಡದು. ಎರಡು ಕಂಬಿಗಳ ನಡುವಿನ ಅಂತರವೂ ಹೆಚ್ಚು ಅಗಲವಾಗಿರುವದು. ಇವುಗಳ ಮೇಲೆ ಓಡಾ ಡುವ ಗಾಡಿಗಳೂ ದೊಡ್ಡವು. ಗಾಡಿಗಳ ವೇಗವೂ ಹೆಚ್ಚು. ಅಗಲ ವಾದ ಈ ರೇಲು ದಾರಿಗಳಿಗೆ ' ಬ್ರಾಡ್ ಗೇಜ ' ರೇಲು ಮಾರ್ಗಗಳೆನ್ನುವರು. ಇವುಗಳಲ್ಲಿ ಎರಡು ರೇಲುಗಳ ನಡುವಿನ ಅಂತರವು 5 ಫೂಟು 6 ಇಂಚು ಗಳಷ್ಟಿರುವದು. ಇದಕ್ಕಿಂತಲೂ ಕಿರಿಯಗಲಾದ ರೇಲು ಮಾರ್ಗಗಳಿಗೆ ' ಮೀಟರ ಗೇಜ ' ಮಾರ್ಗಗಳೆನ್ನುವರು. ಅವುಗಳಲ್ಲಿ ಎರಡು ರೇಲುಗಳ

ನಡುವಿನ ಅಂತರವು 3 ಫೂಟು, 6 ಇಂಚುಗಳಷ್ಟಿರುವದು. ನಮ್ಮ ರಾಜ್ಯದಲ್ಲಿ ಮೀಟರ ಗೇಜ ರೇಲು ಮಾರ್ಗವೆ ಅಧಿಕವಾಗಿರುವದು.

ಹಿಂದಿನ ಮೈಸೂರ ರಾಜ್ಯ ಕ್ಷೇತ್ರವೂ ಚಿಕ್ಕದಾಗಿತ್ತು. ಅನೇಕ ಉದ್ದಿಮೆಗಳೂ ಅಲ್ಲಿ ಪ್ರಾರಂಭವಾದವು. ಆಗಿನ ವಿಸ್ತಾರ ಹಾಗೂ ಉದ್ದಿಮೆಗಳಿಗೆ ಸಾಕಾಗುವಷ್ಟು ರೇಲು ಮಾರ್ಗಗಳು ಅಲ್ಲಿ ಇದ್ದವು. ಇಂದಿನ ಮೈಸೂರು ರಾಜ್ಯದ ವಿಸ್ತಾರವು ಎಷ್ಟೋ ಪಟ್ಟು ಹೆಚ್ಚಿದೆ. ಐದು ನಿಟ್ಟಿಗಳಿಂದ ಸಣ್ಣ ದೊಡ್ಡ ಭಾಗಗಳು ಕೂಡಿಕೊಂಡು ಅದರ ನಿರ್ಮಾಣವಾಗಿದೆ. ಈ ವಿಸ್ತಾರದ ಮಾನದಿಂದ ನೋಡಿದರೆ, ನಮ್ಮ ರಾಜ್ಯದಲ್ಲಿ ಸದ್ಯಕ್ಕೆ ರೇಲು ಮಾರ್ಗಗಳು ಕಡಿಮೆಯಾಗಿರುವವು. ಬೆಂಗಳೂರು, ಧಾರವಾಡ ಜಿಲ್ಲೆಗಳಲ್ಲಿ ರೇಲು ಮಾರ್ಗದ ಉದ್ದಳತೆ ಎಲ್ಲಕ್ಕೂ ಹೆಚ್ಚು. ಕೊಡಗು, ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ರೇಲು ಮಾರ್ಗಗಳ ಸೌಕರ್ಯವೇ ಇಲ್ಲವೆನ್ನಬಹುದು. ಬೆಂಗಳೂರು, ಹುಬ್ಬಳ್ಳಿ ರೇಲು ಮಾರ್ಗಗಳ ಮುಖ್ಯ ಕೇಂದ್ರಗಳು.

ನವಮೈಸೂರು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ನೀವು ವಾಸಿಸುವಿರಿ. ಜಿಲ್ಹೆಯ ಕ್ರೀಡಾ ಸ್ಪರ್ಧೆಗಳಲ್ಲಿ ನೀವು ಮೇಲೆ ಬಂದರೆ ರಾಜಧಾನಿಯಾದ ಬೆಂಗಳೂರಿಗೆ ಹೋಗಬೇಕಾಗುವದು. ಸುತ್ತಲಿನ ಸುಂದರ ಸ್ಥಳಗಳನ್ನು ನೋಡಲು ನೀವು ಹೋಗಬಹುದು. ನೀವು ನೆಲೆಸಿರುವ ಭಾಗದಿಂದ ಬೆಂಗಳೂರಿಗೆ ಮುಟ್ಟಿಸುವ ಕೆಲವು ರೇಲುಮಾರ್ಗಗಳನ್ನು ಗುರುತಿಸಬೇಕು:

1. ಕಲಬುರ್ಗಿಯಿಂದ ಬೆಂಗಳೂರಿಗೆ— ರಾಯಚೂರು, ಗುಂತಕಲ್, ಧರ್ಮಾವರಂ, ಬೆಂಗಳೂರು.
2. ಬೆಳಗಾವಿಯಿಂದ ಬೆಂಗಳೂರಿಗೆ—ಹುಬ್ಬಳ್ಳಿ, ಅರಸೀಕೇರಿ, ಬೆಂಗಳೂರು.
3. ವಿಜಾಪೂರದಿಂದ ಬೆಂಗಳೂರು— (ಅ) ಹುಟಗಿ, ಗುಂತಕಲ್ ಬೆಂಗಳೂರು. (ಬ) ಗದಗು, ಹೊಸಪೇಟೆ, ಗುಂತಕಲ್, ಬೆಂಗಳೂರು. (ಕ) ಗದಗು, ಹುಬ್ಬಳ್ಳಿ, ಅರಸೀಕೇರಿ, ಬೆಂಗಳೂರು.

ಕಾರವಾರ (ಉತ್ತರ ಕನ್ನಡ) ಜಿಲ್ಹೆಯವರು ಮೊದಲು ಮೋಟಾರಿನಿಂದ ಹುಬ್ಬಳ್ಳಿಗೆ ಬಂದು ಅಲ್ಲಿಂದ ಬೆಂಗಳೂರಿಗೆ ರೇಲು ಹತ್ತಬೇಕು. ಮಂಗಳೂರು (ದಕ್ಷಿಣ ಕನ್ನಡ) ಜಿಲ್ಹೆಯವರು ಶಿವಮೊಗ್ಗೆಗೆ ಅಥವಾ ಕಡೂರಿಗೆ ಮೋಟರಿನಿಂದ ಬಂದು ಬೆಂಗಳೂರಿಗಾಗಿ ಇಲ್ಲವೆ ಹುಬ್ಬಳ್ಳಿಗಾಗಿ ರೇಲು ಹತ್ತಬೇಕು.

ಕೊಡಗಿನಿಂದ ಬರತಕ್ಕವರಿಗೆ ಮಡಕೇರಿಯಿಂದ ಬೆಂಗಳೂರಿನ ವರೆಗೆ ಉತ್ತಮವಾದ ಲೈನು ಮಾರ್ಗವಿದೆ. ಆವರಿಗೆ ರೇಲು ಮಾರ್ಗದ ಅನುಕೂಲತೆ ಯಿಲ್ಲ, ಅವರು ಮೋಟಾರು ಮಾರ್ಗಗಳಿಂದಲೆ ಪ್ರವಾಸ ಮಾಡಬೇಕಾಗು ವದು.

ನಮ್ಮ ರಾಜ್ಯದ ಭೂಮಿಯು ಏರಿಳಿತಗಳಿಂದ ಕೂಡಿದೆ. ಸಹ್ಯಾದ್ರಿಯ ಬೆಟ್ಟಗಳು ಕರಾವಳಿಯ ಪ್ರದೇವನ್ನು ಪ್ರತ್ಯೇಕಿಸಿತ್ತಿವೆ ರಾಜ್ಯದ ಎಲ್ಲ ಭಾಗಗಳಲ್ಲಿ ಸಣ್ಣದೊಡ್ಡನದಿಗಳು ಹರಿಯುತ್ತಿವೆ. ರೇಲುಮಾರ್ಗಗಳ ರಚನೆಗೆ ಈ ಸಂಗತಿಗಳು ಆತಂಕವೆನಿಸುವವು. ಬೆಟ್ಟಗಳಲ್ಲಿರುವ ಕಣಿವೆ ಗಳನ್ನು ಸುತ್ತಿ ರೇಲುಮಾರ್ಗಗಳನ್ನು ಹಾಕಬೇಕು. ಇಲ್ಲವೆ ಬೆಟ್ಟವನು ಕೊರೆದು ಅವುಗಳಿಗೆ ಸುರಂಗದ ದಾರಿಯನ್ನು ಮಾಡಿಕೊಡಬೇಕು. ದು ಬಹು ಪ್ರಯಾಸದ ಕಾರ್ಯ. ವೆಚ್ಚವೂ ಬಹಳ ಹಿಡಿಯುವದು. ಅಂತೆಯೆ ನಮ್ಮ ಕರಾವಳಿಯ ಪ್ರದೇಶಕ್ಕೆ ದೇಶದ ಯಾವ ಭಾಗದಿಂದಲೂ ರೇಲುಮಾರ್ಗದ ಜೋಡಣೆಯಾಗಿಲ್ಲ. ನದಿಗಳಿರುವಲ್ಲಿ ಅವುಗಳಿಗೆ ಸೇತುವೆಗಳನ್ನು ಕಟ್ಟಬೇಕಾ ಗುವದು. ಇದಾದರೂ ವೆಚ್ಚದ ಪ್ರಯಾಸದ ಕೆಲಸ.

ನಮ್ಮ ರಾಜ್ಯದ ಬಂದರು ಸ್ಥಳಗಳಿಗೆ ರೇಲುಮಾರ್ಗಗಳ ಜೋಡಣೆಯಿರುವದಿಲ್ಲ. ಇದರಿಂದ ರಾಜ್ಯದ ವ್ಯಾಪ್ಯಾರ-ವ್ಯವಹಾರಗಳಿಗೆ ಆತಂಕವಾಗಿದೆ. ರಾಜ್ಯದ ಆದಾಯಕ್ಕೆ ಪ್ರತಿವರುಷ ಹಾನಿ ತಟ್ಟುತ್ತಿದೆ. ಮೇಲಾಗಿ ರಾಜಧಾನಿಯಾದ ಬೆಂಗಳೂರು ರಾಜ್ಯದ ಒಂದು ತುದಿಯಲ್ಲಿ ನೆಲೆ ಸಿದೆ. ಅನೇಕ ಪ್ರೇಕ್ಷಣೀಯ ಸ್ಥಳಗಳು, ಯಾತ್ರೆಯ ಸ್ಥಳಗಳು ಅಲ್ಲಲ್ಲಿ ಹರ ಡಿವೆ. ಒಳ್ಳೇ ಹವೆ, ಕೊಡಗಿನಂತಹ ಸೃಷ್ಟಿಸೌಂದರ್ಯದ ನೆಲವೀಡು, ನಮ್ಮ ರಾಜ್ಯಕ್ಕೆ ಲಭಿಸಿವೆ ಶ್ರೇಷ್ಠ ಶಿಲ್ಪಕಲೆಯ ಸ್ಥಾನಗಳು ಇಲ್ಲಿ ಬೇಕಾದಷ್ಟಿವೆ. ಅಂತೆಯೇ ಅನೇಕ ವಿದೇಶದ ಪ್ರವಾಸಿಕರು ಈ ರಾಜ್ಯವನ್ನು ಸಂದರ್ಶಿಸುವರು. ರಾಜ್ಯದಲ್ಲಿ ರೇಲು ಮಾರ್ಗಗಳನ್ನು ಹೆಚ್ಚಿಸುವುದರಿಂದ ಪ್ರವಾಸವು ಸುಖಕರ ವಾಗುವದು. ಸಾರಿಗೆಯಯು ಸುಗಮವಾಗುವದು. ರಾಜ್ಯದ ಆದಾಯವೂ ಹೆಚ್ಚುವದು.

ಎಂಥ ಮುಂದುವರಿದ ದೇಶವೇ ಆಗಿರಲಿ, ಆ ದೇಶದಲ್ಲಿಯ ಎಲ್ಲ ಊರುಗಳಿಗೂ ರೇಲು ಮಾರ್ಗವನ್ನು ಒದಗಿಸುವದು ಸಾಧ್ಯವಾಗಲಾರದು. ರೇಲು ಮಾರ್ಗಗಳಿರದಲ್ಲಿ ಲೈನು ಮಾರ್ಗಗಳು ಅಗತ್ಯವಾಗುವವು.



ನಿಮ್ಮ ಪ್ರೀತಿಯ ಎಸ್. ಟಿ. ಬಸ್ಸು

ನಮ್ಮ ದೇಶವಂತೂ ಹಳ್ಳಿಗಳ ದೇಶ. ನಗರಗಳೊಡನೆ ಹಳ್ಳಿಗಳ ಸಂಪರ್ಕ ವನ್ನು ತಂದುಕೊಡಲು ಲೈನಮಾರ್ಗ ಗಳೆ ಸಾಧನಗಳಾಗಿವೆ. ಹಿಂದಿನದು ಎತ್ತಿನ ಬಂಡಿಯ ಕಾಲ. ಇಂದು ಲೈನು ಮಾರ್ಗಗಳಲ್ಲಿ, ಬಸ್ಸು, ಟ್ರಕ್ಕು ಗಳು ಸಾರಿಗೆ ಸಂಚಾರಗಳ ಸಾಧನಗಳಾಗಿರುವವು. ಕಚೇರಿಯ ಕೆಲಸಕ್ಕಾಗಿ ತಾಲೂಕಿನ ಸ್ಥಳಕ್ಕೆ ಬರಲು ನಮ್ಮ ಹಿರಿಯರು ಬುತ್ತಿ ಕಟ್ಟಿಕೊಂಡು ಒಂದೆರಡು 'ವಸತಿ' ಮಾಡಬೇಕಾ ಗುತ್ತಿತ್ತು. ಬಸ್ಸುಗಳ ಸಹಾಯ ದಿಂದ ಅದೇ ಅಂತರನ್ನು ಇಂದು ಕೆಲ ಗಂಟೆಗಳಲ್ಲಿ ಮುಗಿಸುತ್ತಾರೆ; ಕೆಲಸ ಮುಗಿಸಿಕೊಂಡು ಅಂದೇ



ಸಾರಿಗೆಯ ಟ್ರಕ್ಕು

ಸಂಜೆಗೆ ಮರಳಿ ಮನೆಗೆ ಬರುತ್ತಾರೆ. ಅದರಿಂದ ಹಳ್ಳಿಗರ ಪ್ರವಾಸವು ಹೆಚ್ಚಾ ಗಿದೆ. ದಿನದಿನದ ವ್ಯಾಪಾರದ ವಸ್ತುಗಳಾದ ಹಾಲು, ಬೆಣ್ಣೆ, ತರಕಾರಿ, ಹಣ್ಣು ಹಂಪಲುಗಳನ್ನು ಸಮೀಪದ ದೊಡ್ಡೂರಿನ ಪೇಟೆಗಳಲ್ಲಿ ಮಾರಿಬರಲು ಅವರಿಗೆ ಅನುಕೂಲವಾಗಿದೆ. ಈ ಅನುಕೂಲತೆಯನ್ನು ಎಲ್ಲ ಹಳ್ಳಿಗಳಿಗೆ ಒದಗಿ ಸಲು ರಾಜ್ಯದ ಎಲ್ಲ ನಿಟ್ಟುಗಳಲ್ಲಿ ಲೈನು ಮಾರ್ಗಗಳನ್ನು ಹಾಕಬೇಕಾಗುವದು.

ರೇಲು ಮಾರ್ಗಗಳ ಕೊರತೆಯಿರುವಂತೆ, ನಮ್ಮ ರಾಜ್ಯದಲ್ಲಿ ಲೈನು ಮಾರ್ಗಗಳ ಕೊರತೆಯೂ ಇರುವದು. ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಾತ್ರ ಲೈನ ಮಾರ್ಗಗಳು ತುಸು ಹೆಚ್ಚಿಗಿರುವವು. ರೇಲು ಮಾರ್ಗದ ಸಂಪರ್ಕವಿಲ್ಲದಿರುವದೇ ಈ ಸಂಗತಿಗೆ ಕಾರಣವಾಗಿದೆ. ಮೇಲಾಗಿ ಇಲ್ಲಿಯ ಲೈನು ಮಾರ್ಗಗಳು ಮಳೆಗಾಲದಲ್ಲಿ ಇದ್ದೂ ಇಲ್ಲದಂತಾಗುವವು. ಕೊಡಗು ಚಿಕ್ಕದಾದರೂ, ಆ ಪ್ರದೇಶದಲ್ಲಿರುವ ಲೈನುಮಾರ್ಗಗಳು ಸಾಕಷ್ಟಿವೆ; ಚೆನ್ನಾ ಗಿವೆ. ಬಳ್ಳಾರಿ ಬೀದರ ಜಿಲ್ಲೆಗಳಲ್ಲಿ ಮಾತ್ರ ಲೈನುದಾರಿಗಳು ತೀರ ಕಡಿಮೆ.

ಲೈನು ಮಾರ್ಗಗಳಲ್ಲಿ ಕೆಲವು ರಾಷ್ಟ್ರೀಯ ಹೆದ್ದಾರಿಗಳು :— ಮುಂಬಯಿ, ಕಲಕತ್ತೆ, ದಿಲ್ಲಿ ಮೊದಲಾದ ಮಹತ್ವದ ಸ್ಥಳಗಳಿಗೆ ಈ ಹೆದ್ದಾ

ರಿಗಳಲ್ಲಿ ಯಾವ ಅಡೆತಡೆಯಿಲ್ಲದೆ ಪ್ರವಾಸ ಮಾಡಬಹುದು.

ಜಲಮಾರ್ಗ :— ನಮ್ಮ ರಾಜ್ಯಕ್ಕೆ 200 ಮೈಲುಗಳಷ್ಟು ಮಾತ್ರ ಸಮುದ್ರದ ದಂಡೆಯಿದೆ. ಆದರೆ ಉಳಿದ ರಾಜ್ಯಗಳಿಗಿಂತಲೂ, ಇಲ್ಲಿ ಬಂದರುಗಳಾಗಲು ಯೋಗ್ಯವಾದ ಹೆಚ್ಚು ಸ್ಥಳಗಳಿವೆ. ಮಂಗಳೂರು, ಮಲ್ಪೆ, ಭಟಕಳ, ಕಾರವಾರ ಇವು ಮುಖ್ಯವಾದವುಗಳು. ಪ್ರಾಚೀನ ಕಾಲದಲ್ಲಿ ಈ ಬಂದರಗಳ ಮುಖಾಂತರ ವಿದೇಶಗಳ ಕೂಡ ವ್ಯಾಪಾರ ನಡೆಯುತ್ತಿತ್ತೆಂದು ತಿಳಿಯುತ್ತದೆ. ತದಡಿ, ಕುಮಠಾ, ಹೊನ್ನಾವರ, ಬೈಂದೂರ, ಗಂಗೊಳ್ಳಿ, ಹಂಗರಕಟ್ಟಾ ಇವು ಚಿಕ್ಕ ಬಂದರಗಳು.



ಸಾರಿಗೆಯ ಉಗಿಹಡಗು

ಮಳೆಗಾಲದಲ್ಲಿ ಈ ಬಂದರಗಳ ಉಪಯೋಗವಾಗುವಂತಿಲ್ಲ. ಉಳಿದ ತಿಂಗಳುಗಳಲ್ಲಿ ಹಡಗುಗಳು ದಂಡೆಯಿಂದ ಒಳಗೆ ದೂರದಲ್ಲಿ ನಿಲ್ಲುವವು. ಸರಕುಗಳನ್ನು, ಪ್ರವಾಸಿಕರನ್ನು ಡೋಣಿಗಳಲ್ಲಿ ಹಡಗುಗಳಿಗೆ ಮುಟ್ಟಿಸುವರು. ಹನ್ನೆರಡು ತಿಂಗಳೂ ಉಪಯುಕ್ತವಾದ ಬಂದರವಿಲ್ಲದ್ದರಿಂದ ನಮ್ಮ ರಾಜ್ಯದ ಹೊರನಾಡಿನ ವ್ಯಾಪಾರವು ಮದ್ರಾಸಿನ ಇಲ್ಲವೆ ಮುಂಬಯಿಯ ಮುಖಾಂತರ ಸಾಗುತ್ತಿದೆ. ಮಂಗಳೂರನ್ನು ಸುಸಜ್ಜಿತವಾದ ಹಾಗೂ ಸರ್ವಕಾಲದ ಬಂದರವನ್ನಾಗಿ ಬೆಳೆಸಲು ಇಂದು ನಿರ್ಧಾರವಾಗಿದೆ. ಇದರಿಂದ ರಾಜ್ಯದ ಒಂದು ಕೊರತೆಯು ಇಲ್ಲದಂತಾಗುವದು.

**ವಿಮಾನ ಮಾರ್ಗಗಳು :-**

ಹಕ್ಕಿಗಳಂತೆ ರೆಕ್ಕೆಗಳಿದ್ದರೆ ।
ಗಕ್ಕನೆ ಗಗನಕೆ ಹಾರುತಲಿದ್ದೆ.



ಸಾರಿಗೆಯ ವಿಮಾನು

ಈ ಕವಿತೆಯನ್ನು ನೀವು ಓದಿರಬಹುದು. ಇಂದು 'ಗಕ್ಕನೆ' ನಿಮ್ಮನ್ನು ಆಕಾಶ ಮಾರ್ಗದಲ್ಲಿ ಹಾರಿಸಿಕೊಂಡು ಹೋಗುವ ಸಾಧನಗಳಿವೆ. ನಿಮ್ಮೂರಿನ ಮೇಲೆ ಹಾರಿ ಹೋಗುವ ವಿಮಾನುಗಳನ್ನು ನೀವು ನೋಡಿರುವಿರಿ. ಈ ವಿಮಾನಗಳ ಮಾರ್ಗಗಳನ್ನು ಕಟ್ಟಬೇಕಿಲ್ಲ. ಜತನ ಮಾಡಬೇಕಿಲ್ಲ. ಆದರೆ, ವಿಮಾನಗಳಿಗೆ ಏರಲು ಇಳಿಯಲು ಅನೇಕ

ಸಾಧನಗಳಿಂದ ಕೂಡಿದ ವಿಶಾಲವಾದ ಸಮ ಭೂಮಿಯು ಬೇಕು. ಇಂಥ ಸ್ಥಳಗಳಿಗೆ ವಿಮಾನ ನಿಲ್ದಾಣವೆನ್ನುವರು. ಬೆಂಗಳೂರು, ಬೆಳಗಾಂವಿ (ಸಾಂಬ್ರಾ), ಮಂಗಳೂರು ಇವು ನಮ್ಮ ರಾಜ್ಯದ ವಿಮಾನ ನಿಲ್ದಾಣಗಳಾಗಿವೆ. ವಿಮಾನ ಮಾರ್ಗಗಳಿಗೆ ವಾಯುಮಾರ್ಗಗಳೆಂತಲೂ ಹೇಳುವರು.

ವಿಮಾನಗಳ ಉಪಯೋಗವು ಮೊದಲು ಯುದ್ಧಭೂಮಿಯಲ್ಲಿ ಆಯಿತು. ಈಗಲೂ ವಿಮಾನ ಪಡೆಯು ಸೈನ್ಯದ ಒಂದು ಮಹತ್ವದ ಭಾಗವೆನಿಸುವದು. ಇದರ ಜೊತೆಗೆ ವಿಮಾನಗಳು ಸಾರಿಗೆ ಸಂಚಾರಗಳ ಅತಿ ವೇಗದ ಸಾಧನಗಳಾಗಿವೆ. ಸದ್ಯಕ್ಕೆ ವಿಮಾನಗಳು ಅಂಚೆ ಹಾಗೂ ಪ್ರವಾಸಿಕರನ್ನು ಮಾತ್ರ ತೆಗೆದುಕೊಂಡು ಹೋಗುವವು.

ನಮ್ಮ ರಾಜ್ಯದ ರಾಜಧಾನಿಯಾದ ಬೆಂಗಳೂರು ವಿಮಾನಗಳ ನಿಲ್ದಾಣವಾಗಿದೆ. ಇಲ್ಲಿಂದ ಮುಂಬಯಿ, ಮದ್ರಾಸಗಳಿಗೆ ಹೋಗಬಹುದು. ಮುಂಬಯಿಯಿಂದ ಹೊರಟ ವಿಮಾನವು ಪುಣೆ, ಬೆಳಗಾಂವಿಗಳ ಮೇಲಿಂದ 6 ತಾಸುಗಳಲ್ಲಿ ಬೆಂಗಳೂರಿಗೆ ಬರುತ್ತದೆ. ಬೆಳಗಾಂವಿಯೂ ನಮ್ಮ ರಾಜ್ಯದಲ್ಲಿ ವಿಮಾನ ನಿಲ್ದಾಣವಾಗಿದೆ. ಉದ್ದಿಮೆಗಳ ಕೇಂದ್ರವಾದ ಹುಬ್ಬಳ್ಳಿಯ ನೆರೆಯಲ್ಲಿ ವಿಮಾನ ನಿಲ್ದಾಣವನ್ನು ರಚಿಸಬೇಕೆಂದು ಸರಕಾರದ ಯೋಜನೆಯಾಗಿದೆ.

## ಅಭ್ಯಸನಗಳು

1. ಬ್ರಿಟಿಶರು ಮಾರ್ಗಗಳನ್ನು ಯಾವ ಉದ್ದೇಶಗಳಿಗಾಗಿ ರಚಿಸಿದರು ?
2. ಟಿಪ್ಪಣಿ ಬರೆಯಿರಿ:– (ಅ) ಬ್ರಾಡಗೇಜ (ಬ) ಮೀಟರ ಗೇಜ (ಕ) ರೇಲು ಮಾರ್ಗಗಳ ರಚನೆಯಲ್ಲಿ ಆತಂಕಗಳು.
3. ಕಾರಣಗಳನ್ನು ಕೊಡಿರಿ.
   (ಅ) ಉತ್ತರ-ಭಾರತದಲ್ಲಿ ರೇಲು ಮಾರ್ಗಗಳು ಜಾಳಿಗೆಯಂತೆ ಹಬ್ಬಿರುವವು.
   (ಬ) ಕರಾವಳಿಯ ಜನರು ಬೆಂಗಳೂರಿಗೆ ಹೋಗಲು ಕಡೂರ ಹುಬ್ಬಳ್ಳಿಗಳಿಗೆ ಬರಬೇಕಾಗುವದು.
   (ಕ) ನಮ್ಮ ರಾಜ್ಯದಲ್ಲಿ ರೇಲು ಮಾರ್ಗಗಳ ವಿಸ್ತರಣೆಯು ಅಗತ್ಯವಾಗಿದೆ.
4. ಲೈನು ಮಾರ್ಗಗಳಿರುವದರಿಂದ ಹಳ್ಳಿಯ ಜನರಿಗೆ ಯಾವ ಅನುಕೂಲತೆಗಳು ಆಗುವವು ?
5. ಲೈನು ಮಾರ್ಗಗಳು ರಾಜ್ಯದ ಯಾವ ಜಿಲ್ಹೆಗಳಲ್ಲಿ ಹೆಚ್ಚಿಗೆ ಇರುವವು ? ಏಕೆ ? ಯಾವ ರಾಜ್ಯಗಳಲ್ಲಿ ತೀರ ಕಡಿಮೆಯಾಗಿವೆ ?

6. ದೊಡ್ಡ ಬಂದರವಿಲ್ಲದ್ದರಿಂದ ನಮ್ಮ ರಾಜ್ಯಕ್ಕೆ ಆಗುವ ಹಾನಿಗಳು ಏನು ?
7. ವಿಮಾನ ನಿಲ್ದಾಣಗಳು ಹೇಗಿರಬೇಕು ? ಈ ರಾಜ್ಯದ ವಿಮಾನ ನಿಲ್ದಾಣ ಗಳು ಯಾವು ?

## 11. : : : : : : : : ಆಯಾತ ನಿರ್ಯಾತಗಳು

ಸಂತೆ ಪೇಟೆಗಳಲ್ಲಿ ನಿತ್ಯವೂ ಏನು ನಡೆಯುತ್ತಿದೆಯೆಂಬುದನ್ನು ನೀವು ನೋಡುವಿರಿ. ಅಲ್ಲಿ ತಮ್ಮ ವಸ್ತುಗಳನ್ನು ಮಾರುವವರು ಕೆಲವರು ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವರು ಕೆಲವರು. ಎರಡು ನಿಟ್ಟಿನ ಈ ಕಾರ್ಯವೆ ವ್ಯಾಪಾರವು. ಮಾರುವದು ಕೊಳ್ಳುವದು ವ್ಯಾಪಾರದ ಎರಡು ಮುಖಗಳಿದ್ದಂತೆ, ಒಂದೇ ನಾಣ್ಯದ ಎರಡು ಬದಿಗಳಿದ್ದಂತೆ. ವ್ಯಾಪಾರಕ್ಕೆ 'ವಾಣಿಜ್ಯ'ವೆಂತಲೂ ಹೇಳುವರು

ನಮ್ಮ ಜೀವನದ ಬೇಡಿಕೆಗಳು ದಿನದಿನಕ್ಕೆ ಹೆಚ್ಚುತ್ತಿವೆ. ನಮಗೆ ಬೇಕಾ ಗುವ ಎಲ್ಲ ವಸ್ತುಗಳನ್ನು ನಾವೇ ತಯಾರಿಸುವದಿಲ್ಲ. ತಯಾರಿಸುವದು ಸಾಧ್ಯವೂ ಇರುವದಿಲ್ಲ. ಬೇರೆ ಪ್ರದೇಶಗಳಲ್ಲಿ ಸಿದ್ಧವಾಗುವ ವಸ್ತುಗಳನ್ನು ನಾವು ತರಿಸಬೇಕಾಗುವದು. ಅಗತ್ಯವಿರುವ ವಸ್ತುಗಳನ್ನು ಹೊರನಾಡು ಗಳಿಂದ ತರಿಸಿಕೊಳ್ಳುವದಕ್ಕೆ ಆಯಾತವೆನ್ನುವರು. ನಮಗೆ ಬೇಕಾದುದ ಕ್ಕಿಂತಲೂ ಅಧಿಕವಾಗಿ ಉತ್ಪಾದಿಸುವ ವಸ್ತುಗಳನ್ನು ಹೊರನಾಡುಗಳಿಗೆ ಕಳಿಸಿಕೊಡುವದಕ್ಕೆ ನಿರ್ಯಾತವೆನ್ನುವರು. ಆಯಾತಕ್ಕೆ 'ಆಮದು' ಎಂತಲೂ, ನಿರ್ಯಾತಕ್ಕೆ 'ರಫ್ತು' ಎಂತಲೂ ಬೇರೆ ಹೆಸರುಗಳಿವೆ.

ನಮಗೆ ಬೇಕಾದ ವಸ್ತುಗಳನ್ನು ನಾವು ರೋಖು ಹಣ ಕೊಟ್ಟು ಕೊಂಡುಕೊಳ್ಳಬಹುದು, ರೋಖು ಹಣ ತೆಗೆದುಕೊಂಡು ಮಾರಬಹುದು. ಇನ್ನೂ ಒಂದು ರೀತಿ ಇರುವದು. ನಾವು ಒಂದು ವಸ್ತುವನ್ನು ಕೊಟ್ಟು ಅದಕ್ಕೆ ಪ್ರತಿಯಾಗಿ ಬೇರೊಂದು ವಸ್ತುವನ್ನು ಪಡೆಯಬಹುದು. ಹೀಗೆ ಮಾರುವದಕ್ಕೆ 'ವಿನಿಮಯ' ವೆನ್ನುವರು. ವ್ಯಾಪಾರವು ಈ ಬಗೆಯ ವಿನಿಮಯ ದಿಂದಲೆ ಪ್ರಾರಂಭವಾಯಿತೆಂದು ಹೇಳುವರು. ಈ ಪದ್ಧತಿಯು ಇಂದಿಗೂ ನಮ್ಮ ಹಳ್ಳಿಯಲ್ಲಿ ನೆಲೆಸಿದೆ. ಹಳ್ಳಿಯ ಜನರು ತಮಗೆ ನಿತ್ಯವೂ ಬೇಕಾಗುವ ಹಾಲು, ಮೊಸರು, ಕಾಯಿಪಲ್ಲೆ ಹಾಗೂ ಕಿರಾಣಿಯ ಪದಾರ್ಥಗಳನ್ನು ಕಾಳುಹಾಕಿ' (ಧಾನ್ಯವನ್ನು ಕೊಟ್ಟು) ತರುವರು. ಇದೇ ವಿನಿಮಯ ಪದ್ಧತಿ

ಮಾಡಬೇಕು.

ಈ ನುಡಿಯನ್ನು ನುಡಿಯಲು ಪ್ರಾರಂಭ ಮಾಡಿದರೆ ಸಾಕು. ಕೊಳಲು ನುಡಿಯುತ್ತಿದೆಯೆಂಬ ಭಾಸವಾಗಿ, ಜಗತ್ತೆಲ್ಲವೂ ತನ್ನ ಕರ್ತವ್ಯವನ್ನು ಮರೆತು ಕೊಳಲಿನ ಇನಿದನಿಯನ್ನು ಕೇಳುತ್ತ ನಿಂತಿದೆ ಎಂದು ಭಾಸವಾಗದೆ ಇರದು.

## (ಬ) ಪ್ರಸನ್ನ ವೆಂಕಟರ ವಿಶೇಷ ಕೃತಿಗಳು.

ಎಲ್ಲ ದಾಸವಾಙ್ಮಯದಲ್ಲಿ ಪದಪದ್ಯಗಳು ಹೆಚ್ಚಾಗಿ ಕಾಣುತ್ತವೆ. ಒಂದು ಪದದಲ್ಲಿ ೩, ೫, ೭ ಹೆಚ್ಚಾಗಿ ೧೧ ನುಡಿಗಳು ಕಂಡುಬರುವವು. ಆದರೆ ಒಂದು ವಿಷಯವನ್ನು ತೆಗೆದುಕೊಂಡು ದೀರ್ಘವಾಗಿ ಚರ್ಚಿಸಿ, ಪದಗಳನ್ನು ಬರೆವದ್ದು ಇತರ ದಾಸರಲ್ಲಿ ವಿಶೇಷವಾಗಿ ಕಂಡುಬರುವದಿಲ್ಲ. ಶ್ರೀ ಕನಕದಾಸರೊಬ್ಬರು "ಮೋಹನ ತರಂಗಿಣಿ" ಯನ್ನು ಬರೆದಿದ್ದಾರೆ. ಉಳಿದ ದಾಸರು ಹೀಗೆ ಬರೆದಿಲ್ಲ. ಆದರೆ ಶ್ರೀಪ್ರಸನ್ನ ವೆಂಕಟದಾಸರು ಮಾತ್ರ ಇಂಥ ಕೃತಿಗಳನ್ನು ನಿರ್ಮಿಸಿದ್ದಾರೆ. ಅವರ ವಿಷಯದಲ್ಲಿ ಇದೊಂದು ಹೆಚ್ಚಿನ ಸಂಗತಿಯೆಂದು ಹೇಳಬಹುದು. ಅವರು ಬರೆದ ಇಂಥ ಕೃತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

**೧. ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ[೧]:—** ಇದು ಭಾಮಿನಿ ಷಟ್‌ಪದಿಯಲ್ಲಿದೆ. ಇದರಲ್ಲಿ ೭೧ ನುಡಿಗಳಿದ್ದು, ೫೩ ನೇ ನುಡಿಯು ದೊರೆತಿಲ್ಲ. ಮೊದಲಿನ ೧೩ ನುಡಿಗಳು ದೇವರ ಸ್ತೋತ್ರದ ಬಗ್ಗೆ ಮೀಸಲಾಗಿವೆ. ಮುಂದೆ ವರ್ಣಮಾಲೆ ಆರಂಭವಾಗುವದು. ೧೪ನೇ ನುಡಿಯಲ್ಲಿ ಅಕಾರದಿಂದ ಔಕಾರದ ವರೆಗೆ ೧೬ ಸ್ವರಗಳಿದ್ದು, ಅನುಸ್ವಾರ, ವಿಸರ್ಗ ಸೇರಿ ೧೮ ಅಕ್ಷರಗಳಿವೆ. ೧೫ ಮತ್ತು ೧೬ ಈ ನುಡಿಗಳಲ್ಲಿ ವರ್ಗೀಯ ವ್ಯಂಜನಗಳು ಮತ್ತು ಉಳಿದ ಅವರ್ಗೀಯ ೧೦ ಅಕ್ಷರಗಳು ಬಂದಿವೆ. ಮುಂದೆ ೧೭ನೆಯ ನುಡಿಯಿಂದ ಆರಂಭ ಮಾಡಿ ೪೭ ನುಡಿಯ ವರೆಗೆ ಕ ಕಾ ಕಿ ಕೀ ಹೀಗೆ ಆರಂಭ ಮಾಡಿ, ಕ್ಷ ಕ್ಷಾ ಕ್ಷಿ ಕ್ಷೀ........ ಕ್ಷಂ ಕ್ಷಃ ದ ವರೆಗೆ ಅಕ್ಷರಗಳನ್ನು ಪ್ರಸನ್ನ ವೆಂಕಟರು ವಿಸ್ತರಿಸಿದ್ದಾರೆ. ಇವುಗಳಲ್ಲಿ ಇ ಈ ಬಳ್ಳಿಯಲ್ಲಿ ೪೭ನೆಯ ನುಡಿಯಿಂದ ೫೭ನೆಯ ನುಡಿಯ ವರೆಗೆ ಏಕದ್ವಿಯಿಂದ ದಶವ ವರೆಗೆ ಅಂಕಿಗಳನ್ನು ಹೇಳಿದ್ದಾರೆ. ೫೭ನೇ ನುಡಿಯಲ್ಲಿ ಶತಂ ಅಂಕಿಯು ಬಂದಿವೆ.

---

೧. ಪ್ರಬಂಧ ಪದ ಸಂಖ್ಯೆ ೧೯೩

ಈ ರಾಜ್ಯದ ಮಧುರವಾದ ಮಾವಿನ ಹಣ್ಣುಗಳು ಕೂಡ ವಿದೇಶಗಳಲ್ಲಿ ಮಾರಾಟವಾಗುವವು. ಮಾವಿನ ಹಣ್ಣುಗಳನ್ನು ಕೆಡದಂತೆ, ನಿರ್ವಾತ ಡಬ್ಬಿಗಳಲ್ಲಿ ಹಾಕಿ ಕಳಿಸುವರು. ಅಂಕೋಲೆಯ 'ಈಶಾಡಿ' ಮಾವಿನ ಹಣ್ಣಿನ ರಸ ಲಂಡನ್‌ದಲ್ಲಿಯೂ ಇಂದು ದೊರೆಯುವಂತಾಗಿದೆ. ಕರಾವಳಿಯ ಪ್ರದೇಶದಲ್ಲಿ ಮೀನುಗಾರಿಕೆಯು ಹೆಚ್ಚಾಗಿ ನಡೆಯುವದು. ಅಲ್ಲಿ ಒಣಗಿಸಿದ ಮೀನಗಳನ್ನು ಹೊರನಾಡುಗಳಿಗೆ ಕಳಿಸುವರು.

ರಾಜ್ಯದಲ್ಲಿ ಅನೇಕ ಸಣ್ಣ ದೊಡ್ಡ ಕಾರಖಾನೆಗಳಿರುವವು. ನಿರ್ಯಾತವಾಗುವ ಅನೇಕ ಸರಕುಗಳನ್ನು ಅವುಗಳಲ್ಲಿ ತಯಾರಿಸುವರು. ಭದ್ರಾವತಿಯ ಕಬ್ಬಿಣ ಉಕ್ಕಿನ ವಸ್ತುಗಳು, ಭದ್ರಾವತಿ ದಾಂಡೇಲಿಗಳಲ್ಲಿಯ ಕಾಗದ, ಪದರು ಕಟ್ಟಿಗೆ (ಪ್ಲಾಯವುಡ್), ನೂಲು, ಉಣ್ಣೆ ಹೆಚ್ಚಾಗಿ ರೇಶಿಮೆ ಬಟ್ಟೆಗಳು, ಭದ್ರಾವತಿ ಬಾಗಿಲುಕೋಟೆಗಳಲ್ಲಿಯ ಸಿಮೆಂಟು, ಮಂಡ್ಯದ ಸಕ್ಕರೆ, ಎಂದಿನಿಂದಲೂ ಪ್ರಸಿದ್ಧವಾದ ಮಂಗಳೂರಿನ ಹಂಚುಗಳು, ಮೈಸೂರಿನ ಪಿಂಗಾಣಿ ಒಡವೆಗಳು, ಸಾಬೂನುಗಳು, ದಾವಣಗೇರಿಯ 'ವನಸ್ಪತಿ ತುಪ್ಪ' ಇವೇ ಮುಂತಾದ ಕಾರಖಾನೆಗಳಲ್ಲಿ ಸಿದ್ಧವಾಗುವ ವಿವಿಧ ವಸ್ತುಗಳು ಈ ರಾಜ್ಯದಿಂದ ನಿರ್ಯಾತವಾಗುವವು.

ಸಮಗ್ರ ಭಾರತದ ಆಯಾತ ವಸ್ತುಗಳೇ ನಮ್ಮ ರಾಜ್ಯದ ಆಯಾತ ವಸ್ತುಗಳೆಂದು ಸಾಮಾನ್ಯವಾಗಿ ಹೇಳಬಹುದು. ಆಹಾರದ ಕೊರತೆಯ ಕಾಲದಲ್ಲಿ ಆಹಾರ ಧಾನ್ಯಗಳಿಗೆ ಆಯಾತದಲ್ಲಿ ಮೊದಲನೇ ಸ್ಥಾನ ಕೊಡಬೇಕಾಗುವದು. ಹಾಲಿನ ಪುಡಿಯು ಎರಡನೆಯದು. ಯಂತ್ರ ಸಾಮಗ್ರಿ, ಬೆಲ್ಲ, ಚಹಾ, ಕೋಕೊ, ಮಕ್ಕಳ ಆಟಿಗೆಗಳು, ಔಷಧ, ಪೆಪ್ಪರಮಿಂಟು, ಬಿಸ್ಕೀಟು, ಸೂಜಿ, ಚಾಕು, ಕರಗಸ ಕತ್ತರಿ, ವೈದ್ಯಕೀಯ ಸಲಕರಣೆಗಳು— ಮುಂತಾದ ನಿತ್ಯೋಪಯೋಗಿ ವಸ್ತುಗಳು ನಮ್ಮ ರಾಜ್ಯದ ಆಯಾತದ ಮುಖ್ಯ ಸರಕುಗಳು.

## ಅಭ್ಯಸನಗಳು

1. ಆಯಾತ ನಿರ್ಯಾತಗಳ ಅಗತ್ಯವೇಕಿರುವದು ?
2. ಮೈಸೂರು ರಾಜ್ಯದ ಮುಖ್ಯವಾದ ನಿರ್ಯಾತಗಳು ಯಾವು ? ಈ ರಾಜ್ಯದ ವಿವಿಧವಾದ ಸಂಪತ್ತು ಅವುಗಳಿಗೆ ಹೇಗೆ ಕಾರಣವಾಗಿದೆ ?
3. ಪರದೇಶಗಳಲ್ಲಿ ಹೆಚ್ಚು ಬೇಡಿಕೆಯುಳ್ಳ ಈ ರಾಜ್ಯದ ಹುಟ್ಟುವಳಿಗಳು ಯಾವು ?

4. ಈ ರಾಜ್ಯದ ಕರಾವಳಿಯ ಪ್ರದೇಶದಿಂದ ನಿರ್ಯಾತವಾಗುವ ವಸ್ತುಗಳು ಯಾವು ?
5. ಯಾವ ವಸ್ತುಗಳನ್ನು ಈ ರಾಜ್ಯವು ಹೊರಗಿನಿಂದ ತರಿಸಿಕೊಳ್ಳುವದು ?

## 12. : : : : : : : : : : ಮುಖ್ಯ ನಗರಗಳು

ಮೈಸೂರು ರಾಜ್ಯ ಬಹಳ ಭಾಗ್ಯಶಾಲಿಯಾದುದು. ಏಕೆಂದರೆ ಈ ರಾಜ್ಯಲ್ಲಿ ಸಂಪತ್ತು, ಸೌಂದರ್ಯಗಳೆರಡೂ ಅಷ್ಟೇ ಸಮೃದ್ಧವಾಗಿ ನೆಲೆಸಿರುವವು. ಹವೆ ಹಿತಕರವಾದುದು, ಬಿಸಿಲು ಸೌಮ್ಯವಾದುದು, ಪ್ರಕೃತಿಮಾತೆ ತನ್ನ ಸೊಬಗು ಸಂಪತ್ತುಗಳನ್ನು ಕೈಬಿಚ್ಚಿ ಇಲ್ಲಿ ಸೂರೆಗೊಂಡಿರುವಳು. ಇಲ್ಲಿ ಕಾಡುಗಳಿಂದ ಕೂಡಿದ ಬೆಟ್ಟಗಳಿವೆ. ಸದಾ ಹಸಿರು ಸುರಿಯುವ ಹಳವುಗಳಿವೆ. ನಿತಾಂತವಾಗಿ ಹರಿಯುವ ನದಿಗಳಿವೆ. ಬೆರಗುಗೊಳಿಸುವ ತಡಸಲುಗಳಿವೆ. ಕಣ್ಣು ಹರಿಯುವವರೆಗೆ ಕಾಣುವ ಸಮನೆಲದ ಕರಿಭೂಮಿ ಇದೆ. ಬೆಟ್ಟ ಬೆಟ್ಟಗಳಲ್ಲಿ ಕೋಟೆಕೊತ್ತಲುಗಳಿವೆ. ಅವುಗಳ ಒಂದೊಂದು ಬಂಡೆಗಲ್ಲು, ಒಂದೊಂದು ಚರಿತ್ರೆಯನ್ನು ಸಾರಿ ಹೇಳುವಂತಿದೆ. ಎಣಿಕೆಯಿಲದಷ್ಟು ಗುಡಿಗೋಪುರಗಳಿವೆ. ಎಲ್ಲ ಧರ್ಮದವರಿಗೂ ಪವಿತ್ರವಾದ ಪುಣ್ಯ ಸ್ಥಳಗಳಿವೆ, ಕ್ಷೇತ್ರಗಳಿವೆ. ಕೇವಲ ‘ ಸೊಬಗಿನ ಬೀಡು ’ ಗಳೆಂದು ಹೆಸರಾದ ಅನೇಕ ಸ್ಥಳಗಳಿವೆ. ಸ್ವರ್ಗದ ಒಂದು ತುಣುಕನ್ನೆ ಕೆಳಗೆ ಚೆಲ್ಲಿ ಕೊಟ್ಟಂತಿರುವ ‘ವೃಂದಾವನ’ವಿದೆ. ಕಾಡಾನೆಗಳನ್ನು ಹಿಡಿಯುವ ಕಲೆಯು ಇಲ್ಲಿ ಕಾಣಬಹುದು. ಬೇಕಾದರೆ ಹುಲಿಯ ಬೇಟೆಯಾಡಬಹುದು. ಇವುಗಳ ಜೊತೆಗೆ ಉದ್ದಿಮೆಯ ಕೇಂದ್ರಗಳಿವೆ. ನವನಾಗರಿಕತೆಯ ಮೆಟ್ಟುಗಳಾದ ನಗರಗಳಿವೆ. ಆಕರ್ಷಕವಾದ ಇವೆಲ್ಲ ಸ್ಥಳಗಳು ವರುವರುಷವೂ ಸಾವಿರಾರು ಸಂದರ್ಶಕರನ್ನು ಬರಮಾಡಿಕೊಳ್ಳುತ್ತವೆ. ಮೈಸೂರು ರಾಜ್ಯವು ಎಲ್ಲ ಸಂದರ್ಶಕರನ್ನೂ ಸ್ವಾಗತಿಸುವದು. ಅವರಿಗೆ ಎಲ್ಲ ಸೌಕರ್ಯಗಳನ್ನು ಒದಗಿಸುವದು. ಇವೆಲ್ಲ ಸ್ಥಳಗಳನ್ನು ನೋಡಲು ನಿಮ್ಮ ಬಿಡುವಿನ ಸಮಯ ಸಾಲದು. ಕೆಲವೊಂದು ಮಹತ್ವದ ಸ್ಥಳಗಳಿಗೆ ಮಾತ್ರ ನಾವು ಹೋಗಿ ಬರೋಣ. ಬೆಂಗಳೂರು ಸಾರಿಗೆ-ಸಾಧನಗಳ ಕೇಂದ್ರವೆಂದು ನಿಮಗೆ ಗೊತ್ತಿದೆ. ಅಲ್ಲಿ ಎಲ್ಲ ಬಗೆಯ ವಾಹನಗಳೂ ನಿಮಗೆ ದೊರೆಯುವವು. ಬೆಂಗಳೂರಿನಿಂದಲೆ ನಮ್ಮ ಯಾತ್ರೆ ಪ್ರಾರಂಭಿಸೋಣ.

ಬೆಂಗಳೂರು :— ನಮ್ಮ ರಾಜ್ಯದ ರಾಜಧಾನಿ. ಸುಂದರವಾದ ನಗರ. ಹಿತಕರವಾದ ಹವೆ. ನಗರ ಹಾಗೂ ದಂಡಿನ ಭಾಗಗಳೆಂಬ ಹಿಂದಿನ ಎರಡು ವಿಭಾಗಗಳು ಇಂದು ಒಂದುಗೂಡಿವೆ. ನಗರವು ಇಂದು ಭರದಿಂದ ಬೆಳೆಯುತ್ತಿದೆ. ಅನೇಕ ಉಪನಗರ (ಬಡಾವಣೆ)ಗಳು ನಿರ್ಮಾಣವಾಗಿವೆ. ಇಲ್ಲಿ ನೋಡಬೇಕಾದ ಸ್ಥಳಗಳು ಅನೇಕವಾಗಿವೆ. ಟೀಪುವಿನ ಅರಮನೆ, ಕೋಟೆಗಳಿವೆ. ಇದು ಉದ್ಯಾನಗಳ ನಗರ. ಲಾಲ್‌ಬಾಗ ಅವುಗಳಲ್ಲಿ ಹಿರಿದಾದುದು. ನೀವು ನೋಡಲು ಆತುರರಾಗಿರುವದು 'ವಿಧಾನ ಸೌಧ' ರಾಜ್ಯದ ಆಡಳಿತ ಕೇಂದ್ರ. ಹಿಂದಿನ ಹಾಗೂ ಇಂದಿನ ಶಿಲ್ಪಕಲೆಗಳ ಸುಂದರ ವಾದ ಸಂಗಮವನ್ನು ವಿಧಾನ ಸೌಧದಲ್ಲಿ ನೀವು ನೋಡುವಿರಿ.

ಬೆಂಗಳೂರಿನ ಕೆಲವೊಂದು ಕಾರಖಾನೆಗಳನ್ನು ನೋಡಿ ಬನ್ನಿರಿ. ಇವುಗಳಲ್ಲಿ ಮುಖ್ಯವಾದುದು " ಹಿಂದುಸ್ತಾನ ವಿಮಾನ ಕಾರಖಾನೆ. "

ಸಂಘ ಸಂಸ್ಥೆಗಳಲ್ಲಿ ಭಾರತೀಯ ವಿಜ್ಞಾನ ಮಂದಿರ, ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಮಂದಿರಗಳನ್ನು ನೋಡಲು ಮರೆಯಬೇಡಿರಿ. ಬೆಂಗಳೂರಿನಲ್ಲಿ ಹೂ-ಹಣ್ಣುಗಳು ಸಮೃದ್ಧವಾಗಿ ದೊರೆಯುವವು.

**ತಿಪ್ಪಗೊಂಡ** ಹಳ್ಳಿಯೆಂಬುದು ಬೆಂಗಳೂರಿನಿಂದ 22 ಮೈಲು ದೂರವಿದೆ. ಅರ್ಕಾವತಿ ನದಿಗೆ ಇಲ್ಲಿ ಆಣೆಕಟ್ಟನ್ನು ಹಾಕಿ ಚಾಮರಾಜ ಸಾಗರವೆಂಬ ಜಲಾಶಯವನ್ನು ನಿರ್ಮಿಸಿರುವರು. ಈ ಜಲಾಶಯದಿಂದ ಬೆಂಗಳೂರಿಗೆ ನೀರಿನ ಪೂರೈಕೆಯಾಗುವದು.



ಚಾಮುಂಡಿ ಬೆಟ್ಟದಲ್ಲಿರುವ ನಂದಿ ವಿಗ್ರಹ

**ನಂದೀಬೆಟ್ಟ** :— ಬೆಂಗಳೂರಿನಿಂದ 37 ಮೈಲಿನ ಮೇಲಿದೆ. ಇದೊಂದು 5 ಸಾವಿರ ಅಡಿ ಎತ್ತರವಾದ ಗಿರಿನಿವಾಸ, ಆರೋಗ್ಯಧಾಮ. ಗಾಂಧೀಜಿಯವರು ಆರೋಗ್ಯ ವಿಶ್ರಾಂತಿಗಳಿಗಾಗಿ ಕೆಲಕಾಲ ಇಲ್ಲಿ ವಾಸವಾಗಿದ್ದರು.

**ಕೋಲಾರದ ಚಿನ್ನದ ಖಣಿಗಳು** :— 'ಚಿನ್ನದ ನಾಡಿನ ಮೈಸೂರು' ಎಂದು ಕವಿಯು ಹೇಳಿರುವದು ಕೇವಲ ಹೊಗಳಿಕೆಯ ಮಾತಲ್ಲ. ನಿಜವಾದ ಸಂಗತಿಯಾಗಿದೆ. ಬೆಂಗಳೂರಿಗೆ 60 ಮೈಲು ದೂರದಲ್ಲಿ ಈ ಖಣಿಗಳಿವೆ;

ಉಚ್ಚರಿಸಿ, ಮುಂದಿನ ನುಡಿಯನ್ನು ಅಂದು " ನಾರಾಯಣಾ " ಅನ್ನುವ ವರೆಗೆ ಮೊದಲು ಹೊರಟಿದ್ದ ನಾದವು, ಹಾಗೆಯೇ ಕಿವಿಯಲ್ಲಿ ನಾದವನ್ನು ಕೊಡುತ್ತಿರುತ್ತದೆ. ಕವಿ ಲಕ್ಷ್ಮೀಶನಂತೆ ಪ್ರಸನ್ನ ವೆಂಕಟದಾಸರು ಕೂಡ ತಮ್ಮ ಕಾವ್ಯದಲ್ಲಿ ನಾದವನ್ನು ತುಂಬಿದ್ದಾರೆ ಎಂದು ಅನ್ನಲು ಅಡ್ಡಿಯಿಲ್ಲ.

೪. **ಭ್ರಮರಗೀತೆ**[೧] :— ಭಾಗವತ ದಶಮಸ್ಕಂದ ಪೂರ್ವಾರ್ಧದಲ್ಲಿ ಭ್ರಮರಗೀತೆಯ ವಿಷಯ ಕಂಡುಬರುವದು. ಅಧ್ಯಾಯ ೪೭ ಶ್ಲೋಕ ೧ರಿಂದ ೯ರ ವರೆಗೆ ಇದ್ದ ಸಂಗತಿಯೆಂದರೆ, ಉದ್ಧವನು ಯಮುನೆಯಲ್ಲಿ ಸ್ನಾನವನ್ನು ತೀರಿಸಿಕೊಂಡು ಗೋಕುಲಕ್ಕೆ ಬರುತ್ತಾನೆ. ಆತನನ್ನು ದೂರದಿಂದಲೇ ನೋಡಿದ ಗೋಪಿಯರಿಗೆ ಅವನು ಅಕ್ರೂರನೆಂದು ಭಾಸವಾಗುತ್ತದೆ. ಆತನು ಸಮೀಪಿಸಿದ ನಂತರ ಅಕ್ರೂರನಲ್ಲವೆಂದು ತಿಳಿಯುತ್ತಾರೆ. ಇಲ್ಲಿ ಉದ್ಧವನ ವರ್ಣನೆಯಿದೆ. ಗೋಪಿಯರು ಉದ್ಧವನಿಗೆ ಪ್ರಶ್ನೆ ಮಾಡಿದ್ದೇನೆಂದರೆ, ಮನುಷ್ಯ ಪ್ರೇಮವನ್ನು ಏಕೆ ಮಾಡುತ್ತಾನೆ ? ಪ್ರೇಮವು ಎಂಥದು ? ಮನುಷ್ಯನಲ್ಲಿ ಸ್ಥಿರವಾದ ಮತ್ತು ಶಾಶ್ವತವಾದ ಪ್ರೇಮವು ಕಂಡುಬರುವದಿಲ್ಲವೇಕೆ ?

ಭಾಗವತದಲ್ಲಿಯ ೧೦ನೆಯ ಶ್ಲೋಕದಿಂದ ಭ್ರಮರಗೀತೆಯು ಆರಂಭವಾಗುತ್ತದೆ. ಮತ್ತು ೨೧ನೇ ಶ್ಲೋಕಕ್ಕೆ ಭ್ರಮರಗೀತೆಯು ಮುಗಿಯುತ್ತದೆ. ಗೋಪಿಯರು ಉದ್ಧವನ ಕೂಡ ಮಾತನಾಡುತ್ತ ಕುಳಿತಾಗ್ಗೆ ಭ್ರಮರವೊಂದು ಗುಂಜಾರವ ಮಾಡುತ್ತ ಅಲ್ಲಿಗೆ ಬರುವದು. ಅದನ್ನು ಕಂಡು ಗೋಪಿಯರು ಅದು ತಮ್ಮ ಪ್ರಿಯಕರನಿಂದ ಅಟ್ಟಲ್ಪಟ್ಟ ದೂತನೆಂದು ಭಾವಿಸಿ, ಅದರೊಡನೆ ಮಾತನಾಡುತ್ತಾರೆ. ಇದು ಭಾಗವತದಲ್ಲಿಯ ೧೧ನೇ ಶ್ಲೋಕದ ಅರ್ಥವಾಯಿತು, ೧೦ನೇ ಶ್ಲೋಕದಲ್ಲಿ ಇದ್ದ ಅರ್ಧ ಶ್ಲೋಕದ ಅರ್ಥವು ಪ್ರಸನ್ನ ವೆಂಕಟರ ೯ನೆಯ ಶ್ಲೋಕದಲ್ಲಿ ಬಂದಿದೆ.

ಭಾಗವತದ ೧೨ನೆಯ ಶ್ಲೋಕದಲ್ಲಿಯ ಅರ್ಥವು ಪೂರ್ಣವಾಗಿ ಪ್ರಸನ್ನ ವೆಂಕಟರ ೧ನೆಯ ಶ್ಲೋಕದಲ್ಲಿ ಬಂದಿದೆ. ಮೂಲ ಭಾಗವತದಲ್ಲಿಯ ೧೨, ೧೩, ೧೪, ೧೫ನೆಯ ಶ್ಲೋಕಗಳು ಪ್ರಸನ್ನ ವೆಂಕಟರ ಭ್ರಮರಗೀತೆಯಲ್ಲಿ ವರ್ಣಿತವಾಗಿಲ್ಲ. ೧೬ನೆಯ ಶ್ಲೋಕದ ಉತ್ತರಾರ್ಧದಲ್ಲಿದ್ದ ಅರ್ಥವು ಪ್ರಸನ್ನ

೧. ಪ್ರಬಂಧಪದ ಸಂಖ್ಯೆ ೮೯೧.

ಮಾರ್ಗದಲ್ಲಿ ಬಹುದೊಡ್ಡ ಗಾತ್ರದ ನಂದಿಯ ಮೂರ್ತಿ ಇದೆ. ಬೆಟ್ಟದ ಮೇಲೆ ಮೈಸೂರು ರಾಜ್ಯ ಮನೆತನದ ಕುಲದೇವತೆಯಾದ ಚಾಮುಂಡಿ ದೇವಾಲಯವಿದೆ. ಅಲ್ಲಿ ನೀವು ಮಹಿಷಾಸುರ ಭವ್ಯ ಮೂರ್ತಿಯನ್ನು ಕಾಣಬಹುದು.

ನಿಮ್ಮ ಮನಸ್ಸು ಹಾತೊರೆಯುತ್ತಿರುವದು ಕೃಷ್ಣರಾಜಸಾಗರಕ್ಕಾಗಿ, ವೃಂದಾವನವನ್ನು ನೋಡುವದಕ್ಕಾಗಿ 2 ಮೈಲು ಉದ್ದ, 124 ಅಡಿ ಎತ್ತರವಾದ ಆಣೆಕಟ್ಟಿನಿಂದ ಕಾವೇರಿ ನದಿಯನ್ನು ಇಲ್ಲಿ ಬಂಧಿಸಿರುವರು. ಈ ಗೋಡೆಯ ಹಿಂದಿನ ಅಪಾರವಾದ ಜಲರಾಶಿಯೇ ಕೃಷ್ಣರಾಜಸಾಗರ, ಮುಂಬದಿಯಲ್ಲಿರುವದೆ 'ವೃಂದಾವನ' ಪ್ರಕೃತಿ ಮಾತೆಯೊಡನೆ ಮಾನವನ ಇಲ್ಲಿ ಆಟವಾಡಿದಂತಿದೆ. ಕಾವೇರಿಯ ನೀರನ್ನು ಈಜುಗೊಳವನ್ನಾಗಿ ಮಾಡಿದ್ದಾರೆ. ದಿಕ್ಕು ದಿಕ್ಕುಗಳಲ್ಲಿ ನೆಗೆಯುವ, ಚಿಮ್ಮುವ, ಕೂಡಿಕೊಳ್ಳುವ ಕಾರಂಜಿಗಳ ನಡುವೆ ನೀವು ಸಂಚರಿಸಬೇಕು. ರಾತ್ರಿಯಲ್ಲಿ ಬಣ್ಣಬಣ್ಣದ ವಿದ್ಯುದ್ದೀಪಗಳು ಈ ಸುಂದರವಾದ ಉದ್ಯಾನವನ್ನು ಮತ್ತಿಷ್ಟು ಮನೋಹರವಾಗಿ ಮಾಡುವವು.



ಶಿವನ ಸಮುದ್ರ ಜಲಪಾತ

**ನಂಜನಗೂಡು:–** ಮೈಸೂರಿನಿಂದ 13 ಮೈಲಿನ ಅಂತರದಲ್ಲಿದೆ. ನಂಜುಂಡೇಶ್ವರನ ದೇವಾಲಯವಿದೆ. ಇದು ಒಂದು ಕ್ಷೇತ್ರಸ್ಥಳವಾಗಿದೆ.

ಮೈಸೂರಿನಿಂದ 34 ಮೈಲುಗಳ ಅಂತರದಲ್ಲಿನ **ಮೇಲುಕೋಟೆ**ಯನ್ನು ನೀವು ನೋಡಬೇಕು. ಇದು ಶ್ರೀವೈಷ್ಣವರಿಗೆ ಯಾತ್ರೆಯ ಸ್ಥಳವಾಗಿದೆ. ಅಲ್ಲಿಯ 'ವೈರಮುಡಿ' ಎಂಬ ಉತ್ಸವವು ವೈಭವದಿಂದ ಜರಗುವದು.

ಹೆಗ್ಗಡ ದೇವನ ಕೋಟೆಯ ಕಾಡುಗಳನ್ನು ನೀವು ನೋಡ



ಖೆಡ್ಡಾದಲ್ಲಿಯ ಆನೆಗಳು

ಬಹುದು. ಹುಲಿ, ಕಾಡಾನೆಗಳಿಗೆ ಇದು ನಿವಾಸವಾಗಿದೆ. ಇಲ್ಲಿ ಹುಲಿಯ ಬೇಟೆಯ ನ್ನಾಡುವರು 'ಖೆಡ್ಡಾ'ದ ರೀತಿಯಲ್ಲಿ ಆನೆಗಗಳನ್ನು ಹಿಡಿಯುವರು.

ನಮ್ಮ ನಾಡಿನ ಘನತೆಯನ್ನು ಎತ್ತಿ ತೋರಿಸುವ ಈ ಸ್ಥಳಗಳನ್ನು ನೋಡುತ್ತ ಮುಂದೆ ಸಾಗಿರಿ. ನಿಮಗಾಗಿ ಮೂರು ಮಹೋನ್ನತ ಸ್ಥಾನಗಳು ಕಾದಿವೆ. ಶ್ರವಣ ಬೆಳಗೊಳದ ಗೋಮಟೇಶ್ವರನು ಮುಗುಳು ನಗೆಯಿಂದ ನಿಮ್ಮನ್ನು ಬರಮಾಡಿಕೊಳ್ಳುತ್ತಾನೆ. ಏಕ ಶಿಲೆಯಲ್ಲಿ ನಿರ್ಮಿತವಾದ ಅದ್ಭುತ ಮೂರ್ತಿಯಿದು. 58 ಅಡಿಯಷ್ಟು ಎತ್ತರವಾಗಿದೆ. ಗಂಗರಾಜ್ಯದ ದಂಡನಾಯಕನಾದ ಚಾಮುಂಡರಾಯನು 1 ಸಾವಿರ ವರುಷಗಳ ಹಿಂದೆ ಬಾಹುಬಲಿಯ ಈ ಮೂರ್ತಿಯನ್ನು ಇಲ್ಲಿ ನಿಲ್ಲಿಸಿದನು.



ಗೋಮಟೇಶ್ವರ

ಶಿಲ್ಪಕಲೆಯ ಭವ್ಯ ಸ್ವರೂಪವನ್ನು ಶ್ರವಣ ಬೆಳಗುಳದಲ್ಲಿ ನೋಡಿದಿರಿ. ಈಚೆಗೆ ಬನ್ನಿರಿ. ಕಲ್ಲನ್ನು ಮೇಣಕ್ಕಿಂತಲೂ ಮಿದುವಾಗಿ ಮಾಡಿ ಕಟೆದ ಚಿಕ್ಕ

ನೆಯ ಕಲಾಕುಶಲತೆಯನ್ನು ಬೇಲೂರು, ಹಳೆಬೀಡುಗಳಲ್ಲಿ ನೀವು ನೋಡು ವಿರಿ. ಪ್ರಾಚೀನ ಕರ್ನಾಟಕದ ಮಹಾ ಶಿಲ್ಪಿಗಳಾದ ಜಕ್ಕಣಾಚಾರ್ಯ, ಡಂಕಣಾಚಾರ್ಯರೆಂಬಗರು ಇಲ್ಲಿಯ ದೇವಾಲಯುವಳನ್ನು ರಚಿಸಿದವರು.


ಬೇಲೂರಿನ ಶಿಲಾಬಾಲಿಕೆ

ಬೇಲೂರು:— ಹಾಸನದಿಂದ 23 ಮೈಲು ದೂರದಲ್ಲಿದೆ. ಇಲ್ಲಿಯ ಚೆನ್ನಕೇಶವ ದೇವಾಲಯವು ಹೊಯ್ಸಳರ ಶಿಲ್ಪಕಲೆಗೆ ಕಾಂಶವಿಟ್ಟಂತಿದೆ. ವಿಷ್ಣುವರ್ಧನನು ಇದನ್ನು 12ನೇ ಶತಮಾನದಲ್ಲಿ ಕಟ್ಟಿಸಿದನು. ಹೊರಗೋಡೆಯ ಮೇಲೆ ಕಟೆದ ಶಿಲಾಬಾಲಿಕೆಯರ ವಿಗ್ರಹಗಳು ಅತ್ಯಂತ ಮೋಹಕವಾಗಿವೆ.

ಹಳೆಬೀಡು:- ಬೇಲೂರಿನಿಂದ 11 ಮೈಲು ದೂರದಲ್ಲಿದೆ. ದೋರ ಸಮುದ್ರವೆಂದು, ಇದು ಹಿಂದೆ ಹೊಯ್ಸಳರ ರಾಜಧಾನಿಯಾಗಿತ್ತು. ಹೊಯಿಸಳೇಶ್ವರನ ದೇವಾಲಯವು ಇನ್ನೂ ಅಪೂರ್ಣವಾಗಿದೆ. ಇದು ಪೂರ್ತಿಗೊಂಡಿದ್ದರೆ ಶಿಲ್ಪಕಲೆಯಲ್ಲಿ ಇದನ್ನು ಸರಿಗಟ್ಟುವ ಸ್ಥಳವು ಜಗತ್ತಿನಲ್ಲಿ ಬೇರೆ ಯಾವುದಿಲ್ಲವೆಂದು ಕಲಾವಿದರು ಹೇಳಿರುವರು. ಭಾರತದ ಭಕ್ತಿ ಶ್ರದ್ಧೆಗಳು ಇಲ್ಲಿಯ ದೇವಾಲಯಗಳಲ್ಲಿ ಕಲಾಕೃತಿಗಳಾಗಿ ನಿಂತಿವೆ.

ದೇವನಹಳ್ಳಿಯನ್ನು ನೋಡಿಕೊಂಡು ಬನ್ನಿರಿ. ಅಲ್ಲೇನಿದೆ? ಚಿಕ್ಕ ಹಳ್ಳಿಯೆಂದು ಬಿಡಬೇಡಿರಿ. ಇದು ಹೈದರ ಅಲ್ಲಿಯ ಭಾಗ್ಯ ತೆರೆದ ಊರು. ಈ ಕಥೆ ಹೀಗಿದೆ. ಹೈದರನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ದನಕಾಯುವ ಆಳು. ಆತನು ಬಿಸಿಲಿನಲ್ಲಿ ಮಲಗಿದಾಗ್ಗ ಹಾವು ಹೆಡೆ ತೆಗೆದು ನೆರಳು ಮಾಡುತ್ತಿತ್ತಂತೆ. ಹೈದರನು ದೇವಾಂಶನೆಂದು ತಿಳಿದು ಬ್ರಾಹ್ಮಣನು ಆತನನ್ನು ಮುಂದಕ್ಕೆ ತಂದನೆಂದು ದಂತ ಕಥೆ.

ನಿಜಗಲ್ಲು ಇದೊಂದು ಚಿಕ್ಕ ಹಳ್ಳಿಯಾದರೂ ಬೆಟ್ಟದ ಮೇಲಿರುವ

ಒಂದು ಕೋಟೆಯಾಗಿದೆ. ' ನಿಜಗಲ್ಲಿನ ರಾಣಿ ' ಯೆಂಬ ಮಾಸ್ತಿಯವರ ಕಥೆ ಯನ್ನು ನೀವು ಓದಬೇಕು. ಇಲ್ಲಿಯೆ ಘಟನೆ ನಡೆದುದು.

**ತಲಕಾಡು:—** ಕಾವೇರಿ ನದಿಯ ತೀರದಲ್ಲಿದೆ ಮೈಸೂರಿನಿಂದ 30 ಮೈಲು ದೂರದಲ್ಲಿದೆ. ಗಂಗ ಅರಸರ ಕಾಲದ ಹಳೆಯ ದೇವಾಲಯ ಗಳು ಉಸುಕಿನಲ್ಲಿ ಹುಗಿದು ಹೋಗಿವೆ. ಹನ್ನೆರಡು ವರುಷಗಳಿಗೊಮ್ಮೆ ಇಲ್ಲಿ ' ಪಂಚಲಿಂಗದರುಶನ ' ವೆಂಬ ಉತ್ಸವವು ಜರುಗುವದು.

ವಿದುರಾಶ್ವತ್ಥವು ಸಮೀಪದಲ್ಲಿಯೆ ಇದೆ. ವಿದುರನು ಇದನ್ನು ಸ್ಥಾಪಿ ಸಿದನು. ರೋಗಿಗಳು ರೋಗನಿವಾರಣೆಗಾಗಿ, ಮಕ್ಕಳಿಲ್ಲದೆ ಕೊರಗುವವರು ಸಂತಾನ ಪಡೆಯುವದಕ್ಕಾಗಿ ಇಲ್ಲಿ ಸೇವೆ ಸಲ್ಲಿಸುವರು.

ಮಲೆನಾಡೆಂದು ಅನುಮಾನಿಸಬೇಡಿರಿ. ಶೃಂಗೇರಿಯನ್ನು ನೀವು ನೋಡ ಲೇಬೇಕು. ' ಋಷ್ಯಶೃಂಗಗಿರಿ' ಯೆ ಇಂದಿನ ಶೃಂಗೇರಿಯಾಗಿದೆ. ಇದು



ಶೃಂಗೇರಿಯ ದೃಶ್ಯ

ಋಷ್ಯಶೃಂಗನ ನಾಡು. ವಿಭಾಂಡಕ ಋಷಿಗಳ ಆಶ್ರಮ. ಇಲ್ಲಿ ಆದ್ಯ ಶಂಕರಾ ಚಾರ್ಯರು ಸ್ಥಾಪಿಸಿದ ಮಠವಿದೆ. ಶಾರದಾಂಬಾ ದೇವಾಲಯವಿದೆ.

ಶಿವಮೊಗ್ಗೆಯಿಂದ ಜೋಗದ ಜಲಪಾತವನ್ನು ನೋಡಿ ಬನ್ನಿರಿ. ಶರಾವತಿಯು ಇಲ್ಲಿ 800 ಅಡಿ ಕೊಳ್ಳದಲ್ಲಿ ಕೆಳಗೆ ಧುಮುಕುವಳು. ಸುತ್ತ ಲಿನ ಸೃಷ್ಟಿಸೌಂದರ್ಯವು ಮನಸ್ಸನ್ನು ಸಂತೋಷಗೊಳಿಸುತ್ತದೆ. ಇದೇ ಪಂಪಮಹಾಕವಿಯ ಹೃದಯವನ್ನು ಸೂರೆಗೊಂಡ ಬನವಾಸೆಯ ನಾಡು. ಈ ನಾಡನ್ನು ' ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ' ಎಂದು ಆತನು

ಹೇಳಿರುವನು. ಇಷ್ಟೇ ಏಕೆ ? ಮಾನವನಾಗಿ ಈ ನಾಡಿನಲ್ಲಿ ಹುಟ್ಟದಿದ್ದರೆ, ಕೋಗಿಲೆಯಾಗಿ, ಮರಿದುಂಬಿಯಾಗಿಯಾದರೂ ಇಲ್ಲಿ ಹುಟ್ಟಿಬರಬೇಕೆಂದು ಆತನ ಅಪೇಕ್ಷೆ. ಇಲ್ಲಿಯ ಸೃಷ್ಟಿಸೌಂದರ್ಯವನ್ನು ನೋಡಿದರೆ ಯಾರಿಗಾದರೂ ಹಾಗೆಯೆ ಅನಿಸುವಂತಿದೆ. ಜೋಗದ ಜಲಪಾತವು ಸೃಷ್ಟಿದೇವತೆಯ ಮಹಾ ಕೃತಿ. ಅದರ ನೆರೆಯಲ್ಲಿ ರಚಿತವಾಗಿರುವ ಮಹಾತ್ಮಾಗಾಂಧಿ ಜಲವಿದ್ಯುದಾಗರವು ವಿಶ್ವೇಶ್ವರಯ್ಯನವರ ಪ್ರತಿಭೆಯ ಮಹತ್-ಕೃತಿ. ರಾಜ್ಯದ ಅನೇಕ ಭಾಗಗಳಿಗೆ ಇಲ್ಲಿಂದಲೆ ವಿದ್ಯುತ್ತಿನ ಪೂರೈಕೆಯಾಗುತ್ತಿದೆ.

ಭದ್ರಾವತಿಯು ಸಮೀಪದಲ್ಲಿಯೆ ಇರುವದು. ಅದು ನಮ್ಮ ರಾಜ್ಯದ ಮುಖ್ಯವಾದ ಔದ್ಯೋಗಿಕ ಕೇಂದ್ರ. ಕಬ್ಬಿಣ, ಸಿಮೆಂಟು ಹಾಗೂ ಕಾಗದ



ಭದ್ರಾವತಿಯ ಕಬ್ಬಿಣ ಕಾರಖಾನೆ

ತಯಾರಿಕೆಯ ಕಾರಖಾನೆಗಳಿವೆ. ಇಲ್ಲಿ ನದಿಯು ವಂಕಿಯಂತೆ ಡೊಂಕಾಗಿ ಹರಿದಿರುವದರಿಂದ ಭದ್ರಾವತಿಯ ಪೂರ್ವದ ಹೆಸರು 'ವಂಕೀಪುರ ಬೆಂಕೆಪುರ' ಎಂಬುದಾಗಿತ್ತು.

ಚಿತ್ರದುರ್ಗ ಇದಾದರೂ ಇತಿಹಾಸದಲ್ಲಿ ಹೆಸರಾದ ಕೋಟೆ, 'ಒನಕೆಯ ಓಬವ್ವ' ನಕಥೆಯನ್ನು ನೀವು ಕೇಳಿರುವಿರಿ. ಅವಳ ವೀರ ಸಾಹಸವು ಇದೇ ದುರ್ಗದಲ್ಲಿಯೆ ನಡೆಯಿತು.

ವಾಣೀವಿಲಾಸವೆಂಬುದು ಚಿತ್ರದುರ್ಗದಿಂದ 32 ಮೈಲಿನ ಅಂತರದಲ್ಲಿದೆ. ವೇದವತಿ ನದಿಗೆ ಆಣೆಕಟ್ಟನ್ನು ಹಾಕಿ ಈ ಜಲಾಶಯವನ್ನು ರಚಿಸಿರುವರು : ಸುತ್ತಲಿನ ದೃಶ್ಯವು ರಮಣೀಯವಾಗಿದೆ.

ಇನ್ನು ಮುಂದಕ್ಕೆ ಸಾಗೋಣ. ಆಗುಂಬೆ ಘಟ್ಟದ ಮಾರ್ಗವಾಗಿ

ಕರಾವಳಿಯ ಪ್ರದೇಶವನ್ನು ಪ್ರವೇಶಿಸೋಣ. ಬೆಟ್ಟಗಳನ್ನೇರಿ ಇಳಿಯಲು ಘಟ್ಟಗಳು ಸೋಪಾನಗಳಿದ್ದಂತೆ ಎಂಬುದನ್ನು ನೀವು ಇಲ್ಲಿ ನೋಡುವಿರಿ. ನಮ್ಮ ರಾಜ್ಯದಲ್ಲಿರುವ ಅನೇಕ ಘಟ್ಟಗಳಲ್ಲಿ ಆಗುಂಬೆ ಘಟ್ಟವು ಹೆಸರಾದುದು. ಇದಕ್ಕೆ ಮೈಸೂರು ರಾಜ್ಯದ ಚೀರಾಪುಂಜಿಯೆಂದು ಹೇಳುವರು. ಈ ರಾಜ್ಯದಲ್ಲಿಯೆ ಅತಿ ಹೆಚ್ಚು ಮಳೆಯಾಗುವ ಸ್ಥಳವಿದು. ಈ ಘಟ್ಟದ ಮೇಲಿಂದ ಸೂರ್ಯಾಸ್ತವನ್ನು ನೋಡಬೇಕು. ನಿಸರ್ಗದ ಅತ್ಯಂತ ರಮಣೀಯವಾದ ದೃಶ್ಯವು ಇಲ್ಲಿ ನಿಮಗೆ ಕಾಣುವದು. ಮಾರ್ಗದಲ್ಲಿ ನಿಮಗೆ ಶಿರಸಿಯು ಹತ್ತುವದು. ಇಲ್ಲಿಯ ಮಾರಿಕಾಂಬಾ ದೇವಾಲಯವು ಹೆಸರಾದುದು ಇದು ಅಡಿಕೆ, ಯಾಲಕ್ಕಿಗಳ ವ್ಯಾಪಾರದ ಕೇಂದ್ರವಾಗಿದೆ

ಈ ರಾಜ್ಯದ ಕರಾವಳಿಯಲ್ಲಿರುವ ಕಾರವಾರ, ಕುಮಟೆ, ಹೊನ್ನಾವರ, ತದಡಿ, ಮಲ್ಪೆ, ಭಟಕಳ, ಮಂಗಳೂರು- ಈ ಬಂದರಗಳ ಪರಿಚಯವನ್ನು ನೀವು ಈಗಾಗಲೇ ಮಾಡಿಕೊಂಡಿರುವಿರಿ. ಮಂಗಳೂರು ನಮ್ಮ ರಾಜ್ಯದ ದೊಡ್ಡ ಬಂದರವಾಗಲಿದೆ. ಮಂಗಳೂರಿನ ಕನ್ನಡ ಮುದ್ರಣಾಲಯಗಳೂ ಹಂಚಿನ ಕಾರಖಾನೆಗಳೂ ನೋಡತಕ್ಕವುಗಳು. ಕಾರವಾರ ಒಳ್ಳೇ ಸುಂದರವಾದ ಸ್ವಾಭಾವಿಕ ಸ್ಥಳವಾಗಿದೆ. ನದಿಗಳ ಮುಖದ ನೆರೆಯಲ್ಲಿರುವ ಈ ಸ್ಥಳಗಳು ಕೇವಲ ಬಂದರಗಳಾಗಿಲ್ಲ. ಮೀನುಗಾರಿಕೆಯ ಕೇಂದ್ರಗಳಾಗಿವೆ. ಸೃಷ್ಟಿಸೌಂದರ್ಯಕ್ಕಾಗಿ ಹೆಸರಾಗಿವೆ



ಗೋಕರ್ಣ ಮಹಾಬಳೇಶ್ವರನ ದೇವಾಲಯ

ಕರಾವಳಿಯ ಪ್ರದೇಶದಲ್ಲಿ ಅನೇಕ ಪುಣ್ಯಸ್ಥಳಗಳಿರುವವು. ಅವುಗಳಲ್ಲಿ ಮುಖ್ಯವಾದವುಗಳನ್ನು ನೋಡಬೇಕು

ಗೋಕರ್ಣವು ಅತಿ ಪ್ರಾಚೀನವಾದ ಕ್ಷೇತ್ರವು. 'ಭೂಕೈಲಾಸ' ವೆಂದು ಹೆಸರಾಗಿದೆ. ಮಹಾಶಿವರಾತ್ರಿಯಲ್ಲಿ ಮಹಾಬಳೇಶ್ವರನ ಉತ್ಸವವಾಗುವದು.

ಉಡುಪಿಯು ಇನ್ನೊಂದು ಪುಣ್ಯಕ್ಷೇತ್ರವಾಗಿದೆ. ಶ್ರೀ ಮಧ್ವಾಚಾರ್ಯರ [illegible] ಕ್ಷೇತ್ರ ನೆರೆಯಲ್ಲಿದೆ. ಅವರು ಸ್ಥಾಪಿಸಿದ ಶ್ರೀ ಕೃಷ್ಣ

ದೇವಾಲಯವಿದೆ. ಅಷ್ಟ ಮಠಗಳಿವೆ. ಮಕರ ಸಂಕ್ರಾಂತಿಯ ಪರ್ಯಾಯದ ಉತ್ಸವಕ್ಕೆಸಾವಿರಾರು ಭಕ್ತರು ಆಗಮಿಸುವರು. ಉಡುಪಿಯಲ್ಲಿ ಸಂಸ್ಕೃತ ಕಾಲೇಜಿದೆ. ಸನಿಹದ ಮಣಿಪಾಲದಲ್ಲಿ ಮೆಡಿಕಲ್ ಕಾಲೇಜಿದೆ. ಇಂಜನಿಯರಿಂಗ್ ಕಾಲೇಜ ಶೀಘ್ರದಲ್ಲಿ ಆಗಲಿದೆ.

ಧರ್ಮಸ್ಥಳ ಹಾಗೂ ಸುಬ್ರಹ್ಮಣ್ಯ ಯಾತ್ರಾ ಸ್ಥಳಗಳಾಗಿವೆ. ಕಾಡುಗಳ ದೃಷ್ಟಿಯ ಸೊಬಗನ್ನು ಇಲ್ಲಿ ಕಾಣಬಹುದು. ಧರ್ಮಸ್ಥಳದಲ್ಲಿ ಸರ್ವಧರ್ಮ ಸಮ್ಮೇಳನವು ನಡೆಯುವದು ಸುಬ್ರಹ್ಮಣ್ಯವು ಕುಮಾರ ಧಾರಾ ನದಿಯ ತೀರದ ಮೇಲಿನ ಒಂದು ಹೆಸರಾದ ಯಾತ್ರಾಸ್ಥಳ. ಇಲ್ಲಿಂದ 12 ಮೈಲುಗಳ ಮೇಲೆ ಕುಮಾರಾದ್ರಿ ಎಂಬ ಬೆಟ್ಟವಿರುವದು.

ಮೂಡಬಿದರೆ ಜೈನ ಮತೀಯರಿಗೆ ಪವಿತ್ರ ಸ್ಥಳವಾಗಿದೆ. ಇದಕ್ಕೆ 'ಜೈನರ ಕಾಶಿ' ಎಂದು ಕರೆಯುವರು.

ಕಾರ್ಕಳವೂ ಜೈನರಿಗೆ ಯಾತ್ರೆಯ ಸ್ಥಳವಾಗಿದೆ. ಇಲ್ಲಿಯೂ 30 ಅಡಿ ಎತ್ತರವಾದ ಏಕಶಿಲೆಯ ಗೋಮಟೇಶ್ವರನ ಮೂರ್ತಿಯಿದೆ.

ಹಾಗೆಯೇ ಮುಂದಕ್ಕೆ ಸಾಗಿ, ಇಂದು ಈ ರಾಜ್ಯದ ಒಂದು ಚಿಕ್ಕ ಜಿಲ್ಹೆಯಾಗಿರುವ ಕೊಡಗು ಸೀಮೆಯನ್ನು ಪ್ರವೇಶಿಸೋಣ. ಕೊಡಗು ಸೃಷ್ಟಿ ಸೌಂದರ್ಯಕ್ಕಾಗಿ ಹೆಸರಾದುದು. ದಕ್ಷಿಣ ಭಾರತದ ಕಾಶ್ಮೀರ' ವೆಂದು ಅದನ್ನು ವರ್ಣಿಸುವರು.

ಮಡಿಕೇರಿ ಕೊಡಗಿನ ಹಿಂದಿನ ದೊರೆಗಳ ರಾಜಧಾನಿ ಹಾಗೂ ಇಂದು ಜಿಲ್ಹೆಯ ಮುಖ್ಯ ಸ್ಥಳವಾಗಿದೆ. ಮೈಸೂರಿನಿಂದ 75 ಮೈಲುಗಳ ಅಂತರದಲ್ಲಿದೆ. ಪೂರ್ವದ ರಾಜರ ಅರಮನೆ ಇಂದು ಜಿಲ್ಹೆಯ ಕಚೇರಿ ಯಾಗಿದೆ. ಕೋಟೆಯ ಬಳಿ ಆನೆಯ ಗಾತ್ರದ ಎರಡು ಕಲ್ಲಿನ ಆನೆಗಳಿವೆ. ಹಿಂದಿನ ರಾಜರುಗಳ ಸಮಾಧಿಯಾದ 'ಗದ್ದುಗೆ'ಯಿದೆ. ಓಂಕಾರೇಶ್ವರನ ದೇವಾಲಯವಿದೆ. ಇವು ನೋಡತಕ್ಕವುಗಳು. ಇವುಗಳಿಗಿಂತಲೂ ಹೆಚ್ಚಾಗಿ ಇಲ್ಲಿಯ ನಿರಂತರವಾದ ಸೃಷ್ಟಿಯ ಹಸಿರು, ಬಣ್ಣಬಣ್ಣದ ಹೂಹಣ್ಣುಗಳು. ಚಿತ್ರವಿಚಿತ್ರವಾದ ಪಶುಪಕ್ಷಿಗಳು ಹೆಚ್ಚು ಪ್ರೇಕ್ಷಣೀಯವಾದವುಗಳು ಇಲ್ಲಿ ಬೀಳುವ ಮಂಜು ಕೂಡ ಮೋಹಕವಾಗಿರುವದು.

ತಲಕಾವೇರಿಯು ಕಾವೇರಿ ನದಿಯ ಉಗಮಸ್ಥಾನವು. ಮಡಿಕೇರಿಯಿಂದ 25 ಮೈಲು ದೂರದಲ್ಲಿದೆ. ಕೊಡಗು ಕಾವೇರಿ ನದಿಯ ಮಗಳೆ-

ನ್ನವರು. ಕಾವೇರಿಯು ಕೊಡಗಿನ ಅಧಿದೇವತೆ. ತುಲಾ ಸಂಕ್ರಾಂತಿಯ ದಿವಸ ತಲಕಾವೇರಿಯಲ್ಲಿ ಉತ್ಸವವಾಗುವದು

ಮಡಿಕೇರಿ–ಮೈಸೂರು-ಬೆಂಗಳೂರು ಮಾರ್ಗವಾಗಿ ಹುಬ್ಬಳ್ಳಿಗೆ ಬನ್ನಿರಿ. ಬೆಳವಲವೆನ್ನಿರಿ ಮೈದಾನವೆನ್ನಿರಿ ಯಾವ ಹೆಸರಿನಿಂದಾದರೂ ರಾಜ್ಯದ ಈ ಭಾಗವಲ್ಲಿ ಸಂಚರಿಸಿ ಬರೋಣ.

ಬೆಳಗಾಂವಿಯು ಮಲೆನಾಡಿನ ಸೆರಗಿನಲ್ಲಿದೆ. ಬೇಸಿಗೆಯಲ್ಲಿ ಬಿಸಿಲು ಸೌಮ್ಯವಾಗಿರುವದು. ವಿಮಾನ ನಿಲ್ದಾಣವಾಗಿದೆ. ಹಿಂದಿನ ಕೋಟೆಯಿದೆ. ಅನೇಕ ಶಾಲೆ ಕಾಲೇಜಗಳಿಂದ ವಿದ್ಯಾಕೇಂದ್ರವೂ ಆಗಿದೆ.

ಕಿತ್ತೂರು:– ಇದೇ ಜಿಲ್ಲೆಯಲ್ಲಿದೆ. ಕಿತ್ತೂರ ಚೆನ್ನಮ್ಮರಾಣಿ, ಬೆಳವಡಿಯ ಮಲ್ಲಮ್ಮ ರಾಣಿ, ಕನ್ನಡ ನಾಡಿನ ವೀರಸ್ತ್ರೀಯರು.

ಗೋಕಾಕದಲ್ಲಿ ಘಟಪ್ರಭೆಯ ತಡಸಲವಿದೆ. ಅದೇ ತಡಸಲಿನ ವಿದ್ಯುತ್‌ಶಕ್ತಿಯಿಂದ ನೂಲಿನ ಗಿರಣಿಯೊಂದು ನಡೆಯುತ್ತಿದೆ. ಘಟಪ್ರಭೆಗೆ ಒಡ್ಡನ್ನು ಹಾಕಿ ಎರಡೂ ದಂಡೆಗಳಲ್ಲಿ ಕಾಲುವೆಗಳನ್ನು ರಚಿಸಿದ್ದಾರೆ. ನೀರಾವರಿಗೆ ಇದರಿಂದ ಸಹಾಯವಾಗುತ್ತಿದೆ

ಧಾರವಾಡಕ್ಕೆ ಬನ್ನಿರಿ· ಇದು ವಿದ್ಯಾಕೇಂದ್ರ. ಕರ್ನಾಟಕ ವಿಶ್ವವಿದ್ಯಾಲಯ, ಒಕ್ಕಲುತನದ ಕಾಲೇಜು ನೋಡತಕ್ಕಂಥವುಗಳು. ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಚಟುವಟಿಕೆಗಳಿಗೆ ಎಂದಿನಿಂದಲೂ ಈ ನಗರವು ಮುಂದಾಗಿದೆ. ಕನ್ನಡನಾಡನ್ನು ಒಂದುಗೂಡಿಸಲು ದುಡಿದ ಅನೇಕಹಿರಿಯರು ಇಲ್ಲಿಯವರು.

ಹುಬ್ಬಳ್ಳಿಯು ನಮ್ಮ ನಾಡಿನ ಎರಡನೆಯ ಉದ್ಯಮ ಕೇಂದ್ರವಾಗಿದೆ. ಇಲ್ಲಿ 'ವಿದ್ಯಾನಗರ'ದಲ್ಲಿ ಎಲ್ಲಬಗೆಯ ಕಾಲೇಜುಗಳಿವೆ. ಮೆಡಿಕಲ್ ಕಾಲೇಜಿಗೆ ಭವ್ಯವಾದ ಕಟ್ಟಡವಿದೆ. ಇಂಜಿನಿಯರಿಂಗ್ ಕಾಲೇಜ, ತಾಂತ್ರಿಕ ಶಿಕ್ಷಣದ ಸೌಕರ್ಯಗಳು ಇಲ್ಲಿ ಇರುವವು.

ಲಕ್ಷ್ಮೇಶ್ವರ:— ಲಕ್ಷ್ಮೇಶ್ವರವು ಆದಿಪಂಪನ ಊರಾದ ಪುಲಿಗೆರೆ. ಆತನು ಹೇಳಿರುವ ತಿರುಳ್ಗನ್ನಡದ ಒಂದು ಕೇಂದ್ರ. ಇಲ್ಲಿಯ ಜೈನ ಬಸದಿಗಳು ಪ್ರೇಕ್ಷಣೀಯವಾಗಿವೆ.

ಗದಗು:—ಹಿಂದಿನ ಕಾಲದ ಕ್ರತುಪುರ. ಇಲ್ಲಿ ವೀರನಾರಾಯಣ ತ್ರಿಕುಟೇಶ್ವರ ದೇವಾಲಯಗಳಿವೆ. ವೀರ ನಾರಾಯಣನನ್ನೇ ಆರಾಧ್ಯದೇವನನ್ನಾಗಿ ಮಾಡಿಕೊಂಡ ಕವಿ ಕುಮಾರವ್ಯಾಸ-ನಾರಾಯಣಪ್ಪನ ಊರಾದ

ಕೋಳಿವಾಡವು ಸಮೀಪದಲ್ಲಿದೆ.

ಹಂಪೆಗೆ ಗದುಗಿನಿಂದ ಹೋಗಿಬನ್ನಿರಿ, ವಿಜಯನಗರದ ರಾಜರ ಕುಲ ದೇವತೆವಾದ ಪಂಪಾಪತಿಯ ದರುಶನವನ್ನು ಮಾಡಿಕೊಳ್ಳಿರಿ. ನಮ್ಮ ಹೆಮ್ಮೆಯ ಸಾಮ್ರಾಜ್ಯವಾದ ವಿಜಯನಗರದ ಅಳಿದುಳಿದ ಅವಶೇಷಗಳನ್ನು ನೋಡಿ ಕಣ್ಣಿನ ಸಾರ್ಥಕತೆ ಮಾಡಿಕೊಳ್ಳಿರಿ. ನಾವೆಯಲ್ಲಿ ನದಿಯನ್ನು ದಾಟಿ ಜಂಬುಕೇಶ್ವರನ ಹಿಂದಿನ ರಾಜಧಾನಿಯಾದ ಆನೆಗುಂದಿಗೆ ಹೋಗ ಬೇಕು. ಅಲ್ಲಿಯೆ ತುಂಗಾನದಿಯ ನಡುಗಡ್ಡೆಯಲ್ಲಿರುವ ನವವೃಂದಾವನಕ್ಕೆ ಹೋಗಿ ಬರಬೇಕು. ಪುರಂದರದಾಸರ ಕಂಬವನ್ನು ನೋಡಲು ಮರೆಯ ಬೇಡಿರಿ. ಸಮೀಪದಲ್ಲಿ ತುಂಗಭದ್ರಾ ಆಣೆಕಟ್ಟು ಇದೆ. ನಮ್ಮ ನಾಡಿನ ನದೀ ಯೋಜನೆಗಳಲ್ಲಿ ಇದು ಮುಖ್ಯವಾದುದು.

ಇಲ್ಲಿಯವರೆಗೂ ಬಂದಿರುವಿರಿ. ಕೊಪ್ಪಳ ಬಳ್ಳಾರಿಗಳನ್ನು ನೋಡಿ ಕೊಂಡು ಬನ್ನಿರಿ. ಕೊಪ್ಪಳವು ನೃಪತುಂಗನು ಹೇಳಿದ 'ವಿದಿತಮಹಾಕೊಪಣ ನಗರ'. ಇಲ್ಲಿ ಅಶೋಕನ ಶಿಲಾಲಿಪಿಯು ದೊರೆತಿದೆ. ಭದ್ರವಾದ ಕೋಟೆ ಯಿದೆ. ಬಳ್ಳಾರಿಯ ಕೋಟೆಯು ಇತಿಹಾಸಪ್ರಸಿದ್ಧವಾದುದು. ಈ ನಗ ರವು ಉದ್ಯಮ ವ್ಯಾಪಾರಗಳ ಕೇಂದ್ರವೂ ಆಗಿದೆ.

ಮರಳಿ ಗದುಗಿಗೆ ಬನ್ನಿರಿ. ಮುಂದೆ ನೀವು ಬದಾಮಿಗೆ ಇಳಿಯಬೇಕು. ಬದಾಮಿಯು ಪೂರ್ವದ ವಾತಾಪಿನಗರ, ಅರ್ಧಚಂದ್ರಾಕೃತಿಯ ಬೆಟ್ಟದ ಅಡಿಯಲ್ಲಿ ' ಹೊಂಡ 'ವಿದೆ. ಅದಕ್ಕೆ ಅಗಸ್ತ್ಯತೀರ್ಥವೆಂದು ಹೇಳುವರು. ಬೆಟ್ಟದಲ್ಲಿ ಸಾಲಾಗಿ ಕೊರೆದ ನಾಲ್ಕು ಗವಿಗಳಿವೆ. ಇವುಗಳಿಗೆ ಮೇಣಬಸ್ತಿ ಗಳೆನ್ನುವರು. ಕನ್ನಡ ಶಿಲ್ಪಿಗಳ ಕಲಾಕುಶಲತೆಯನ್ನು ಇವುಗಳಲ್ಲಿ ನೀವು ಕಾಣುವಿರಿ. ಸನಿಹದಲ್ಲಿಯೇ ಮಹಾಕೂಟೇಶ್ವರನ ಕ್ಷೇತ್ರವಿದೆ. ಇದಕ್ಕಾದರೂ ' ದಕ್ಷಿಣ ಕಾಶಿ 'ಯೆನ್ನುವರು. ಇಲ್ಲಿ ಕೋಟಿ ಲಿಂಗಗಳಿರುವವೆಂದು ನಂಬಿಕೆ.

ಮತ್ತೊಂದು ಬದಿಗೆ ಬನಶಂಕರಿ ದೇವಾಲಯವಿದೆ. ಬದಾಮಿ ಚಾಲು ಕ್ಯರ ಕುಲದೇವತೆ ಇವಳು. ಸುತ್ತಲಿನ ವನಶ್ರೀಯು ನೋಡುವಂತಹದು.

ಇಲ್ಲಿಂದಲೆ ಶಿವಯೋಗಮಂದಿರಕ್ಕೆ ಹೋಗಬಹುದು. ಮಲಪ್ರಭೆಯ ದಂಡೆಯಲ್ಲಿಯ ಒಂದು ತಪೋಭೂಮಿ ಇದು. ಇಲ್ಲಿಗೆ ಪಟ್ಟದಕಲ್ಲು ಸಮೀಪ ವಾಗಿದೆ. ಇಲ್ಲಿ 7-8ನೇ ಶತಮಾನದ ದೇವಾಲಯಗಳಿವೆ. ಇವುಗಳಲ್ಲಿಯ ಶಿಲ್ಪವೂ ನೋಡುವಂತಹದು. ರಾಮಾಯಣದ ಕಥೆಗಳನ್ನು ಕಲ್ಲಿನ ಕಂಬ

ತಾಪವು ಹೆಚ್ಚಾಯಿತು. ಆಗ ಜೋನಸನು ಜೀವಿಸುವದಕ್ಕಿಂತ ಸಾಯುವದು ಉತ್ತಮವೆಂದು ಅನ್ನಪತ್ತಿವನು ಇದನ್ನು ಸರ್ವೇಶ್ವರನು ಜೋನಾಸನನ್ನು ಕುರಿತು, "ನೀನು ಆ ಬಳ್ಳಿಯು ಒಣಗಿದ್ದಕ್ಕೆ ಇಷ್ಟು ದುಃಖಿಸುತ್ತಿಯಲ್ಲ. ಅದನ್ನು ನೀನು ಸೃಷ್ಟಿಸಲಿಲ್ಲ. ಹಾಗಾದರೆ ಸುಮಾರು ಒಂದುನೂರು ಇಪ್ಪತ್ತೈದು ಸಾವಿರ ಜನರಿರುವ ನಿನಿವೆ ಪಟ್ಟಣವನ್ನು ನಾವು ರಕ್ಷಿಸಬಾರದೋ? ಎಂದರು.

ಹಡಗದಲ್ಲಿದ್ದ ಜನಗಳನ್ನು ರಕ್ಷಿಸಲು ಜೋನಾಸನನ್ನು ಸಮುದ್ರದಲ್ಲಿ ನೂಕಿದ್ದು, ಜೇಸುನಾಥರು ಮನು ಜಾತಿಯನ್ನು ರಕ್ಷಿಸಲು ಬಲಿಯಾಗಿ ಒಪ್ಪಿಸಿದದ್ದಕ್ಕೆ ಹೋಲ್ಕಿಕೆಯಾಗಿದೆ ಜೋನಾಸನು ಮೀನದ ಹೊಟ್ಟೆಯಲ್ಲಿ ಮೂರು ದಿವಸಗಳ ವರೆಗೆ ಇದ್ದನು. ಜೇಸುನಾಥರು ಸಮಾಧಿಯಲ್ಲಿ ಮೂರು ದಿವಸ ಗಳವರೆಗೆ ಇದ್ದರು.

## ೩೬) ತೋಬಿಯಾಸನು ಮತ್ತು ಆತನ ಮಗನು

ಇಸ್ರಾಯೇಲಸ್ತರ ಜನರಲ್ಲಿ ಪಾಪವು ಹೆಚ್ಚಾಗಲು ಆ ರಾಜ್ಯವು ನಾಶನ ಮಾಡಲ್ಪಟ್ಟು ಅಲ್ಲಿಯ ಜನರು ಅಸ್ಸೀರ್ಯ ಪಟ್ಟಣಕ್ಕೆ ಅಡಿಮೆಗಳಾಗಿ ಒಯ್ಯಲ್ಪಟ್ಟರು.

ಈ ಅಡಿಮೆಗಳಲ್ಲಿ ತೊಬಿಯಾಸನೆಂಬ ಒಬ್ಬ ಪುಣ್ಯಾತ್ಮನಿದ್ದನು. ಈತನು ತನ್ನ ಕಾಲವನ್ನೆಲ್ಲ ಸೆರೆಯಲ್ಲಿದ್ದ ಸ್ವದೇಶದವರ ಬಳಿಗೆ ಹೋಗಿ ಅವರಿಗೆ ಉಪಶಾಂತಿಯಾದ ಮಾತನ್ನು ಹೇಳುತ್ತಲೂ, ಗರೀಬರಿಗೆ ದಾನಧರ್ಮ ಮಾಡುತ್ತಲೂ ಕಾಲವನ್ನು ಕಳೆಯುತ್ತಿದ್ದನು.

ಬೇಕು. ಬಾಗಿಲುಕೋಟೆಯ ಸಿಮೆಂಟು ಕಾರಖಾನೆಯು ನೋಡುವಂತಹದು. ವಿಜಾಪೂರಕ್ಕೆ ಬನ್ನಿರಿ. ಇದು ಅಭಿನವ ಪಂಪನ ಊರು. ಆದಿಲಶಾಹಿ ಅರಸರ ರಾಜಧಾನಿ ಇದು ವರೆಗೆ ಹಿಂದೂ ಶಿಲ್ಪಕಲೆಯ ಕಟ್ಟಡಗಳನ್ನು ನೀವು ನೋಡಿದಿರಿ. ವಿಜಾಪೂರದಲ್ಲಿ ನಿಮಗೆ ಕಾಣುವದು ಮುಸ್ಲೀಮ ಶಿಲ್ಪಕಲೆ. ಗುಮ್ಮಟಗಳು, ಬುರುಜುಗಳು, ಮೀನಾರಗಳು. ಗೋಳಗುಮ್ಮಟವು ತನ್ನ ಗುಮ್ಮಟದ ಭವ್ಯತೆಗಾಗಿ ಜಗದ್ವಿಖ್ಯಾತವಾಗಿದೆ. ಜುಮ್ಮಾ ಮಸೀದೆ, ಇಬ್ರಾಹಿಮ ರೋಜಾ, ಮುಲಖ ಮೈದಾನವೆಂಬ ತೋಪು—ಇವೇ ಮುಂತಾದ ಪ್ರೇಕ್ಷಣೀಯ ಸ್ಥಳಗಳಿವೆ.

ವಿಜಾಪೂರಕ್ಕೆ ಮೂರು ಮೈಲಿನ ಮೇಲೆ ತೊರವಿಯೆಂಬ ಗ್ರಾಮವಿರುವದು. ಇದು ಆದಿಲಶಾಹಿ ಅರಸರ ಬೇಸಿಗೆಯ ನಿವಾಸ. ನೃಸಿಂಹಸ್ವಾಮಿಯ ದೇವಾಲಯವಿದೆ. ಕುಮಾರ ವಾಲ್ಮೀಕಿಯ ಉಪಾಸ್ಯ ದೈವತವಿವನು. ಬಸ್ಸಿನಿಂದ ಬಸವನ ಬಾಗೇವಾಡಿಗೆ ಹೋಗಿ ಅಂದೇ ತಿರುಗಿ ಬರುವಂತಿದೆ. ಅದು ಬಸವೇಶ್ವರರ ಜನ್ಮಸ್ಥಳ. ಬಸವಣ್ಣನ ದೇವಾಲಯವು ನೋಡುವಂತಿದೆ.

ಇಲ್ಲಿಂದ ಮುಂದೆ ನೀವು ಹುಟಗಿಯ ಮಾರ್ಗವಾಗಿ ಹೈದರಾಬಾದ ಕನ್ನಡ ಭಾಗಕ್ಕೆ ಹೋಗಬೇಕು. ಹುಟಗಿಯ ಸಮೀಪದಲ್ಲಿಯೆ ಸೊಲ್ಲಾಪೂರವಿದೆ. ಇದು ಪೂರ್ವದ ಸೊನ್ನಲಾಪುರ. ಯೋಗಿ ಸಿದ್ಧರಾಮನ ಸ್ಥಳವು. ಇಂದು ಸೊಲ್ಲಾಪೂರವು ನಮ್ಮ ರಾಜ್ಯದಲ್ಲಿ ಇರುವದಿಲ್ಲ.

ಬೀದರಕ್ಕೆ ನೀವು ಹೋಗಬೇಕು. ಒಂದು ಕಾಲಕ್ಕೆ ಬಾಮನಿ ಸುಲ್ತಾನರ ರಾಜಧಾನಿಯಾಗಿ ಮೆರೆದ ಈ ನಗರ ಇಂದು ಹಾಳಾಗಿದೆ. ಕೋಟೆಯ ಆವಾರದಲ್ಲಿ ಪ್ರೇಕ್ಷಣೀಯ ಸ್ಥಳಗಳಾಗಿವೆ.

ಕಲ್ಬುರ್ಗಿಗೆ ಬನ್ನಿರಿ. ಇಲ್ಲಿಯ ಶರಣ ಬಸವೇಶ್ವರನ ದೇವಾಲಯವು ನೋಡುವಂತಹದು. ಪ್ರತಿವರುಷದ ಜಾತ್ರೆಗೆ ಭಕ್ತರು ಬಹುಸಂಖ್ಯಾಕರಾಗಿ ಬರುವರು. ಬಂದಾನವಾಜ್ ಎಂಬ ಮುಸ್ಲೀಮ ಸಾಧುವಿನ ಉರುಸೂ ಹೆಸರಾದುದು.

**ಬಸವಕಲ್ಯಾಣ** :- ಈ ಸ್ಥಳವು ಹುಮನಾಬಾದಿನಿಂದ 14 ಮೈಲು ದೂರದಲ್ಲಿದೆ. ಒಂದು ಕಾಲದಲ್ಲಿ ಚಾಲುಕ್ಯರ ರಾಜಧಾನಿಯಾಗಿತ್ತು. ಕಲ್ಯಾಣದ ಚಾಲುಕ್ಯರೆಂತಲೆ ಅವರನ್ನು ಕರೆಯುವರು. ಮುಂದೆ ಬಸವೇಶ್ವರರು ಮಂತ್ರಿಯಾಗಿ ಇರುವ ಬಿಜ್ಜಳನ ರಾಜಧಾನಿಯಾಯಿತು. ಬಸವೇಶ್ವರರು ಅದನ್ನು ಶರಣರಿಗೆ ಕೈಲಾಸವನ್ನಾಗಿ ಮಾಡಿದರು.

**ರಾಯಚೂರು:—** ನಿಮ್ಮ ಮುಂದಿನ ಹೆಜ್ಜೆ. ವಿಜಯನಗರದ ಇತಿಹಾಸದಲ್ಲಿ ರಾಯಚೂರಿನ ಹೆಸರು ಆಗಾಗ್ಗೆ ಬಂದಿರುವದು. ರಾಯಚೂರು ಹಾಗೂ ಅದರ ನೆರೆಯಲ್ಲಿರುವ ಮುದ್ಗಲ್ ಕೋಟೆಗಳ ಸ್ವಾಮಿತ್ವಕ್ಕಾಗಿ ವಿಜಯನಗರದ ರಾಜರಿಗೂ ಬಾಹ್ಮನಿ ಸುಲ್ತಾನರಿಗೂ ಆಗಾಗ್ಗೆ ಕದನವಾಗುತ್ತಿತ್ತು. ಇಲ್ಲಿಯ ಕೋಟೆ ಭದ್ರವಾಗಿದೆ. ಕೋಟೆಯಲ್ಲಿ ಹಾಗೂ ಊರಿನ ದೇವಾಲಯಗಳಲ್ಲಿ ಅನೇಕ ಶಿಲಾಲಿಪಿಗಳಿರುವವು.

ರಾಯಚೂರಿಗೆ ಸಮೀಪವಾಗಿ ಹಟ್ಟಿಯೆಂಬಲ್ಲಿ ಬಂಗಾರದ ಕಣಿಗಳಿರುವವು. ನಮ್ಮ ರಾಜ್ಯದ ಬಂಗಾರದ ಉತ್ಪತ್ತಿಯಲ್ಲಿ ಇವು ಎರಡನೆಯ ಕಣಿಗಳು.

ಈ ರಾಜ್ಯದ ಪ್ರೇಕ್ಷಣೀಯವಾದ ಸ್ಥಳಗಳನ್ನು ನೋಡಿರುವಿರಿ. ನಿಮ್ಮಂತೆ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯ ವಿದ್ಯಾರ್ಥಿಗಳೂ ಹೀಗೆ ಸುತ್ತಾಡಿ ಬರುವದುಂಟು. ನೀವು ಒಬ್ಬರನ್ನೊಬ್ಬರು ಕಂಡಿರಬಹುದು, ಗೆಳೆತನ ಮಾಡಿರಬಹುದು. ಅಲ್ಲಲ್ಲಿಯ ಜನಜೀವನದ ಬಗ್ಗೆ ನಿಮ್ಮ ಗೆಳೆಯರು ಬರೆದಿರುವ ಲೇಖನಗಳನ್ನು ಇನ್ನು ಮುಂದೆ ಓದಿ ತಿಳಿದುಕೊಳ್ಳುವಿರಂತೆ.

## ಅಭ್ಯಾಸನಗಳು

1. ಮೈಸೂರ ರಾಜ್ಯವು ದೇಶವಿದೇಶಗಳಿಂದ ಪ್ರೇಕ್ಷಕರನ್ನು ಏಕೆ ಬರಮಾಡಿಕೊಳ್ಳುವದು ?
2. ಶಿಲ್ಪಕಲೆಗೆ ಹೆಸರಾದ 2 ಊರುಗಳ ಬಗ್ಗೆ ಬರೆಯಿರಿ.
3. ಜೈನ ಮತೀಯರಿಗೆ ಪವಿತ್ರವಾದ 2 ಸ್ಥಳಗಳನ್ನು ಹೇಳಿರಿ. ಶ್ರವಣಬೆಳಗುಳದ ಬಗ್ಗೆ ನಿಮಗೆ ಗೊತ್ತಿರುವದನ್ನು ಹೇಳಿರಿ.
4. ಟಿಪ್ಪಣಿ ಬರೆಯಿರಿ:—
   (ಅ) ಭೂಕೈಲಾಸ (ಬ) ಜೈನರ ಕಾಶಿ (ಕ) ಮೈಸೂರು ರಾಜ್ಯದ ಚಿರಾಪುಂಜಿ.
6. 'ಶೃಂಗೇರಿ' ಎಂಬ ಹೆಸರು ಹೇಗೆ ಬಂದಿತು ?
5. ಈ ರಾಜ್ಯದ ವಿದ್ಯಾಕೇಂದ್ರಗಳಾಗಿ ಮುಂದೆ ಬರುತ್ತಿರುವ ಮೂರು ನಗರಗಳ ಬಗ್ಗೆ ವಿವರಿಸಿರಿ.
7. ಹೈದರನ ಭಾಗ್ಯ ತೆರೆದ ಊರು ಯಾವುದು, ಹೇಗೆ ?
8. ಮೇಲುಕೋಟೆಯ ಬಗ್ಗೆ ನಿಮಗೆ ಗೊತ್ತಿರುವ ಕಥೆಯನ್ನು ಹೇಳಿರಿ.

9. ನೀವು ನೋಡಿರುವ ಊರುಗಳಲ್ಲಿ ಕನ್ನಡದ ಪ್ರಾಚೀನ ಕವಿಗಳಿಗೆ ಸಂಬಂಧಿಸಿದ ಊರುಗಳು ಯಾವು ?

10. ವಂಟಿಕೇರಿ, ವಿಜಾಪೂರ, ಕಲ್ಬುರ್ಗಿ, ರಾಯಚೂರು, ಕಿತ್ತೂರು ಈ ಸ್ಥಳಗಳ ಬಗ್ಗೆ ಲಘು ಟಿಪ್ಪಣಿ ಬರೆಯಿರಿ.

## 13. : : : : : : : : ಜನ ಜೀವನ

ನಿಮ್ಮ ಶಾಲೆಯಲ್ಲಿ ಕೈಬರಹದ ಪತ್ರಿಕೆಯನ್ನು ಹೊರಡಿಸುತ್ತಿರಬಹುದು. ಈ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯ ವಿದ್ಯಾರ್ಥಿಗಳೂ ತಮ್ಮ ತಮ್ಮ ಶಾಲೆಗಳಲ್ಲಿ ಈ ಬಗೆಯ ಕೈಬರಹದ ಪತ್ರಿಕೆಗಳನ್ನು ಹೊರಡಿಸುವರು. ರಾಜ್ಯದಲ್ಲಿ ಸಾಮಾನ್ಯವಾಗಿ ನಾಲ್ಕು ಬಗೆಯ ಸ್ವಾಭಾವಿಕ ಪ್ರದೇಶಗಳಿರುವವೆಂಬುದು ನಿಮಗೆ ಗೊತ್ತಿದೆ. ಕರಾವಳಿ, ಮಲೆನಾಡು, ಮಲೆನಾಡ ಸೆರಗು, ಮೈದಾನ ಇಲ್ಲವೆ ಬೆಳವಲ ನಾಡು— ಈ ಭಿನ್ನ ಪ್ರದೇಶಗಳಲ್ಲಿ ಹವೆ, ಮಳೆ, ಬೆಳೆಗಳು ಹೇಗೆ ವಿಭಿನ್ನವಾಗಿವೆಯೆಂಬುದನ್ನು ನೀವು ತಿಳಿದುಕೊಂಡಿರುವಿರಿ. ಇವುಗಳಿಗೆ ನಿಸರ್ಗದ ಸಂಗತಿಗಳೆನ್ನುವರು. ಅಲ್ಲಲ್ಲಿಯ ಜನಜೀವನವು ಈ ನಿಸರ್ಗದ ಸಂಗತಿಗಳಿಗೆ ಹೊಂದಿಕೊಂಡು ಸಾಗುವದು. ರಾಜ್ಯದ ಈ ನಾಲ್ಕು ಬಗೆಯ ಪ್ರದೇಶಗಳಲ್ಲಿಯ ವಿದ್ಯಾರ್ಥಿಗಳು ತಮ್ಮ ಶಾಲೆಯ ಕೈ ಬರಹ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದಿರುವರು. ತಮ್ಮ ಪ್ರದೇಶದ ಜನಜೀವನವನ್ನು ಅದರಲ್ಲಿ ವರ್ಣಿಸಿರುವರು. ತಮ್ಮ ಊಟ ಉಡುಗೆಗಳೇನು ? ಆಟಪಾಟಗಳು ಯಾವು ? ತಮ್ಮ ಹಿರಿಯರ ದುಡಿಮೆ ಯಾವುದು ? ಇವುಗಳನ್ನೆಲ್ಲ ಅವರು ಅನುಭವದಿಂದಲೇ ಬರೆದಿರುವರು. ಅನುಭವದ ಮಾತು ಯಾವಾಗಲೂ ಚೆನ್ನಾಗಿರುವದು. ನಿಮ್ಮ ಗೆಳೆಯರು ಬರೆದಿರುವ ಲೇಖನಗಳನ್ನೆ ಇಲ್ಲಿ ನಿಮಗಾಗಿ ಕೊಟ್ಟಿದೆ.

ಮೊದಲನೆಯದಾಗಿ ಕರಾವಳಿಯ ಒಂದು ಶಾಲೆಯ 'ಕಿರಣ'ವೆಂಬ ಕೈಬರಹದ ಪತ್ರಿಕೆಯಲ್ಲಿ ನಿಮ್ಮ ಗೆಳೆಯನೊಬ್ಬ ಅಲ್ಲಿಯ ಜನಜೀವನವನ್ನು ಅಂದವಾಗಿ ಚಿತ್ರಿಸಿರುವದನ್ನು ಓದಿಕೊಳ್ಳಿರಿ.

ವರುಷ.... ಕಿರಣ ಸಂಚಿಕೆ....

### ನಮ್ಮ ಕರಾವಳಿಯಲ್ಲಿಯ ಜನಜೀವನ

ಬರೆದವರು: ಕುಮಾರ....

ಕರಾವಳಿಯೆಂದರೆ ನಿಮಗೆ ಗೊತ್ತಿರುವದಲ್ಲವೆ ? ಸಮುದ್ರ ತೀರಕ್ಕೆ

**ಅಧ್ಯಾಯ ೧೦—**

ಶ್ಲೋಕ ೧-೨೩ ಯಶೋದೆಯು ಮೊಸರು ಕಡೆಯುತ್ತಾಳೆ. ಅವಳ ದೇಹದ ಮತ್ತು ಆಭರಣಗಳ ವರ್ಣನೆಯು ಕಂಡುಬರುವದು. ಕೃಷ್ಣನು ಸ್ತನ ಪಾನ ಬೇಡಲು, ಯಶೋದೆಯು ಕೊಡುವಳು. ಅದೇ ಕಾಲಕ್ಕೆ ಹಾಲು ಉಕ್ಕುವುದು. ಅದಕ್ಕೆ ನೀರು ಹಾಕಲು ಕೃಷ್ಣನನ್ನು ಕೆಳಗಿಳಿಸಿ ಹೋಗುವಳು ಕೃಷ್ಣನು ಸಿಟ್ಟಿಗೆದ್ದು, ಮೊಸರ ಗಡಿಗೆಯನ್ನು ಒಡೆಯುವನು. ತಾಯಿಯು ಕೋಲು ತೆಗೆದುಕೊಂಡು ಆತನನ್ನು ಹೊಡೆಯಲು ಹೋಗುವಳು. ಮೊದಲು ಕೃಷ್ಣನು ಸಿಗುವದಿಲ್ಲ. ಆಮೇಲೆ ಸಿಗುವನು. ಆಗ ಯಶೋದೆಯು ಆತ ನನ್ನು ಒರಳುಕಲ್ಲಿಗೆ ಹಗ್ಗದಿಂದ ಕಟ್ಟುವಳು. ನಾರದರ ಶಾಪದಿಂದ ನಲಕೂಬರ ಮತ್ತು ಮಣಿಗ್ರೀವರು ಮತ್ತಿಯ ವೃಕ್ಷದ ರೂಪದಿಂದ ಇರುವರು. ಕೃಷ್ಣನು ಅಲ್ಲಿಗೆ ಹೋಗಿ, ಒರಳಿನಿಂದ ವೃಕ್ಷವನ್ನು ನೆಲಕ್ಕುರುಳಿಸುವನು. ನಲಕೂಬರ ಮತ್ತು ಮಣಿಗ್ರೀವರು ಎದ್ದು ಬರುವರು. ಅವರಿಗೆ ಮುಕ್ತಿಯಾಗುವದು. ಈ ಭಾಗವು ಪ್ರಸನ್ನ ವೆಂಕಟರ ಕೃತಿಯಲ್ಲಿ ಪುಟ ೪೧-೪೫, ಪದ ೧೯, ೨೦ ಮತ್ತು ೨೧ರಲ್ಲಿ ವರ್ಣಿತವಾಗಿದೆ. ಮೂಲ ಭಾಗವತದಲ್ಲಿ “ ತನ್ನ ಮನೆಯ ಹಗ್ಗವು ಸಾಲದೆ ಇದ್ದದ್ದರಿಂದ ನೆರೆಮನೆಯ ಹಗ್ಗವನ್ನು ಯಶೋದೆಯು ತರುವಳು ” ಎಂದು ಹೇಳಿದೆ. ಆದರೆ ದಾಸರು ಪುಟ ೪೪, ಪದ ೨೧, ನುಡಿ ೨ರಲ್ಲಿ “ ಯಥೇಷ್ಟ ಕಣ್ಣಿಗಳಿಂದ ” ಎಂದು ಪ್ರಯೋಗ ಮಾಡಿದ್ದಾರೆ.

**ಅಧ್ಯಾಯ ೧೧—**

ಶ್ಲೋಕ ೧ ಕುಬೇರಪುತ್ರರಿಗೆ ನಾರದರು ಶಾಪ ಕೊಡಲು ಕಾರಣ ಗಳೇನು ? ಅವರ ಉದ್ಧಾರ ಹೇಗಾಯಿತು ? ಮತ್ತು ಕುಬೇರಪುತ್ರರು ಕೃಷ್ಣನನ್ನು ಸ್ತುತಿಸಿದ ಸಂಗತಿಯು, ಆಮೇಲೆ ಕೃಷ್ಣನು ಅವರ ಕೂಡ ಆಡಿದ ಮಾತುಗಳು ಇದ್ದು, ಇವನ್ನು ದಾಸರು ಎತ್ತಿಲ್ಲ. ಒಂದು ವಿಷಯದ ಉತ್ಪತ್ತಿ ಕಾರಣ ಮುಂತಾದ ಪೌರಾಣಿಕ ಸಂಗತಿಗಳು ಬೇಡವೆಂದೋ ಏನೋ ಪ್ರಸನ್ನ ವೆಂಕಟದಾಸರು ಇದನ್ನು ವರ್ಣಿಸಿಲ್ಲವೆಂದು ಕಾಣುತ್ತದೆ.

**ಅಧ್ಯಾಯ ೧೨—**

ಶ್ಲೋಕ ೧-೬ ಅರ್ಜುನ ಗಿಡಗಳು ಬಿದ್ದುದನ್ನು ಕಂಡು ಗೋಪಾಲ ಕರು ನೋಡಲು ಬರುವರು. ಅವರಲ್ಲಿ ಕೆಲವರು, “ ಇದು ಕೃಷ್ಣನ ಕೃತಿ ”

ದಯಪಾಲಿಸಿರುವನು. ಪರಶುರಾಮನ ಪ್ರಾರ್ಥನೆಗೆ ಸಮುದ್ರರಾಜನು ಹಿಂದೆ ಸರಿದು ಈ ಸ್ಥಳವನ್ನು ತೆರವು ಮಾಡಿಕೊಟ್ಟನಂತೆ. ಈ ಭಾಗಕ್ಕೆ 'ಪರಶುರಾಮ ಕ್ಷೇತ್ರ'ವೆಂದು ಹೇಳುವರು.

ನಮ್ಮ ಜೀವನಕ್ಕೆ ಸಮುದ್ರರಾಜನ ಸಂಬಂಧವು ಹೆಚ್ಚಾಗಿರುವದು. ಆತನೇ ನಮಗೆ ಆಪ್ತ, ಸ್ನೇಹಿತ, ಪ್ರಭು, ಎಲ್ಲವೂ ಆಗಿರುವನು. ಆತನ ಗೀತ-ಗುಡುಗುಗಳು ನಮ್ಮ ಕಿವಿಯಲ್ಲಿ ಯಾವಾಗಲೂ ನಿನದಿಸುವವು. ಆತನ ಲಹರಿ' ಗಳೊಡನೆ ನಾವೂ ಕ್ರೀಡಿಸುವೆವು. ಆತನ 'ಏರಿಳಿತ'ಗಳನ್ನು ನಮ್ಮ ನಾವೆಗಳ ಬರು–ಹೋಗುವಿಕೆಗಳಿಗಾಗಿ ಉಪಯೋಗಿಸುವೆವು. ಚಿಕ್ಕ ಮಕ್ಕಳೊಡನೆ ಚೆಲ್ಲಾಟವಾಡುವದು ಆತನಿಗೂ ಬೇಕು. ಆತನ ಕೂಡ ಸರಸವಾಡುವದು ನಮಗೂ ಸಂತೋಷ. ನಮಗೆ ಚೆಲುವಿನ ಶಂಖ–ಸಿಂಪುಗಳ ಕಾಣಿಕೆಯನ್ನು ಆತನು ದಿನವೂ ಹೊಸಹೊಸದಾಗಿ ತಂದು ಕೊಡುವನು. ಅವುಗಳನ್ನು ಆರಿಸುವದು ನಮಗೊಂದು ಹೌಸು ಹವ್ಯಾಸ.

ಸಮುದ್ರದ ಸರಿಯಾದ ಕಲ್ಪನೆ ಪ್ರತ್ಯಕ್ಷವಾಗಿ ಸಮುದ್ರವನ್ನು ನೋಡಿದಾಗಲೆ ಬರುವದು. ಅಪಾರವಾದ ಜಲರಾಶಿ. ಉರುಳುವ ಬೆಟ್ಟಗಳಂತೆ ಸಾಲುಸಾಲಾಗಿ ಬರುವ ತೆರೆಗಳು. ದಂಡೆಗೂ ಬಂಡೆಗೂ ಅಪ್ಪಳಿಸುವ ಅವುಗಳ ಆರ್ಭಟಿ ಇದೆಲ್ಲವೂ ಸಮುದ್ರವನ್ನು ಎಂದೂ ನೋಡದ ನಮ್ಮ ಗೆಳೆಯರಿಗೆ ತೀರ ಹೊಸದು. ಸಮುದ್ರದಲ್ಲಿ ಸ್ನಾನ ಮಾಡುವದು ನಮಗೆ ನಿತ್ಯದ ರೂಢಿ. ಏರಿಬರುವ ತೆರೆಗಳಿಗೆ ಹೇಗೆ ಬಾಗಬೇಕು, ಹಿಂದಕ್ಕೆ ಎಳೆಯುಗೊಡದಂತೆ ಹೇಗೆ ಜಿಗಿದು ನಿಲ್ಲಬೇಕು– ಇದೆಲ್ಲವೂ ನಮಗೆ ಗೊತ್ತು. ನಮ್ಮಲ್ಲಿ ಬೆಸ್ತರ (ಮೀನಗಾರರ) ಮಕ್ಕಳನ್ನು ನೋಡಬೇಕು. ಅವರಿಗೆ ಸಮುದ್ರದ ಹೆದರಿಕೆಯೆ ಇಲ್ಲ. ತೆರೆಗಳೊಡನೆ ಏರಿ ಇಳಿಯುವ ಚಿಕ್ಕ ನಾವುಗಳಲ್ಲಿ ಬಯಲು ಸಮುದ್ರದಲ್ಲಿ ಅವರು ಎಹುದೂರದ ವರೆಗೆ ಹೋಗಿ ಬರುವರು.

'ನೀವು ಸಮುದ್ರವನ್ನೇ ಕಂಡಿದವರಲ್ಲ! ನಾವೆ, ಡೋಣಿಗಳಲ್ಲಿ ಎಂದೂ ಸಂಚಾರ ಮಾಡದವರಲ್ಲ!' ಎಂದು ಬೆಳವಲದ ಗೆಳೆಯರಿಗೆ ಒಮ್ಮೆ ನಾನು ಹಾಸ್ಯ ಮಾಡಿದೆ. ಕರಾವಳಿಯ ನಿವಾಸಿಗಳಾದ ನೀವು ವಿಶಾಲವಾದ ಬಯಲನ್ನೇ ಕಂಡವರಲ್ಲ! ಉಗೆಬಂಡೆಯಲ್ಲಿ ಕೂಡಲಾ ಹೆದರುವಿರಿ!'- ಎಂದು ಅವರು ನಮಗೆ ವಿನೋದ ಮಾಡಿದರು. ಅವರು ಹೇಳಿದ ಮಾತು ನಿಜ. ನಮ್ಮಲ್ಲಿ ಎಷ್ಟೋಜನ ಇನ್ನೂ ಉಗೆಬಂಡೆಯನ್ನು ನೋಡದವರಿದ್ದಾರೆ.

ಬೆಳವಲದ ಮಕ್ಕಳು ಸಮುದ್ರವನ್ನು ನೋಡದಿರುವುದೂ ನಿಜ, ನಾವು ವಿಶಾಲವಾದ ಭೂಮಿಯನ್ನು ಕಾಣದಿರುವದೂ ನಿಜ. ನಮಗೆ ಭೂಮಿಯ ಕೊರತೆ ಬಹಳ. ಅದಕ್ಕಾಗಿ ಬೆಟ್ಟದ ಇಳುಕಲನ್ನು ಕಡಿದು ಚಿಕ್ಕ ಚಿಕ್ಕ ತುಂಡು ಗದ್ದೆಗಳನ್ನು ನಾವು ಮಾಡಿಕೊಳ್ಳುವೆವು. ತರಗೆಲೆಗಳನ್ನು ಈ ಗದ್ದೆ ಗಳಲ್ಲಿ ಹರವಿ ಸುಡುವೆವು. ಇದುವೇ ನಮ್ಮ ಗೇಣು ಭೂಮಿಗಳಿಗೆ ಗೊಬ್ಬರ. ಗದ್ದೆಗಳಲ್ಲಿ ನಮ್ಮ ದುಡಿತವೂ ಕಷ್ಟಕರವಾದುದು. ಮಳೆರಾಯನ ರಭಸಕ್ಕೆ ಮೊದಲು ನಾವೇ ಬಲಿಯಾಗುವೆವು. ಜಡೆಗಟ್ಟಿ ಮಳೆ ಹೊಡೆಯ ತೊಡಗಿ ತೆಂದರೆ, ಹೊರಗೆ ಕಾಲಿಡುವದೇ ದುಸ್ತರ. ಇಂಥ ಮಳೆಯಲ್ಲಿಯೇ ಗದ್ದೆ ಗಳಲ್ಲಿ ನಮ್ಮ ಹಿರಿಯರು ಕೆಲಸ ಮಾಡುವರು. ಛತ್ರಿ-ಕೊಡೆ ಇಲ್ಲಿ ತಾಳದು– ಕುಂಬಳಿಯ ಕುಂಚಿಗೆ ಇಲ್ಲವೆ ತಾಳದ ಗರಿಯ ಕೊಡೆಯನ್ನು ನಾವು ಉಪ ಯೋಗಿಸುವೆವು. ಮೇಲೆ 'ಧೋ' ಯೆಂದು ಸುರಿಯುವ ಮಳೆ, ಮೊಣಕಾಲಿನ ವರೆಗೆ ಕೆಳಗೆ ಕೆಸರು; ಎತ್ತುಗಳಿಗೆ ಇಲ್ಲಿಯ ಮಳೆ, ಹವೆ ತಡೆಯದು. ಕೈ ಕೆಲಸವೆ ಹೆಚ್ಚು. ಕೋಣಗಳನ್ನೂ ನಾವು ಉಪಯೋಗಿಸಿಕೊಳ್ಳುವೆವು.

ನಮ್ಮ ಬೆಸಾಯದ ಫಲ ನಮ್ಮ ಜನಕ್ಕೆ ಸಾಕಾಗುವದಿಲ್ಲ. ಬೇರೆ ಸ್ಥಳಗಳಿಗೆ ಕೆಲಸಕ್ಕಾಗಿ ಅವರು ಹೋಗಬೇಕಾಗುವದು. ನೆರೆಯ ಮಲೆನಾಡಿ ನಲ್ಲಿ ಜನರ ಕೊರತೆಯಿರುವದು. ನಾಟಿಗೆಯ ಕೆಲಸಕ್ಕಾಗಿ ನಮ್ಮಲ್ಲಿ ಅನೇಕ ಕರು ಮಲೆನಾಡಿಗೆ ಹೋಗುವದುಂಟು. ಬೇರೆ ಕೆಲವರು ಮುಂಬಯಿ ಮೊದಲಾದ ಉದ್ದಿಮೆಯ ಕೇಂದ್ರಗಳಿಗೆ ಕೆಲಸ ದೊರಕಿಸಲು ಹೋಗುವರು.


ಉಪ್ಪಿನ ಮಾಳಗಳು

ಉಪ್ಪಿನ ಮಾಳಗಳಲ್ಲಿ ಕೆಲವರು ಕೆಲಸ ಮಾಡುವರು. ಮಳೆಗಾಲದಲ್ಲಿ ಸಮುದ್ರವು ಕ್ಷುಬ್ಧವಾಗಿರುವದು. ಮೀನಗಾರಿಕೆ ನಡೆಯುವಂತಿಲ್ಲ. ಆ ಸಮಯದಲ್ಲಿ ಬೆಸ್ತರು ತಮ್ಮ ಬಲೆಗಳನ್ನು ಸರಿಪಡಿಸಿಕೊಳ್ಳುವರು. ದೋಣಿಗಳನ್ನು ದುರಸ್ತಿ ಮಾಡಿಕೊಳ್ಳುವರು. ಹೆಣ್ಣು



ಚಾಪೆ ಹೆಣೆಯುವದು

ಮಕ್ಕಳು ತೆಂಗಿನ ಗರಿಗಳಿಂದ ಚಾಪಿ ಬುಟ್ಟಿಗಳನ್ನು ಹೆಣೆಯುವರು. ಕಾತಿಯಿಂದ ಹಗ್ಗ ಹೊಸೆಯುವರು.

ಇರಲು ಆಸರ ಕೊಟ್ಟ ಸಮುದ್ರನಾಥನೆ ನಮಗೆ ಆಹಾರವನ್ನು ಒದಗಿಸುವನು. ಅಕ್ಕಿ ಮೀನಗಳೆ ನಮಗೆ ಮುಖ್ಯ ಆಹಾರ. ಮನೆ ಮನೆಯ ತೋಟಗಳಲ್ಲಿ ಬೆಳೆಯುವ ತೆಂಗು ಮೆಣಸುಗಳನ್ನು ನಿತ್ಯದ ಅಡಿಗೆಯಲ್ಲಿ ಉಪಯೋಗಿಸುವೆವು. ನಮಗೆ ತಾಜಾ ತೆಂಗಿನ ಎಣ್ಣೆಯೆ ತುಪ್ಪವಾಗಿದೆ, ನಮ್ಮಲ್ಲಿ ಹೈನ ಕಡಿಮೆ. ಮಾವು, ಹಲಸು ಮೊದಲಾದ ಹಣ್ಣುಗಳಿಗೂ ಕೊರತೆಯಿಲ್ಲ. ಬಯಲು ನಾಡಿನವರಂತೆ ನಾವು ಕಾಳುಕಡಿಗಳನ್ನು ಸಂಗ್ರಹಿಸಿ ಇಡುವಂತಿಲ್ಲ. ಇಲ್ಲಿಯ ಆರ್ದ್ರ ಹವೆಗೆ ಅವು ಕೆಟ್ಟು ಬಿಡುವವು. ಅಕ್ಕಿಯ ಗಂಜಿಯೆ ನಮಗೆ ಮುಂಜಾವಿನ 'ಚಹಾ-ತಿಂಡಿ-ತಿನಿಸು.' ಗಂಜಿಯನ್ನು ಸೇವಿಸಿ ಮಕ್ಕಳಾದ ನಾವು ದೂರದವರೆಗೆ ಶಾಲೆಗೆ ಹೋಗುವೆವು. ಹಿರಿಯರು ತಮ್ಮ ಕೆಲಸಕ್ಕಾಗಿ ಹೋಗುವರು.



ಕರಾವಳಿಯ ಮೀನುಗಾರ

ನಮ್ಮ ಬಟ್ಟೆ ಬಹಳ ಕಡಿಮೆ. ಲುಂಗಿ-ಲಂಗೋಟಿಗಳಾದರೆ ತೀರಿತು. ತಲೆಗೊಂದು ಬಟ್ಟೆಯ ತುಂಡು. ಇಲ್ಲಿಯ ಉಗಿ ಕೂಡಿದ ಹವೆ, ಇಲ್ಲವೆ ವಿಪರೀತ ಮಳೆ, ಇವುಗಳಿಗೆ ಇಷ್ಟೇ ಬಟ್ಟೆ ಸಾಕು. ಕರಾವಳಿಯ ಪ್ರದೇಶದವರಾದ ನಮಗೆ ಹಗಲು ರಾತ್ರಿಗಳ ಇಲ್ಲವೆ ಬೇಸಿಗೆ ಚಳಿಗಾಲಗಳ ಉಷ್ಣತೆಯ ಅಂತರವು ಬಹಳೇ ಕಡಿಮೆಯಾಗಿರುವದು. ಚಳಿಯಂತೂ ನಮಗೆ ತೀರ ಕಡಿಮೆ. ಸಂಜೆಯ ಸಮಯಕ್ಕೆ ಎಲ್ಲರೂ ಸಮುದ್ರದ ಕಡೆಗೆ ಧಾವಿಸುವರು. ಸಮುದ್ರದಿಂದ ಬೀಸುವ ತಂಗಾಳಿ ಮೈಗೆ ತಂಪು; ಮನಸ್ಸಿಗೆ

ಉಲ್ಲಾಸವನ್ನುಂಟು ಮಾಡುವವು. ಸಮುದ್ರದ ದಂಡೆಯ ಮೇಲೆ ಸೂರ್ಯಾಸ್ತವನ್ನು ನಿರೀಕ್ಷಿಸಬೇಕು. ಸೃಷ್ಟಿಯ ಈ ಸೊಬಗು ನಿಮಗೆ ಬೇರೆ ಎಲ್ಲಿಯೂ ದೊರೆಯಲಾರದು.

ಮಳೆಯಿಂದ ನಮ್ಮ ಮೈಯೊಂದನ್ನೇ ಅಲ್ಲ, ನಮ್ಮ ಮನೆಗಳನ್ನು ನಾವು ರಕ್ಷಿಸಬೇಕು. ಬಯಲು ಸೀಮೆಯವರಂತೆ ಮಾಳಿಗೆ ಮನೆಗಳು ನಿರುಪಯೋಗಿಯಾದವುಗಳು. ಮಳೆಯ ನೀರೆಲ್ಲ ಉರುಳಿ ಹೋಗುವಂತೆ ನಮ್ಮ



ಇಳುಕಲಿನ ಚಪ್ಪರುಗಳು

ಮನೆಗಳಿಗೆ ಇಳುಕಲಾದ ಚಪ್ಪರಗಳು ಇರಲೇಬೇಕು. ಹುಲ್ಲು ಚಪ್ಪರಗಳಿದ್ದರೆ ವರುಷ ವರುಷವೂ ಹೊಸ ಹುಲ್ಲನ್ನು ಹೊಚ್ಚಬೇಕಾಗುವದು. ಈ ಕೆಲಸದಲ್ಲಿ ಹಿರಿಯರಿಗೆ ನಾವು ಸಹಾಯ ಮಾಡುವೆವು. ಸಿರಿವಂತರು ತಮ್ಮ ಮನೆಗಳಿಗೆ ಹಂಚು ಹೊದಿಸುವರು.

ನಮ್ಮಲ್ಲಿ ಕೆಲವರು ಹಿಂದುಳಿದವರಿರುವರು. ಇವರು ಈ ಪ್ರದೇಶದ ಮೂಲ ನಿವಾಸಿಗಳಾಗಿರಬಹುದು. ‘ ಹಾಲಕ್ಕಿ ಒಕ್ಕಲು ’ ಎಂಬವರನ್ನು ನೀವು ನೋಡಬೇಕು. ಇವರಲ್ಲಿ ಹೆಣ್ಣುಮಕ್ಕಳು ತಮ್ಮ ಎದೆಯ ಮುಂಭಾಗವನ್ನು ಕೇವಲ ಕರಿಮಣಿಗಳ ಸರಗಳಿಂದ ಮುಚ್ಚಿಕೊಳ್ಳುವರು. ಈ ಸಮಾಜದ ಜನರಲ್ಲಿ ಶೀಲ, ರೀತಿ ನಡತೆಗಳು ಒಳ್ಳೇ ಶ್ರೇಷ್ಠವಾಗಿರುವವು.

ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ‘ಕೊರಗರು’ ಎಂಬ ಹೆಸರಿನ ಇನ್ನೊಂದು ಹಿಂದುಳಿದ ಸಮಾಜವಿದೆ. ಕೊರಗರು ಸೂರ್ಯನನ್ನು ಪೂಜಿಸುವರು. ಸೂರ್ಯನನ್ನು ‘ ಐತ್ಯ ’, ಚಂದ್ರವನ್ನು ‘ ಟೋಮ ’ ಎಂದು ಕರೆಯುವರು.

ಮೂರ್ತಿ ಚಿಕ್ಕದು, ಕೀರ್ತಿ ದೊಡ್ಡದು ಎಂದು ಹೇಳುವರಲ್ಲವೆ ? ಹಾಗೆಯೆ ನಮ್ಮ ಕರಾವಳಿಯ ಪ್ರದೇಶ ಕಿರಿದಾದುದು, ಆದರೆ ಕೀರ್ತಿ ಹಿರಿದಾದುದು. ಈ ಚಿಕ್ಕ ಪ್ರದೇಶದಲ್ಲಿ ಗೋಕರ್ಣ, ಉಡುಪಿ, ಮೂಡಬಿದರೆ, ಕಾರ್ಕಳ ಮೊದಲಾದ ಪವಿತ್ರ ಕ್ಷೇತ್ರಗಳಿವೆ. ‘ ಭರತೇಶ ವೈಭವ ’ವನ್ನು ಬರೆದ ರತ್ನಾಕರ ವರ್ಣಿಯು ನಮ್ಮ ಮೂಡಬಿದರೆಯವನು. ಮುದ್ದಣನು ನಮ್ಮ

ಕುಂದಾಪೂರದವನು. ಮಕ್ಕಳ ಅಚ್ಚುಮೆಚ್ಚಿನ ಕವಿಯಾದ ಪಂಜೆಯವರು ನಮ್ಮವರು. ರಾಷ್ಟ್ರಕವಿಯಾದ ಗೋವಿಂದ ಪೈ ಅವರು ನಮ್ಮವರು. ಶ್ರೀಗಂಧ ಹಸ್ತಿದಂತಗಳಲ್ಲಿ ಸುಂದರವಾಗಿ ಕೆತ್ತನೆಯ ಕೆಲಸಗಳನ್ನು ಮಾಡುವ 'ಗುಡಿಕಾರ' ಕಲಾವಿದರು ನಮ್ಮವರೆ.

ಬನ್ನಿ' ಕನ್ನಡ ನಾಡಿನ ಈ ಭಾಗದ ಸೊಬಗನ್ನು ನೋಡಿಹೋಗಿರಿ.

ಇಕೊ, ಇನ್ನೊಂದು ಕೈಬರೆಹದ ಪತ್ರಿಕೆ. ಮಲೆನಾಡಿನ ಶಾಲೆಯೊಂದರಿಂದ ಹೊರಡುವದು. 'ಅರುಣ'ವೆಂಬುವದು ಅದರ ಹೆಸರು. ಅಲ್ಲಿಯ ನಿಮ್ಮ ಗೆಳೆಯನೊಬ್ಬ ತಮ್ಮ 'ಮಲೆನಾಡಿನ ಜೀವನದ' ದ ಬಗ್ಗೆ ಹೇಳಿರುವನು. ಓದಿರಿ.

## ಅರುಣ

ವರುಷ. ಮಲೆನಾಡಿನ ಜನ ಜೀವನ ........ ಸಂಚಿಕೆ....

( ಬರೆದವರು : ಕುಮಾರ.... )

ನಾವಿರುವದು ಮೈಸೂರು ರಾಜ್ಯದ ಒಂದು ಮುಖ್ಯವಾದ ಭಾಗದಲ್ಲಿ-ಅದಕ್ಕೆ ಮಲೆನಾಡು ಎಂದು ಹೇಳುವರು. 'ಮಲೆ' ಎಂದರೆ ಬೆಟ್ಟ. ಈ ಭಾಗಕ್ಕೆ 'ಪರ್ವತಮಯ ಪ್ರದೇಶ' ವೆಂತಲೂ ಹೇಳುವರು.

ಮಲೆನಾಡು ನಮ್ಮ ರಾಜ್ಯದ ಅಭಿವೃದ್ಧಿಗೆ ಆಧಾರವಾಗಿದೆ, ಸಂಪತ್ತಿಗೆ ಸಾಧನವಾಗಿದೆ. ಇಲ್ಲಿ ಖನಿಜ ಸಂಪತ್ತಿದೆ, ವಿಪುಲವಾದ ಅರಣ್ಯ ಸಂಪತ್ತಿದೆ. ಬೇರೆ ಎಲ್ಲಿಯೂ ಕಾಣಲಾಗದ ಸೃಷ್ಟಿಯ ಸೊಬಗಿದೆ.

ನಮ್ಮ ಮಲೆನಾಡಿನಲ್ಲಿ ಬೆಟ್ಟ ಹಾಗೂ ಕಾಡುಗಳು ಒಂದಕ್ಕೊಂದು ಏಕಜೀವವಾಗಿ ಬೆರತುಕೊಂಡಿವೆ. ಬೆಟ್ಟ, ಕಾಡಿಗೆ ಆಸರವಾಗಿದೆ. ಕಾಡು ಬೆಟ್ಟಕ್ಕೆ ಬೆಡಗಿನ ಕಳೆ ಕಟ್ಟುತ್ತಿದೆ. ಬೆಟ್ಟದ ಓರೆಗಳಿಗೆ ಹನ್ನೆರಡು ತಿಂಗಳೂ ಹಸಿರು ಮುರಿಯುವ ಗಿಡಗಳ ನಿರಂತರವಾದ ಹೊದಿಕೆಯಿರುವದು. ತೇಗು, ಮತ್ತಿ, ಸಾಲ, ಹೊನ್ನಿ, ಶ್ರೀಗಂಧ ಇವು ಗಿಡಗಳಲ್ಲಿ ಮುಖ್ಯವಾದವು. ಬೆಟ್ಟಗಳ ಕೊಳ್ಳಗಳಲ್ಲಿ, ಅನುಕೂಲವಿರುವ ಸಮಭೂಮಿಗಳಿರುವಲ್ಲಿ, ಭತ್ತದ ಗದ್ದೆಗಳು, ಅಡಿಕೆ, ತೆಂಗು, ಬಾಳೆಗಳ ತೋಟಗಳು. ಬೆಟ್ಟಗಳ ಇಳುಕಲುಗಳಲ್ಲಿ ಹಾಲುಬಣ್ಣದ ತಿಳಿನೀರಿನ ಚಿಕ್ಕ ದೊಡ್ಡ ತೊರೆಗಳು, ಝರಿಗಳು. ಬಂಡೆಗಳೊಡನೆ ಈ ಚಿಕ್ಕ ತೊರೆಗಳ ಚೆಲ್ಲಾಟ ನೋಡಬೇಕು. ಉನ್ನತವಾದ ಬೆಟ್ಟ, ಹಸಿರು ಮುರಿಯುವ ಕಾಡು, ಅಲ್ಲಲ್ಲಿ ಬೆಳೆದು ನಿಂತಿರುವ ಗದ್ದೆ

ತೋಟಗಳು, ಮಲೆನಾಡಿನ ಮಕ್ಕಳಾದ ನಮಗೆ ಬಹು ದೊಡ್ಡ ಸಂಪತ್ತು, ಇನ್ನೆಲ್ಲಿಯೂ ಕಾಣದ ನಮ್ಮ ಮಲೆನಾಡಿನ ವಿಶೇಷವಾದ ಸೊಬಗು.

ನಮ್ಮ ರಾಜ್ಯದ ಕೆಲವೊಂದು ಭಾಗದಲ್ಲಿ ನೀರಿಲ್ಲದೆ ಬೆಳೆ ಬರುವದಿಲ್ಲ ವಂತೆ. ಆದರೆ ನಮ್ಮ ಮಲೆನಾಡಿನಲ್ಲಿ ನೀರು ಹೆಚ್ಚಾಗಿ ಬೆಳೆ ಕೆಡುವ ದುಂಟು. ಬೆಟ್ಟಗಳು ಮಳೆರಾಯನನ್ನು ತಡುಬಿ ಆತನನ್ನು ಪೂರ್ಣವಾಗಿ ಸುಲಿದುಕೊಳ್ಳುವವು. ಮಳೆಗಾಲ ಬಂದಿತೆಂದರೆ ಸರಿ. ಮೂರು ತಿಂಗಳು ಗಳ ಕಾಲ ಎಡೆಬಿಡದೆ ಮಳೆ ಸುರಿಯುವದು. ಜನರು ಮನೆಬಿಟ್ಟು ಹೊರಗೆ ಹೊರಡುವ ಹಾಗಿಲ್ಲ. ಆದರೆ ಗದ್ದೆ ತೋಟಗಳಿಗೆ ಹೋಗದೆ ಗತ್ಯಂತರ ವಿಲ್ಲ. ಮಳೆಯಿಂದ ಬೆಳೆಗಳಿಗೆ ಏನು ಅಪಾಯವಾಗಿರುವದೋ ಹೋಗಿ ನೋಡಲೇಬೇಕು. ಅಡಿಕೆ ತೋಟಗಳಿಗೆ ಆಗಲೆ ರೋಗ ಹಿಡಿರುತ್ತದೆ. ಜಾರುವ ಮರವನ್ನೇರಿ ಔಷಧ ಸಿಂಪಡಿಸಬೇಕು. ನೆರವಿಗಾಗಿ ಹಿರಿಯರ ಜೊತೆಗೆ ನಾವೂ ಹೋಗಬೇಕಾಗುವದು; ತಲೆಗೊಂದು ಕಂಬಳಿಯ ಕುಂಚಿಗೆ, ಒಂದು ಲಂಗೋಟಿ, ಇಷ್ಟೇ ಬಟ್ಟೆಗಳು ನಮಗೆ-ಚಿಕ್ಕವರಿಗೆ, ದೊಡ್ಡವರಿಗೆ, ಇಬ್ಬರಿಗೂ ಕೂಡ. ನೆಲದ ಮೇಲೆ ಕ್ಷೇಮದಿಂದ ಹೆಜ್ಜೆ ಇಡುವಂತಿಲ್ಲ. ಎಲ್ಲಿ ಬೇಕಾದಲ್ಲಿ ಓಡಾಡುವ ಹಾಗಿಲ್ಲ. ಜಿಗಳೆ ಜಾತಿಯ ಇಂಬುಳಗಳು ನಮಗರಿಯದೆಯೆ ಕೈಗೂ ಕಾಲಿಗೂ ಅಂಟಿಕೊಳ್ಳುವವು. ಸಾಕಷ್ಟು ರಕ್ತ ಹೀರಿದ ಬಳಿಕ ಅವು ನೆಲಕ್ಕೆ ಬಿದ್ದು ಬಿಡುತ್ತವೆ. ದೇಹದ ಆ ಭಾಗ ಕೆಸರು ಮೆತ್ತಿದಂತೆ ತಣ್ಣಗೆನಿಸುತ್ತದೆ, ತೆಗೆದು ನೋಡಿದರೆ ರಕ್ತಮಯವಾಗಿ ಬಿಟ್ಟಿರುತ್ತದೆ. ಇದು ನಮಗೆ ನಿತ್ಯದ ಅನುಭವ. ನಮ್ಮ ಗದ್ದೆ ತೋಟಗಳಿಗೆ ಮಳೆಯ ನೀರೊಂದೇ ಅಲ್ಲ. ಎಲ್ಲ ಕಡೆಯಲ್ಲಿ ಹುಟ್ಟುವ ಊಟೆಗಳೂ ನೀರಿನ ಪೂರೈಕೆಯನ್ನು ಮಾಡುವವು.

ಎತ್ತಿಗೆ ಇಲ್ಲಿಯ ಹವೆ ತಾಳಲಾರದೆಂದು ಹೇಳಿದೆನಲ್ಲವೆ? ನಿಜ. ಇಲ್ಲಿಯ ದೂಷಿತವಾದ ಹವೆಯೆ ನಮಗೆ ಇಷ್ಟೊಂದು ಹಾನಿಯನ್ನು ಮಾಡುವ ದೆಂದು ನಮ್ಮ ಹಿರಿಯರು ಹೇಳುವರು. ಅತಿಶಯವಾದ ಮಳೆಯಿಂದ ತಗ್ಗು ಭೂಮಿಗಳಲ್ಲಿ ನೀರು ನಿಂತು ಕೊಳಚೆ ಪ್ರದೇಶಗಳಾಗುವವು. ಇವುಗಳಲ್ಲಿ ಹುಟ್ಟುವ ಗುಂಗಾಡುಗಳು ಚಳಿ ಜ್ವರವನ್ನು ಮನೆಮನೆಗೆ ಮುಟ್ಟಿಸುವವು. ಮಳೆಗಾಲದಲ್ಲಿಯಂತೂ ಈ ಚಳಿಜ್ವರದ ಬೇನೆ ಒಂದು ಪಿಡುಗಿನಂತೆ ಪ್ರಬಲ ವಾಗುವದು. ಈ ರೋಗದಬಾಧೆಬಳಲದವರೆ ಇಲ್ಲ. ಚಳಿ ಬಂದಾಗೆ 'ಹುಯ್ ಹುಯ್' ಎಂದು ನಡುಗುವದು, ಜ್ವರ ಇಳಿದ ಕೂಡಲೆ ಮತ್ತೆ

ಕೆಲಸಕ್ಕೆ ಹೋಗುವದು ನಮ್ಮ ಜನರ ಜೀವನಕ್ರಮವಾಗಿದೆ. ಮಳೆಗಾಲ ವೆನ್ನುವಂತಿಲ್ಲ, ಚಳಿಗಾಲವೆನ್ನುವಂತಿಲ್ಲ. ವರುಷದ ಹನ್ನೆರಡು ತಿಂಗಳೂ ನಮ್ಮ ಜನ ದುಡಿಯಲೇಬೇಕಾಗುತ್ತಿದೆ. ದುಡಿಮೆಗಾಗಿ ಹೊರಗಿನ ಜನರನು ಹಣ ಕೊಟ್ಟು ತರಬೇಕಾಗುತ್ತಿದೆ.

ನಮ್ಮ ತೋಟಗದ್ದೆಗಳಲ್ಲಿಯ ಬೆಳೆಗಳಿಗೆ ಅತಿವೃಷ್ಟಿಯೊಂದೆ ಆತಂಕ ವಾಗಿಲ್ಲ. ಇನ್ನೂ ಬೇರೆ ಹೆಚ್ಚಿನ ಕುತ್ತುಗಳಿರುವವು. ಮಂಗಗಳು ಕಣ್‌ತಪ್ಪಿಸಿ ತೆಂಗಿನ ಗಿಡವನ್ನೇರಿ ಕಾಯಿ ಗಳನ್ನು ಹಾಳು ಮಾಡುವವು. ಒಂದು ಗಿಡದಿಂದ ಮತ್ತೊಂದು ಗಿಡಕ್ಕೆ ಜಿಗಿಯುವವು. ಬಯಲು ಸೀಮೆಯ ಮಕ್ಕಳು ಬೆಳೆಗಳಿಗೆ ಎರಗಿದ ಹಕ್ಕಿಗಳನ್ನು ಹಾರಿಸುವಂತೆ. ಮಲೆನಾಡಿನ ಮಕ್ಕಳಾದ ನಾವು ಮಂಗಗಳನ್ನು ಹೊಡೆದೋಡಿಸುವೆವು. ಈ ಕೆಲಸ ವನ್ನು ಹೇಗಾದರೂ ಮಾಡಬಹುದು. ಆದರೆ ಒಮ್ಮೊಮ್ಮೆ ಕಾಡಾನೆಗಳ ಹಿಂಡು ಗದ್ದೆ ತೋಟಗಳಲ್ಲಿ ನುಸುಳುವದು. ಕೈಗೆ ಬಂದಿರುವ ಕಬ್ಬನ್ನು, ಗೊನೆ ಬಿಟ್ಟಿರುವ ಬಾಳೆಯನ್ನು ತುಳಿದು ಕೆಡಿಸಿ ಬಿಡ ವದುಂಟು.



ತೆಂಗಿನ ಗಿಡವನ್ನೇರಿದ ಮಂಗಗಳು

ನಮ್ಮ ಸಾಕುಪ್ರಾಣಿಗಳೂ ಸುರಕ್ಷಿತವಾಗಿಲ್ಲ. ಹುಲಿ, ಚಿರತೆಗಳ ಬಾಯಿಗೆ ಅವು ಆಗಾಗ್ಗೆ ಬೀಳುವದುಂಟು. ಕೋಳಿ, ಮೇಕೆ, ಆಕಳುಗಳನ್ನು ನಾವು ಸಾಕುವೆವು. ಎತ್ತು, ಇಲ್ಲಿಯ ಹವೆ ಮಳೆಗಳನ್ನು ತಾಳಲಾರವು. ಬೇಸಾಯಕ್ಕಾಗಿ ನಮ್ಮ ಹಿರಿಯರು ಕೋಣಗಳನ್ನೇ ಉಪಯೋಗಿಸುವರು.

ಭತ್ತ ಬೆಳೆಯುವವರಾದ ನಮಗೆ ಅಕ್ಕಿಯೆ ಮುಖ್ಯ ಆಹಾರ. ಮಾಂಸಾ ಹಾರಿಗಳಾದವರಿಗೆ ಕಾಡಿನಲ್ಲಿ ಬೇಕಾದಷ್ಟು ಬೇಟೆ ದೊರೆಯುವದು. ಮೆಣಸು-ಹವೀಜುಗಳಿಂದ ಮಾಡುವ 'ಕಷಾಯ' ನಮಗೆ ನಿತ್ಯ ಪಾನೀಯ. ಕರಾವಳಿಯ ಪ್ರದೇಶದವರಂತೆ ಮೆಣಸು ತೆಂಗುಗಳನ್ನು ಅಡುಗೆಯಲ್ಲಿ ಹೆಚ್ಚಾಗಿ ಉಪಯೋಗಿಸುವೆವು. ಬಾಳೆ, ಮಾವು, ಹಲಸು ಮೊದಲಾದ ಹಣ್ಣುಗಳಿಗೂ ನಮ್ಮಲ್ಲಿ ಕೊರತೆಯಿಲ್ಲ. ಕಾಡಿನಲ್ಲಿ ವಿಪುಲವಾಗಿ ದೊರೆಯುವ ಜೇನು ಕೂಡ ನಾವು ಹೆಚ್ಚಾಗಿ ಸೇವಿಸುವೆವು. ಹೆಚ್ಚಾಗಿ ನಮಗೆ ಹಸುಗಳದೆ ಹೈನ. ಮನೆಗೆ ಬಂದ ಅತಿಥಿಗಳಿಗೆ ನಿಮ್ಮಲ್ಲಿ ಕೆಲವರು ಚಹಾ, ಕಾಫಿ

ತಿಂಡಿ-ತಿನಿಸು ಕೊಡುವಿರಲ್ಲವೆ? ಬೆಲ್ಲ, ಕೊಬ್ಬರಿ, ತೆಂಗಿನ ಸೀನೀರು, ಕಷಾಯಗಳನ್ನು ನಾವು ನಮ್ಮ ಅತಿಥಿಗಳಿಗೆ ಕೊಡುವೆವು. ಮಲೆನಾಡು ಹಾಗು ಕರಾವಳಿಗಳ ಜೀವನಕ್ರಮದಲ್ಲಿ ಹೋಲಿಕೆಯು ಹೆಚ್ಚಾಗಿದೆ. ಆಹಾರ, ಬಟ್ಟೆಗಳು ಸಾಮಾನ್ಯವಾಗಿ ಒಂದೇ ವಿಧವಾಗಿವೆ. ವಿಪರೀತ ಮಳೆಯಾಗುವ ಇವೆರಡೂ ಭಾಗಗಳಲ್ಲಿ ಮನೆಗಳ ಚಪ್ಪರಗಳೂ ಇಳುಕಲಾಗಿರುವವು. ಹುಲ್ಲಿನ ಗುಡಿಸಲುಗಳೆ ಬಹಳ. ಅಲ್ಲೊಂದು ಇಲ್ಲೊಂದು ನಿಮಗೆ ಹಂಚಿನ ಮನೆ ಕಾಣಬಹುದು. ನಮ್ಮ ಹಳ್ಳಿಗಳು ತೀರ ಚಿಕ್ಕವುಗಳು. ನಾಲ್ಕೈದು ಗುಡಿಸಲುಗಳ ಒಂದು ಗುಂಪು, ಒಂದು ಹಳ್ಳಿ ಎನಿಸುವದು. ದೂರ ದೂರದ ಗದ್ದೆ ತೋಟಗಳಲ್ಲಿ ಒಂದೊಂದು ಮನೆತನದವರು ನಿರ್ಭಯವಾಗಿ ಬಾಳುವೆ ಮಾಡುವರು. ಹೆದರಿಕೆಯೆಂಬುವದು ನಮಗೆ ಗೊತ್ತೇ ಇಲ್ಲ. ತಪ್ಪಿಸಿಕೊಂಡ ದನಕರಗಳನ್ನು ಹುಡುಕಲು, ಮಲೆನಾಡಿನ ಮಕ್ಕಳಾದ ನಾವು ಕಾಡಿನಲ್ಲಿ ಕತ್ತಲೆಯೊಳಗೆ ಕೂಡ ಅಲೆದಾಡಬೇಕಾಗುವದು. ಒಂದು ಬಗೆಯ ಕಟ್ಟಿಗೆಯ 'ಪಂಜು' ನಮಗೆ ಕಂದೀಲ. ನಿಮ್ಮ 'ರೇಡಿಯೊ' ಇನ್ನೂ ನಮ್ಮ ಮಲೆನಾಡಿನಲ್ಲಿ ಪ್ರವೇಶಿಸಿಲ್ಲ. ನಸುಕಿನಲ್ಲಿ ಹಕ್ಕಿಗಳ ಹಾಡು. ನಮಗೆ 'ಮೊದಲನೆ ಪ್ರಸಾರ'. ಸಂಜೆಯಲ್ಲಿ ಜೀರುಂಡೆ—ಗುಂಗಾಡುಗಳ ಸಂಗೀತ 'ಎರಡನೆಯ ಪ್ರಸಾರ'. ಹಕ್ಕಿಗಳ ಕೂಗು-ಕರೆಗಳಿಂದ ಮಲೆನಾಡಿನ ಮಕ್ಕಳಾದ ನಾವು ಅವುಗಳನ್ನು ದೂರದಿಂದಲೇ ಗುರುತಿಸಬಲ್ಲೆವು.

ನಾಲ್ಕಾರು ತಂಬಿಗೆ ನೀರಿನಿಂದ ಜಳಕ ತೀರಿಸುವ ಬಯಲು ಸೀಮೆಯ ಜನ ನಮ್ಮ ಮಲೆನಾಡಿಗೆ ಬರಬೇಕು. ಇಲ್ಲಿಯ 'ಅಭ್ಯಂಜನ'ದ ಸುಖವನ್ನೂ ಕಷ್ಟವನ್ನೂ ಅನುಭವಿಸಬೇಕು. ತೆಂಗಿನ ಎಣ್ಣೆಗೆ ಕೊರತೆಯಿಲ್ಲ, ನೀರು ಕಾಯಿಸಲು ಕಾಡಿನ ಕಟ್ಟಿಗೆಯ ಕೊರತೆಯಿಲ್ಲ. ವಾರಕ್ಕೊಂದು ಸಲದ ಈ ಅಭ್ಯಂಜನ ನಮ್ಮ ಮನೆಗಳಲ್ಲಿ ಒಂದು ಮಹಾಯಜ್ಞದಂತೆ ನಡೆಯುವದು. ಹೊರಗಿನಿಂದ ಬರುವ ಅತಿಥಿಗಳಿಗೂ ಈ ಅಭ್ಯಂಜನದ ಅನುಭವವನ್ನು ನಾವು ಮಾಡಿಯೆ ಬಿಡುವೆವು.

ಸಾಮಾನ್ಯವಾಗಿ ಮಲೆನಾಡಿನ ದೃಶ್ಯವು ಎಲ್ಲೆಡೆಗೂ ಒಂದೇ ವಿಧವಾಗಿರುವದು. ಆದರೆ ಕೊಡಗು 'ಮಲೆನಾಡು' ಎನಿಸಿಕೊಳ್ಳುತ್ತಿದ್ದರೂ ಅಲ್ಲಿಯ ಸೃಷ್ಟಿಯ ಸೊಬಗು ಬೇರೆ ವಿಧವಾಗಿದೆ. ಜೀವನ ಕ್ರಮವೂ ಬೇರೆ ರೀತಿಯದಾಗಿದೆ. ಕೊಡಗಿನಲ್ಲಿಯೂ ಕಾಡು ಹಬ್ಬಿದೆ. ಬೆಟ್ಟದ ಇಳುಕಲಿನಲ್ಲಿ ಕಾಫಿಯ ತೋಟಗಳಿವೆ. ಆದರೆ ಮಲೆನಾಡಿನ ಭೀಕರತೆ ಇಲ್ಲಿ ಅನಿಸುವದಿಲ್ಲ. ಇಲ್ಲಿಯ

ಸೃಷ್ಟಿಯ ಸೊಬಗು ಸೌಮ್ಯವಾಗಿರುವದು, ವಿವಿಧವಾಗಿರುವದು. ಮೇಲಾಗಿ ಕೊಡಗು ಹೂ, ಹಣ್ಣುಹಂಪಲುಗಳ ನಾಡು. ' ದಕ್ಷಿಣ ಭಾರತದ ಕಾಶ್ಮೀರ ' ವೆಂದು ಅದು ಹೆಸರಾಗಿದೆ. ವಿದ್ಯೆಯಲ್ಲಿಯೂ ಕೊಡಗು ಬಹಳೇ ಮುಂದೆ ಬಂದಿದೆ. 'ಹುಲಿಯ ಹಾಲನು ಮೆದ್ದ ದೊ' ಎಂದು ಕೊಡಗಿನ ಜನರನ್ನು ಪಂಜೆ ಯವರು ಹೊಗಳಿರುವರು, ಅಂತೆಯೇ ಕೊಡಗಿನ ವೀರ ಪುತ್ರರು ಭಾತದ ಸೇನಾನಾಯಕರಾಗಿ ಕೀರ್ತಿ ಪಡೆಯುತ್ತಿದ್ದಾರೆ.

ಸೃಷ್ಟಿಯ ಸ್ಥಿತ್ಯಂತರಗಳು ಕ್ರಮವಾಗಿ, ಸಾವಧಾನವಾಗಿ ಸಂಭವಿಸುವ ವಂತೆ ! ಮಲೆನಾಡು-ಮೈದಾನ ( ತಪ್ಪಲಿನ ಬಯಲು ಸೀಮೆ )ಗಳ ನಡುವಿನ ಭಾಗದಲ್ಲಿ ಈ ಮಾತಿನ ಮನವರಿಕೆ ನಮಗಾಗುವದು. ಈ ಭಾಗಕ್ಕೆ ' ಮಲೆ ನಾಡ ಸೆರಗು ' ಎನ್ನುವರು. ಮಲೆನಾಡಿನ ವಿಪರೀತ ಮಳೆ, ರೋಗರುಜಿನಗಳು, ಕಾಡು ಮೃಗಗಳು, ಇವುಗಳ ಯಾವ ಪೀಡೆಯೂ ಈ ಭಾಗದ ಜನರಿಗೆ ಇರುವ ದಿಲ್ಲ. ಒಳ್ಳೇ ಭೂಮಿಗೆ ಸಾಕಷ್ಟು ಮಳೆ ನಿಶ್ಚಿತವಾಗಿ ಒದಗುವದರಿಂದ, ಬರ ಗಾಲವೆಂಬುದನ್ನು ಇವರು ಅರಿಯರು. ಈ ಸುಸ್ಥಿತಿಯಲ್ಲಿ ಇಲ್ಲಿಯ ಜನರು ವಿದ್ಯೆ ಹಾಗೂ ಇಂದಿನ ಜೀವನದಲ್ಲಿ ಮುಂಬರಿದಿರುವರು.

ಆದರೆ ನಮ್ಮ ಮಲೆನಾಡು ಬಹಳೇ ಹಿಂದುಳಿದಿದೆ. ಕೆಲವೊಂದು ತೀರ ಹಿಂದುಳಿದ ಸಮಾಜಗಳು ಇನ್ನೂ ಇಲ್ಲಿ ಕಂಡುಬರುವವು. ಇವರಿಗೆ ' ಆದಿ ವಾಸಿ 'ಗಳೆನ್ನುವರು. ಕಾಡು ಕುರುಬರು, ಗೊಲ್ಲರು, ಸೋಲಿಗರು, ತೋಡರು ಬಡಿಗರು, ಕೊಡಗಿನ ಎರವರು ಇವರಲ್ಲಿ ಮುಖ್ಯರಾದವರು. ಈ ಆದಿವಾಸಿಗಳು ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶದಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸ ಮಾಡುವರು. ಇಂಥ ಹತ್ತೆಂಟು ಗುಡಿಸಲುಗಳ ಒಂದು ಗುಂಪಿಗೆ ' ಪೋಡು ' ಅಥವಾ ' ಮಾಡ ' ಎಂದು ಕರೆಯುವರು.

ಸೋಲಿಗರ ಮೂಲ ಪುರುಷ ಸೋಲಿಗಯ್ಯ. ಆತನ ವಂಶಜರೆ ಸೋಲಿ ಗರು. ಕಾಡಾನೆಗಳನ್ನು ಹಿಡಿಯುವ ' ಖೆಡ್ಡಾ ' ದ ವಿಧಾನದಲ್ಲಿ ಸೋಲಿಗರ ಸಾಹಸವೆ ಹೆಚ್ಚಿನದು. ತೋಡರು ರಾವಣನ ಸಂತತಿಯವರಂತೆ, ಇನ್ನು ಕೆಲ ವರು ಪಾಂಡವರ ವಂಶಜರಂತೆ. ಮುಸಲ್ಮಾನರ ಪೀಡೆಗೆ ಬೇಸತ್ತು ಕಾಡು ಗೊಲ್ಲರು ದೇಹಲಿ ( ದಿಲ್ಲಿ ) ಯಿಂದ ಓಡಿ ಬಂದವರಂತೆ. ಸೋಲಿಗರ ಭಾಷೆ ಕನ್ನಡ. ಉಳಿದವರದು ಮಿಶ್ರ ಭಾಷೆ; ಆದರಲ್ಲಿ ಕನ್ನಡ, ತಮಿಳು ಮೊದಲಾದ ಭಾಷೆಗಳು ಕೂಡಿಕೊಳ್ಳುವವು. ಇದಲ್ಲದೆ ತಮ್ಮತಮ್ಮೊಳಗೆ ಅವರು ಬೇರೊಂದು ಭಾಷೆಯನ್ನೂ ಬಳಸುವರು.

ಸಾಮಾನ್ಯವಾಗಿ ಈ ಆದಿವಾಸಿಗಳೆಲ್ಲ ಮಾಂಸವನ್ನು ತಿನ್ನುವರು. ರಾಗೀ ಹಿಟ್ಟು, ಗಡ್ಡೆಗೆಣಸು, ಹಣ್ಣು, ಜೇನು ಇವನ್ನು ಆಹಾರದಲ್ಲಿ ಉಪಯೋಗಿಸುವರು. ಕಡವೆ, ನರಿ, ಹಕ್ಕಿಗಳನ್ನು ಕೊಂದು ತಿನ್ನುವರು. ಕೊಡಗಿನ ಎರವರು ಕಾಗೆ ಹಿಡಿದು ತಿನ್ನುವರಂತೆ.

ತೋಡರ ಮುಖ್ಯ ಕಸಬು ಎಮ್ಮೆ ಸಾಕುವುದು. ಗೊಲ್ಲರು ಕುರಿ-ಹಸುಗಳ ಪಾಲನೆ ಮಾಡುವರು. ಕಾಡಿನಲ್ಲಿ ದೊರೆಯುವ ನೆಲ್ಲಿಕಾಯಿ, ಅರಳೇಕಾಯಿ, ಅಂಟಾಳಕಾಯಿ, ಜೇನು, ರಾಳ, ಗೇರುಬೀಜಗಳನ್ನು ಸಂಗ್ರಹಿಸಿ ಮಾರುತ್ತಾರೆ ಕೊಡಗಿನ ಎರವರು ಕಷ್ಟಸಹಿಸುವವರು. ಕೂಲಿ ಕೆಲಸವೇ ಅವರ ಮುಖ್ಯ ಉದ್ಯೋಗ.

ಆದಿವಾಸಿಗಳು ಅನೇಕ ದೇವರನ್ನು ಪೂಜಿಸುವರು, ಇವರ ಮುಖ್ಯ ದೇವರು ಬಿಳಿಗಿರಿ ರಂಗಸ್ವಾಮಿ. ಮಂತ್ರ, ಮಾಟಗಳಲ್ಲಿ ಇವರಿಗೆ ನಂಬಿಕೆ ಹೆಚ್ಚು. ರೋಗ ಬಂದರೆ ಔಷಧಿ ಕೊಡುವದಿಲ್ಲ. ದೆವ್ವ ಅಥವಾ ಭೂತದ ಬಾಧೆಯಂತಲೆ ಇವರ ನಂಬಿಕೆ. ನಮ್ಮ ಮಲೆನಾಡಿನಲ್ಲಿಯ ಹೆಚ್ಚಿನ ದೆವ್ವಗಳ ಅವತಾರವೆಂದು ಕಾಣುತ್ತದೆ. ಈ ದೆವ್ವಗಳ ಕೃಪೆಗೆ ಪಾತ್ರರಾದವರು ಒಂದೊಂದು ಮನೆಯಲ್ಲಿ ಒಬ್ಬರಾದರೂ ಕಂಡುಬರುವರು. ಭೂತ, ಪಂಜುರ್ಲಿ, ಕಲ್ಲುಕುಟಿಗ, ದೆವ್ವಗಳನ್ನು ಬಿಡಿಸುವೆವೆಂದು ಹೇಳುವ 'ಮಾಂತ್ರಿಕ'ರೂ ಇಲ್ಲಿ ಉಂಟು. ಭೂತ ಪೂಜೆಯೆಂದರೆ ಪಿತೃಪೂಜೆ ಎಂದು ಬಲ್ಲವರು ಹೇಳುತ್ತಾರೆ.

ಆದಿವಾಸಿಗಳು ಕಾಡಿನಲ್ಲಿರುವದು ನಿಜ. ಆದರೆ ಅವರಲ್ಲಿ ಒಳ್ಳೇ ಶೀಲ, ರೀತಿನೀತಿಗಳಿರುವವು. ಅವರಲ್ಲಿ ಸುಳ್ಳು, ಮೋಸ, ಕಳ್ಳತನ ಇರುವದಿಲ್ಲ. ಅವರು ಹಿಂಸಾಕೃತ್ಯದಲ್ಲಿ ತೊಡಗುವದಿಲ್ಲ.

ನಿಮ್ಮ ನಾಟಕ, ಚಲಚಿತ್ರಗಳು ನಮ್ಮ ಮಲೆನಾಡಿಗೆ ಇನ್ನೂ ಕಾಲಿಟ್ಟಿಲ್ಲ. ನಮ್ಮ ಜನರ ಮನರಂಜನೆಯ ಸಂಗತಿಗಳೆ ಬೇರೆ. ಕೋಳಿಅಂಕ, ಟಗರು ಕಾಳಗ, ಯಕ್ಷಗಾನ, ಹೂವಿನಕೋಲು ಇವು ನಮ್ಮ ಮನರಂಜನೆಯ ಮುಖ್ಯ ವಿಷಯಗಳಾಗಿವೆ.

ಮಲೆನಾಡಿನಲ್ಲಿ ಅರಣ್ಯದ ಎಲ್ಲ ಬಗೆಯ ಸಂಪತ್ತು ಸಮೃದ್ಧವಾಗಿರುವದು. ಕಾಗದ, ಕಟ್ಟಿಗೆ, ಪದರುಕಟ್ಟಿಗೆ ಹಾಗೂ ಔಷಧಗಳ ಉದ್ಯಮಕ್ಕೆ ಇಲ್ಲಿ ಎಲ್ಲ ಅನುಕೂಲತೆಗಳಿರುವವು. ಉಪಯುಕ್ತವಾದ ಖನಿಜಗಳೂ ಇಲ್ಲಿ

ದೊರೆಯುವವೆಂದು ಹೇಳುವರು ಮಲೆನಾಡಿನ ಅಭಿವೃದ್ಧಿಗಾಗಿ ನಮ್ಮ ರಾಜ್ಯ ಸರಕಾದವರು ಎಲ್ಲರೀತಿಯಿಂದಲೂ ಯತ್ನಿಸುತ್ತಿರುವರು. ಡಿ. ಡಿ ಟಿ. ಯ ಪ್ರಯೋಗದಿಂದ ರೋಗರುಜಿನಗಳ ಉಪದ್ರವ ಕಡಿಮೆಯಾಗತೊಡಗಿದೆ. ವಿದ್ಯಾಪ್ರಸಾರ, ಮಾರ್ಗ ಸೌಕರ್ಯಗಳ ಏರ್ಪಾಡು ಆಗತೊಡಗಿದೆ. ಇಂದಿಲ್ಲ ನಾಳೆ ಈ ಮಲೆನಾಡು ಉದ್ಯಮಗಳ ಕೇಂದ್ರವಾಗಿ ಮುಂದೆ ಬರುವದು.

ಮಲೆನಾಡಿನ ಸೊಬಗಿಗೆ ಕನ್ನಡ ಕವಿಗಳು ಮನಸೋತಿರುವರು. ಮಾನವನಾಗದಿದ್ದರೆ 'ಕೊಗಿಲೆ'ಯಾಗಿ, 'ಮರಿದುಂಬಿ'ಯಾಗಿಯಾದರೂ ಈ ಪ್ರದೇಶದಲ್ಲಿ ಹುಟ್ಟಿ ಬರಬೇಕು, ಎಂದು ಪಂಪ ಮಹಾಕವಿಯು ಬಯಸಿರುವನು. ಸೊಬಗಿನ ಬೀಡಾದ ಮಲೆನಾಡನ್ನು ಕಣ್ಣಾರೆ ನೋಡಲು ನಿಮ್ಮ ಮನಸ್ಸೂ ಹಾತೊರೆಯುವದಲ್ಲವೆ ? ಬನ್ನಿರಿ ಹಾಗಾದರೆ.

ಮೈಸೂರು ರಾಜ್ಯದ ಕರಾವಳಿ, ಮಲೆನಾಡು, ಮಲೆನಾಡ ಸೆರಗು, ಈ ಪ್ರದೇಶಗಳನ್ನು ವರ್ಣಿಸಿರುವ ಲೇಖನಗಳನ್ನು ಓದಿರುವಿರಿ. ಇಲ್ಲಿ ಇನ್ನೊಂದು ಕೈಬರಹದ ಪತ್ರಿಕೆಯಿದೆ. ಈ ಪತ್ರಿಕೆಯ ಹೆಸರು 'ತೋರಣ'. ಈ ರಾಜ್ಯದ 'ಮೈದಾನ'ವೆಂದು ಕರೆಯುವ ಭಾಗದ ಒಂದು ಶಾಲೆಯವರು ಇದನ್ನು ಹೊರಡಿಸುವರು. ಮೈದಾನಕ್ಕೆ 'ತಪ್ಪಲಿನ ಬಯಲುಸೀಮೆ, ಬೆಳವಲ ನಾಡು' ಎಂತಲೂ ಹೇಳಬಹುದು. ನಿಮ್ಮ ಗೆಳೆಯರೊಬ್ಬರು ನಮ್ಮ ರಾಜ್ಯದ ಈ ಭಾಗವನ್ನು ಕುರಿತು ಈ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿರುವರು:—

## ತೋರಣ

ವರುಷ.... ಸಂಚಿಕೆ...

### ಬೆಳವಲುನಾಡಿನ ಜನಜೀವನ

ಬರೆದವರು:— ಕುಮಾರ ....

ತಪ್ಪಲಿನ ಮೇಲ್ಭಾಗವೆ ಮೈದಾನ. ಇದಕ್ಕೇ ಬಯಲು ಸೀಮೆ; ಬೆಳವಲ ನಾಡು ಎಂದು ನಾವು ಹೇಳುವೆವು, ಮೈಸೂರು ರಾಜ್ಯದ ಎಲ್ಲಕ್ಕೂ ದೊಡ್ಡ ಭಾಗವು ಇಲ್ಲಿಯೆ ನೆಲೆಸಿದೆ. ಅತಿ ಪ್ರಾಚೀನ ಶಿಲೆಯಿಂದ ಇದು ರಚಿತವಾಗಿದೆ. ಬಿಸಿಲು, ಗಾಳಿ, ಮಳೆಗಳು ಬಂಡೆಗಳನ್ನು ಸವೆಸಿ ಸವೆಸಿ ಭೂಮಿಯನ್ನು ಸಿದ್ಧಗೊಳಿಸಿವೆ. ಕರಿಯ ಎರೆಯ ಭೂಮಿಯಿಂದ ಇದು ಕರಿನಾಡು ಎಂದು ಹೆಸರಾಗಿದೆ. ನಮ್ಮ ಈ ತಪ್ಪಲಿನ ಒಂದು ತದಿಯಂಚು ಪಶ್ಚಿಮ ಘಟ್ಟಗಳು. ಮತ್ತೊಂದು ತದಿಯಂಚು ಪೂರ್ವ ಘಟ್ಟಗಳು. ಇವೆರಡೂ ಬೆಟ್ಟಗಳ

ಸಾಲು ಮಳೆ–ಗಾಳಿಗಳನ್ನು ಅಲ್ಲಲ್ಲಿಯೆ ತರಬುವವು. ಮಳೆಯನ್ನೆಲ್ಲ ಸುಲಿದು ಕೊಂಡು ಬರಿಗೈಯಿಂದ ಅವುಗಳನ್ನು ಕಳಿಸುವವು. ಎಲ್ಲ ಮಳೆ ಬೆಟ್ಟಗಳ ಮೇಲೆ ಬೀಳುವದು. ನಮಗೆ ದೊರಕುವುದು 'ಮಳೆಯ ನೆಳಲು'. ಮಳೆ ಗಾಲದಲ್ಲಿ ಆಗೊಂದು ಈಗೊಂದು ಮೋಡ ಈ ಭಾಗಕ್ಕೆ ತುಸು ಮಳೆ ಕೆಡಹಿ ಮರೆಯಾಗುವದು. ಅಂತೆಯೆ 'ಮಳೆಯ ನೆಳಲಿನ ಪ್ರದೇಶ'ವೆಂದು ನಮ್ಮ ಭಾಗಕ್ಕೆ ಹೇಳುವರು. ನಿಸರ್ಗದ ಈ ಸಂಗತಿಗಳೆ ಇಲ್ಲಿಯ ಜನಜೀವನವನ್ನು ಹೀಗೆಯೇ ಇರಬೇಕು ಎಂದು ಗೊತ್ತುಮಾಡಿವೆ.

'ಊರು ಸನಿಹದಲ್ಲಿಲ್ಲ, ನೀರೊಂದು ಗಾವುದವು, ಸೇರಿ ನಿಲ್ಲುವರೆ ನೆರಳಿಲ್ಲ' ಎಂಬುದು ಬೆಳವಲದ ಒಂದು ಮುಖ. 'ಜೋಳದಾ ಜೋನಕ್ಕೆ ಬೇಳೆಯಾ ತೊಗೆಯಾಗಿ, ಕಾಳೆಮ್ಮೆ ಕರೆದ ಹೈನಾಗಿ' ಎಂಬುದು ಈ ಪ್ರದೇಶದ ಇನ್ನೊಂದು ಮುಖ. ಬೆಳವಲನಾಡಿನ ಇವೆರಡೂ ಸ್ವರೂಪಗಳನ್ನು ಸರ್ವಜ್ಞನು ಚೆನ್ನಾಗಿ ಚಿತ್ರಿಸಿದ್ದಾನೆ. ಒಳ್ಳೇ ಫಲವತ್ತಾದ ಭೂಮಿ. 'ಹೊನ್ನು ಬಿತ್ತಿ ಹೊನ್ನು ಬೆಳೆಯಬಹುದು' ಎಂದು ನಮ್ಮ ಹಿರಿಯರು ಹೇಳುವರು. ಆದರೆ ಇಂಥ ಭೂಮಿಗೆ ನೀರಿನ ಅನುಕೂಲತೆ ಇಲ್ಲ. ಅಲ್ಪ ಮಳೆ ಯಾದರೂ ನಿಶ್ಚಿತವಾಗಿ, ಕಾಲಕಾಲಕ್ಕೆ ಆಗುವದೆಂಬ ಭರವಸೆ ಇಲ್ಲ. ಮುಂದೆ ಮಳೆಯಾದೀತೆಂಬ ಆಶೆಯಿಂದ ಭೂಮಿಗೆ ನಾವು ಬೀಜ ಹಾಕಿಬಿಡುವೆವು. ನಿರಭ್ರವಾದ ಆಕಾಶದ ಕಡೆಗೆ ನೋಡಿ ನಿಟ್ಟುಸಿರು ಬಿಡುವೆವು. ಬಿತ್ತಿದ ಕಾಳು ಅಲ್ಲಿಯೆ



ಬೆಳವಲ ನಾಡಿನ ಒಕಲಿಗ

ಕಮರಿ ಹೋಗುವದು. ಒಮ್ಮೊಮ್ಮೆ 'ಒಣಗಲ್ ಪೈರಿಗೆ ಬಾರದಿರ್ದ ಮಳೆ' ಅತಿವೃಷ್ಟಿಯಾಗಿ ಬಂದು ಕೈಗೆ ಬರುವ ನಾಲ್ಕು ಕಾಳನ್ನೂ ಕೊಚ್ಚಿಕೊಂಡು ಹೋಗುವದು; ಅಪರೂಪವಾಗಿ ಪೂರ್ಣ ಬೆಳೆ ಬಂದರೆ, ನೂರು ವರ್ಷಗಳ ವರೆಗೆ ಕುಳಿತು ಉಣ್ಣಬಹುದು. ಸತತವಾಗಿ ಮಳೆರಾಯನ ಕೋಪ–ಕೃಪೆ ಗಳನ್ನು ನಾವು ಅವಲಂಬಿಸಿ ಬಾಳಬೇಕು. ಇದರಿಂದ ಜೀವನ ಆಶೆ-ನಿರಾಶೆ ಗಳನ್ನೆಲ್ಲ ದೈವದ ಕೊರಳಿಗೆ ಕಟ್ಟಿ ಬಿಡುವುದು ನಮ್ಮ ಸ್ವಭಾವವಾಗಿಬಿಟ್ಟಿದೆ.

ಮಳೆ ಕಡಿಮೆ ಹಾಗು ಅನಿಶ್ಚಿತವೆಂದು ಹಿಂದೆ ಹೇಳಿದೆನಲ್ಲವೆ ? ಅದರಿಂದ ನಮ್ಮ ಮನೆಗಳಿಗೆ ಮೇಲ್ಮುದ್ದೆಯ ಮಾಳಿಗೆಗಳಿರುವವು. ಇಳುಕಲಿನ

ಚಪ್ಪರದ ಅಗತ್ಯವಿಲ್ಲ. ಮನೆ ಸೋರುವ ಭೀತಿಯಿಲ್ಲ. ಮಳೆ ಹೇಗಾದರೂ ಸರಿ. ನಮ್ಮ ಭಾಗದ ಮಳೆ ಬಹಳೇ ಚೆನ್ನಾದುದು, ಆರೋಗ್ಯಕರವಾದುದು. ರೋಗರುಜಿನಗಳ ಉಪದ್ರವ ತೀರ ಕಡಿಮೆ. ಇಲ್ಲಿಯ ಹವೆಗೆ 'ಕಲ್ಲು ತಿಂದು ಕಲ್ಲು ಕರಗಿಸಿಕೊಳ್ಳಬಹುದೆ 'ಂದು ನಮ್ಮ ಹೆಮ್ಮೆ. ಬೇಸಿಗೆಯ ಬೇಗೆ ಪ್ರಖರವಾಗಿರುವದು ನಿಜ. ಆದರೆ ಚಳಿಗಾಲದ ಚಳಿ ತೀರ ಕಡಿಮೆ. ಇದರಿಂದ ತೆಳುವಾದ ನೂಲಿನ ಬಟ್ಟೆಗಳು ನಮ್ಮ ಶರೀರ ರಕ್ಷಣೆಗೆ ಸಾಕಾಗುವವು.

ಭೀಮಾ ತೀರದ 'ಮುತ್ತಿನಂಥ ಜೋಳ', ಡೋಣೀ ದಂಡೆಯ 'ಹವಳದಂಥ ಗೋದಿ' ನಮಗೆ ಮುಖ್ಯ ಆಹಾರ ಧಾನ್ಯಗಳು. ಜೋಳ–ಸಜ್ಜೆಗಳ ರೊಟ್ಟಿಯೇ ನಮ್ಮಲ್ಲಿ ಬಹುಜನರ ಮುಖ್ಯ ಆಹಾರ. ಸ್ಥಿತಿವಂತರೂ ಸಿರಿವಂತರೂ ಅಕ್ಕಿಯನ್ನು ನಿತ್ಯದ ಆಹಾರದಲ್ಲಿ ಉಪಯೋಗಿಸುವರು. ಜೋಳದ ಬೋನ ( ನುಚ್ಚು ), ಬೇಯಿಸಿದ ಬೇಳೆ ಕಾಳು- ' ಗುಗ್ಗರಿ ', ಉಪ್ಪು ಮೆಣಸಿನಕಾಯಿ ಇವು ನಿತ್ಯದ ಊಟದಲ್ಲಿ ಉಪಯೋಗಿಸುವ ಪದಾರ್ಥಗಳು ನಮ್ಮ ವಾರದ ಸಂತೆ, ' ಉಪ್ಪು ಮೆಣಸಿನಕಾಯಿ ' ಯದು. ಹಬ್ಬ ಹುಣ್ಣಿವೆಗಳಂದು ಗೋದಿಯ ಊಟ, ಬೇಳೆಗೆ ಬೆಲ್ಲ ಬೆರಿಸುವದುಂಟು. ನಮ್ಮಲ್ಲಿಯ ತರಕಾರಿಗೆ ( ಕಾಯಿಪಲ್ಯೆ ) ಬಹಳೇ ರುಚಿ ಇರುವದು. ಈರುಳ್ಳಿ ( ಉಳ್ಳೇಗಡ್ಡಿ ), ಬಳ್ಳೊಳ್ಳಿ, ನಮ್ಮ ಕಸುವಿಗೆ ಆಧಾರವಾಗಿವೆ. ನಮ್ಮಲ್ಲಿಯೂ ಮಾವು-ಬಾಳೆ ಸಾರ್ವತ್ರಿಕವಾಗಿ ದೊರೆಯುವವು. ಅಲ್ಲಲ್ಲಿ ಬೆಳೆಯುವ ಪೇರು, ಬೊರೇ, ನೇರಿಳ ಬಹಳೇ ಮಧುರವಾಗಿರುವವು.

ಬೇಸಾಯವು ( ಒಕ್ಕಲುತನ ) ನಮ್ಮ ಜನರಿಗೆ ಮುಖ್ಯ ಉದ್ಯೋಗವಾಗಿದೆ. ಅನುಕೂಲವಿರುವಲ್ಲಿ ಬಾವಿಗಳ ನೆರವಿನಿಂದ ತುಸು ತೋಟಗಾರಿಕೆಯೂ ನಡೆಯುವದು. ಮೂರು ನಾಲ್ಕು ತಿಂಗಳು ಮಾತ್ರ ಹೊಲದಲ್ಲಿ ತುಂಬಾ ಕೆಲಸವಿರುವದು. ಉಳಿದ ತಿಂಗಳುಗಳಲ್ಲಿ ಹಿಂದಿನ [illegible]ವ ನಮ್ಮ ಹಿರಿಯರು ಮನೆಯಲ್ಲಿಯೆ ಅನೇಕ ಕೈಗಾರಿಕೆಗಳನ್ನು ನಡೆಸುತ್ತಿದ್ದರಂತೆ. ನೇಕಾರಿಕೆ ನಮ್ಮಲ್ಲಿ ಪರಂಪರೆಯಾಗಿ ಬೆಳೆದುಬಂದ ಕೈಗಾರಿಕೆಯಾಗಿದೆ. ನಮ್ಮ ಭಾಗದ ಅನೇಕ ಜನರು ಈ ಉದ್ಯೋಗದಲ್ಲಿ ತೊಡಗಿರುವರು.

ಅತಿಥಿಸತ್ಕಾರಕ್ಕಾಗಿ, ಔದಾರ್ಯಕ್ಕಾಗಿ ಕನ್ನಡನಾಡು ಹೆಸರಾದುದು. ನಮ್ಮ ಭಾಗದ ಜನರಲ್ಲಿಯೂ ಈ ಗುಣಗಳು ನಮಗೆ ಕಂಡು ಬರುವವು. ತಮಗೆ ಏನೇ ಅಡಚಣೆಗಳಿದ್ದರೂ, ಮನೆಗೆ ಬಂದವರನ್ನು ಬರಿಗೈಯಿಂದ ಇವರು ಎಂದಿಗೂ ತಿರುಗಿ ಕಳಿಸುವದಿಲ್ಲ. ಸುಗ್ಗಿಯ ಸಮಯದಲ್ಲಿಯಂತೂ

ಇವರು ಕೈಬಿಚ್ಚಿ ದಾನ ಮಾಡುವರು. ನಮ್ಮ ಜನರು ಬಹಳೇ ಉತ್ಸವ ಪ್ರಿಯರು. ಇವರ ಹೌಸು-ಹುಮ್ಮಸಗಳು ಹಿರಿಯಾದವುಗಳು. ಜಾತ್ರೆ; ಬೈಲಾಟಗಳಲ್ಲಿ ಇವರು ಚಿಕ್ಕ ಮಕ್ಕಳಂತೆ ಆಸ್ಥೆವಹಿಸುವರು.



'ಹಕ್ಕಿ ಹೊಡೆಯುವೆವು'



'ಮಹಿಷವಾಹನ'—ರಾಗಿ....

ಚಿಕ್ಕ ಮಕ್ಕಳಾದ ನಾವು ಶಾಲೆಗೆ ಹೋಗುತ್ತಿದ್ದರೂ, ಮನೆಯಕೆಲಸ- ಹೊಲಗೆಲಸಗಳಲ್ಲಿ ಹಿರಿಯರಿಗೆ ನಾವು ನೆರವಾಗುವೆವು. ಸುಗ್ಗಿಯ ಸಮಯದಲ್ಲಿ ಮಕ್ಕಳು, ಮುದುಕರು ಎಲ್ಲರೂ ಹೊಲದಲ್ಲಿ ಇರಬೇಕಾಗುವದು. ಎಲ್ಲರಿಗೂ ಹೊಲದಲ್ಲಿ ಒಂದೊಂದು ಬಗೆಯ ಕೆಲಸ ವಿರುವದು. ಇದಕ್ಕಾಗಿಯೆ ನಮ್ಮ ಶಾಲೆಯ ಸೂಟಿಯ (ರಜೆಯ) ದಿನಗಳನ್ನು ಸುಗ್ಗಿಯ ಸಮಯಕ್ಕೆ ಸರಿಯಾಗುವಂತೆ ಗೊತ್ತುಪಡಿಸಿರುವರು. ತೆನೆ ಕಾಳು ತುಂಬಿದಾಗ್ಗೆ ನಾವು ಕವಣೆಗಲ್ಲುಗಳಿಂದ ಹಕ್ಕಿ ಹೊಡೆಯಬೇಕು. ನಮ್ಮ ಹಿರಿಯರಿಗೆ ಬುತ್ತಿಯನ್ನು ತೆಗೆದುಕೊಂಡು ಹೋಗಬೇಕು. ಊರ ಸನಿಹದ ಕೆರೆಗೆ ಎತ್ತು ಎಮ್ಮೆಗಳನ್ನು ಮೈ ತೊಳೆದುಕೊಂಡು ಬರಲು ಹೋಗಬೇಕು. 'ಮಹಿಷವಾಹನ'ರಾಗಿ ಹೋಗುವ ನಮ್ಮ ಸಡಗರವನ್ನು ನೀವು ಕಣ್ಣಾರೆ ನೋಡಬೇಕು.

ನಮ್ಮ ಬೆಳವಲದ ಭಾಗದಲ್ಲಿಯೂ ಕೆಲವೊಂದು ಹಿಂದುಳಿದ ಸಮಾಜಗಳಿರುವವು. ಕೊರವರು, ಗೊಲ್ಲರು, ವಡ್ಡರು, ಲಂಬಾಣಿಗಳು ಇವರು ಈ ವರ್ಗಕ್ಕೆ ಸೇರಿದವರೆನ್ನಬಹುದು.

ನಮ್ಮ ಬೆಳವಲ ನಾಡು ಅನೇಕ ರಾಜ್ಯ ಸಾಮ್ರಾಜ್ಯಗಳಿಗೆ ನೆಲೆವೀಡಾಗಿದೆ. ವಿಜಯನಗರದ ರಾಯರು, ಬದಾಮಿ ಕಲ್ಯಾಣಗಳ ಚಾಲುಕ್ಯರು ಮಾನ್ಯಖೇಟ (ಮಳಖೇಡ)ದ ರಾಷ್ಟ್ರಕೂಟರು ಈ ಭೂಮಿಯಲ್ಲಿಯೆ ತಮ್ಮ

ಸಾಮ್ರಾಜ್ಯಗಳನ್ನು ಕಟ್ಟಿದರು, ಬೆಳೆಸಿದರು. ನಾಲ್ಕು ಬಾಹ್ಮನೀ ರಾಜಮನೆತನಗಳೂ ಇಲ್ಲಿಯೇ ಆಳಿಹೋದವು. ಹಂಪೆ, ಬಾದಾಮಿ, ಮೊದಲಾದ ಪ್ರಾಚೀನ ರಾಜಧಾನಿಗಳು ಇಲ್ಲಿರುವವು. ಹಳೆಬೀಡು, ಬೇಲೂರು, ಹಂಪೆ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಈ ಸ್ಥಳಗಳಲ್ಲಿಯ ಪ್ರಾಚೀನ ಶಿಲ್ಪ ಕಲೆಯು ಜಗತ್‌ಪ್ರಸಿದ್ಧವಾಗಿದೆ. ವೀರಶೈವ ಮತೋದ್ಧಾರಕವಾದ ಬಸವಣ್ಣನವರು ಇದೇ ಭಾಗದವರು. ಕವಿಚಕ್ರವರ್ತಿ ರನ್ನನು ಮುದುವೊಳಲ್ ಮುಧೋಳ) ದವನು. ಆದಿಪಂಪನು ಪುಲಿಗೆರೆ (ಲಕ್ಷ್ಮೇಶ್ವರ) ಯವನು. ಕುಮಾರ ವ್ಯಾಸ, ಕುಮಾರ ವಾಲ್ಮೀಕಿ ಹಾಗೂ ಅನೇಕ ವೈಷ್ಣವದಾಸರು ಇಲ್ಲಿಯವರೆ.

ಇಲ್ಲಿಯ ಶಿಲ್ಪ ಕಲೆ, ಈ ಮಹಾಪುರುಷರ ಜನ್ಮ ಸ್ಥಳ, ಇವುಗಳನ್ನು ನೋಡುವ ಆತುರತೆ ನಿಮಗಿರುವದಲ್ಲವೆ? ಹಾಗಾದರೆ ಒಮ್ಮೆಯಾದರೂ ನಮ್ಮ ಬೆಳವಲನಾಡಿಗೆ ಬಂದು ಹೋಗಿರಿ.

## ಅಭ್ಯಸನಗಳು

1. ಕರಾವಳಿಯ ಜನರು ಎಲ್ಲಿಂದ ಬಂದುದಾಗಿ ಹೇಳುವರು?
2. ಕರಾವಳಿಯಲ್ಲಿ ಮಕ್ಕಳಿಗೂ ಕೂಡ ಭಯವಿಲ್ಲ—ಏಕೆ?
3. ಕರಾವಳಿಯಲ್ಲಿ ಬೇಸಾಯವು ಬಹಳೇ ಪ್ರಯಾಸಕರವಾದುದು–ಏಕೆ?
4. ಕರಾವಳಿಯ ಜನರು 'ಸಮುದ್ರದ ಒಕ್ಕಲು' ಹೇಗೆಂಬುದನ್ನು ವಿವರಿಸಿರಿ.
5. ಮಲೆನಾಡಿನ ಜೀವನವು ಬೆಟ್ಟ ಕಾಡುಗಳಿಗೆ ಹೊಂದಿಕೊಂಡಿದೆ–ಹೇಗೆ?
6. ಮಲೆನಾಡಿನ ಜನರ ತೊಂದರೆಗಳು ಯಾವು?
7. ಕರಾವಳಿ ಹಾಗೂ ಮಲೆನಾಡು, ಇವುಗಳಲ್ಲಿ ನೀವು ಯಾವುದನ್ನು ಆರಿಸಿಕೊಳ್ಳಬಹುದು? ಏಕೆ?
8. ಕೊಡಗು ಮಲೆನಾಡೆನಿಸಿಕೊಂಡರೂ ಅಲ್ಲಿಯ ಭೌಗೋಲಿಕ ಸಂಗತಿಗಳು ಭಿನ್ನವಾಗಿವೆ—ಹೇಗೆಂಬುದನ್ನು ವಿವರಿಸಿರಿ.
9. ಮಲೆನಾಡಿನ ಅಭಿವೃದ್ಧಿಗಾಗಿ ಸರಕಾರದವರು ಯಾವ ಏರ್ಪಾಡು ಮಾಡಿರುವರು?
10. ಸರ್ವಜ್ಞನು ಬೆಳವಲ ನಾಡನ್ನು ಇಬ್ಬಗೆಯಾಗಿ ಹೇಗೆ ಬಣ್ಣಿಸಿರುವನು?
11. ಹಾಲಕ್ಕಿ, ಒಕ್ಕಲು, ಆದಿವಾಸಿಗಳು, ಲಂಬಾಣಿಗರು— ಇವರ ಬಗ್ಗೆ ಟಿಪ್ಪಣಿ ಬರೆಯಿರಿ.

12. ಭೌಗೋಲಿಕ ಕಾರಣ ಕೊಡಿರಿ.

(ಅ) ಕರಾವಳಿಯ ಜನರು ತೆಂಗನ್ನು ಹೆಚ್ಚಾಗಿ ಉಪಯೋಗಿಸುವರು.

(ಬ) ಮಲೆನಾಡಿನಲ್ಲಿ ದುಡಿಯುವ ಜನರ ಕೊರತೆ ಇರುವದು.

(ಕ) ಬೆಳವಲ ನಾಡಿನ ರೈತನು ದೈವವಾದಿಯಾಗಿರುವನು.

(ಡ) ಮಲೆನಾಡ ಸೆರಗಿನ ರೈತರು ಸುಖಿಗಳಾಗಿರುವರು.

## 14. : : : : : : : : : : ಉಪಸಂಹಾರ

ಮೈಸೂರು ರಾಜ್ಯದ ನಾಲ್ಕು ನಿಟ್ಟುಗಳನ್ನು ನೀವು ಇದುವರೆಗೆ ನಿರೀಕ್ಷಿಸಿದಂತಾಯಿತು. ಅಲ್ಲಲ್ಲಿಯ ಜನಜೀವನದ ಬಗ್ಗೆ ನಿಮ್ಮ ಗೆಳೆಯರು ಹೇಳಿರುವ ಸ್ವಾನುಭವದ ಸಂಗತಿಗಳನ್ನು ತಿಳಿದುಕೊಂಡಿರುವಿರಿ. ಅವರು ವಿವರವಾಗಿಯೆ ಎಲ್ಲ ಸಂಗತಿಗಳನ್ನು ನಿರೂಪಿಸಿರುವರು.

ನಮ್ಮ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಭೂರಚನೆ ಹೇಗಿದೆ ? ಮಳೆಯ ಪರಿಮಿತಿ ಎಷ್ಟು ? ಬೆಳೆಗಳು ಯಾವು ? ಕಾಡು ಎಲ್ಲಿ ಹಬ್ಬಿದೆ ? ಕಾಡುಗಳಲ್ಲಿ ದೊರೆಯುವ ವಸ್ತುಗಳೇನು ? ಖನಿಜಗಳು ಯಾವು ? ಇವೇ ಮುಂತಾದ ವಿವರಗಳನ್ನು ನೀವು ಇದುವರೆಗೆ ತಿಳಿದುಕೊಂಡಿರುವಿರಿ. ಈ ಜ್ಞಾನವು ನಿಮಗೆ ತುಂಬಾ ಉಪಯುಕ್ತವಾದುದು. ಅಲ್ಲಲ್ಲಿಯ ಜೀವನಕ್ರಮಗಳನ್ನು ತಿಳಿದುಕೊಳ್ಳಲು ಇದರಿಂದ ನಿಮಗೆ ಸಹಾಯವಾಗುವದು. ಜನರ ಆಹಾರ, ಬಟ್ಟೆ, ಆಸರ, ಉದ್ಯೋಗ, ಉತ್ಸವ ಎಂಬೀ ಜೀವನದ ಕಾರ್ಯಗಳೆಲ್ಲ ನಿಸರ್ಗದ ಈ ಸಂಗತಿಗಳಿಗೆ ಹೇಗೆ ಹೊಂದಿಕೊಂಡಿವೆಯೆಂಬುದು ನಿಮಗೆ ಇದರಿಂದ ಹೊಳೆದಿರುವದು.

ಆಹಾರ, ಬಟ್ಟೆ ಮುಂತಾದವುಗಳಲ್ಲಿ ನಮ್ಮಿಂದ ಬೇರೆಯಾಗಿರುವವರನ್ನು ನೋಡಿದ ಕ್ಷಣ, ನಾವು ಅದನ್ನು 'ವಿಚಿತ್ರ'ವೆಂದು ಕರೆಯುವೆವು. ಇಲ್ಲವೆ ಅಪಹಾಸ ಮಾಡುವೆವು. ಹೀಗೆ ಮಾಡುವದು ಬಹಳ ದೊಡ್ಡ ತಪ್ಪೆಂಬುದನ್ನು ಭೂಗೋಲ ವಿಷಯವು ನಮಗೆ ತೋರಿಸಿಕೊಡುವದು. ಈ ಭಿನ್ನತೆಗೆ ಅಲ್ಲಲ್ಲಿಯ ಭೌಗೋಲಿಕ ಸಂಗತಿಗಳೆ ಹೇಗೆ ಕಾರಣವಾಗಿವೆಯೆಂಬುದು ನಮಗೆ ಗೊತ್ತಾಗುವದು. ನಮ್ಮ ಸುತ್ತಲಿನ ಪರಿಸ್ಥಿತಿಗೆ ಸರಿಯಾಗಿ ಹೊಂದಿಕೊಳ್ಳುವದೆ ಜೀವನ. ಹೀಗೆ ಮಾಡದಿದ್ದರೆ ನಮ್ಮ ಜೀವನವು ಹದಗೆಡುವದು. ಹೀಗೆ ಮಾಡದಿದ್ದರೆ ನಮ್ಮ ಜೀವನವು ಬೆಲೆಗೆಡುವದು. ನಾವು ಹಾನಿಗೆ ಒಳಗಾಗು

ವೆವು. ನಿಮಗೆ ಗೊತ್ತಿರುವ ಒಂದೆರಡು ಉದಾಹರಣೆಗಳನ್ನೇ ತೆಗೆದುಕೊಳ್ಳಿರಿ. ವಿಪರೀತ ಮಳೆಯಾಗುವ ಮಲೆನಾಡಿನವರು ಮೇಲ್ಮುದ್ದೆಯ ಮನೆಕಟ್ಟುವೆವೆಂದು ಹಟತೊಟ್ಟರೆ, ಒಂದೇ ಮಳೆಗಾಲದಲ್ಲಿ ಮನೆಬಿದ್ದು ಹೋಗುವದು. ಕರಾವಳಿಯವರು ಜೋಳ-ಗೋದಿಗಳನ್ನೇ ಬೆಳೆಯುವೆವೆಂದು ಆಗ್ರಹತೊಟ್ಟರೆ ಆಹಾರವಿಲ್ಲದೆ ಕೊರಗಬೇಕಾಗುವದು. ನಮ್ಮ ಬುದ್ಧಿ - ಪರಿಶ್ರಮಗಳಿಂದ ಭೌಗೋಲಿಕ ಸಂಗತಿಗಳಲ್ಲಿ ನಾವು ತುಸು ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು. ಪ್ರಕೃತಿಮಾತೆಯೂ ನಮ್ಮ ತಾಯಿಯೇ ಅಲ್ಲವೆ ? ಅವಳ ಕೂಡ ತುಸು ಸಲಿಗೆ-ಸ್ವಾತಂತ್ರ್ಯಗಳನ್ನು ತಕ್ಕೊಂಡರೆ ತಪ್ಪೇನು ? ಆದರೆ ಸಾಮಾನ್ಯವಾಗಿ ಪ್ರಕೃತಿಮಾತೆಯ ಮಡಲಿನಲ್ಲಿಯೆ ನಾವು ಬೆಳೆಯುವೆವು. ನಮ್ಮ ಸುತ್ತಲಿನ ನಿಸರ್ಗ ಸಂಗತಿಗಳಿಗೆ ಹೊಂದಿಕೊಳ್ಳುವದೆ ಸಾಮಾನ್ಯವಾಗಿ ನಮ್ಮ ಜೀವನದ ರೀತಿಯಾಗಿರುವದು. ಭೂಗೋಲ ವಿಷಯದ ಅಭ್ಯಾಸದಿಂದ ನಮಗೆ ಈ ಮಾತಿನ ಮನವರಿಕೆ ಆಗಬೇಕು. ಅಂದರೆ ‘ ಅಲ್ಲಿಯ ಜನರು ಬರಿ ಲಂಗೋಟಿ ಹಾಕಿಕೊಳ್ಳುವರು ’, ‘ ಇಲ್ಲಿಯ ಜನರು ಮೀನ ತಿನ್ನುವರು ’ ಎಂದು ಹೀಯಾಳಿಸುವ ಬುದ್ಧಿಯು ನಮ್ಮಲ್ಲಿ ಉಂಟಾಗುವದಿಲ್ಲ.

ಜನಜೀವನದಲ್ಲಿಯ ಈ ವ್ಯತ್ಯಾಸಗಳನ್ನು ನಾವು ಸರಿಯಾಗಿ ತಿಳಿದುಕೊಳ್ಳಬೇಕು. ಸಹನೆ, ಸಹಾನುಭೂತಿಗಳಿಂದ ಕಾಣಬೇಕು. ಸರಿಯಾದ ತಿಳುವಳಿಕೆಯಿಂದ ಬೇರೆ ಬೇರೆ ಭಾಗಗಳ ಜನರಲ್ಲಿ ಪರಸ್ಪರ ಪ್ರೀತಿ ಬಾಂಧವ್ಯಗಳು ಉಂಟಾಗುವವು.

ಮೈಸೂರು ರಾಜ್ಯದಲ್ಲಿ ನೀವು ಸಂಚರಿಸಿರುವಿರಿ. ಒಂದೇ ರಾಜ್ಯದ ಬೇರೆ ಬೇರೆ ಭಾಗಗಳ ಜೀವನಕ್ರಮದಲ್ಲಿ ಎಷ್ಟೊಂದು ವ್ಯತ್ಯಾಸಗಳಿರುವವೆಂಬುದು ನಿಮಗೆ ತೋರಬಂದಿತು. ಇನ್ನೊಂದು ಸಂಗತಿಯನ್ನು ನೀವು ಕಂಡು ಹಿಡಿದಿರಬಹುದು. ನಾವೆಲ್ಲರೂ ಆಡುವ ಭಾಷೆ ಕನ್ನಡ. ಅದು ನಮ್ಮ ಮಾತೃಭಾಷೆ. ನಮ್ಮ ತಾಯ್ನುಡಿಯಾದ ಕನ್ನಡವನ್ನು ನಾವು ಪ್ರೀತಿಸುವೆವು, ಗೌರವಿಸುವೆವು. ಈ ತಾಯ್ನುಡಿಯ ಮೇಲಿನ ಮಮತೆಯಿಂದಲೇ ನಾವೆಲ್ಲರೂ ಇಂದು ಒಂದುಗೂಡಿರುವೆವು. ಒಂದೇ ರಾಜ್ಯದ ಪ್ರಜೆಗಳಾಗಿ ಬಾಳುತ್ತಿರುವೆವು. ನಮ್ಮ ರಾಜ್ಯದಲ್ಲಿ ಬೇರೆ ಮಾತೃಭಾಷೆಯುಳ್ಳ ಜನರೂ ಕೆಲವರಿರುವರು. ನಾವು ನಮ್ಮ ಮಾತೃಭಾಷೆಯನ್ನು ಪ್ರೀತಿಸುವಂತೆ, ಅವರಾದರೂ ತಮ್ಮ ಭಾಷೆಯನ್ನು ಅಷ್ಟೇ ಪ್ರೀತಿಸುವರು.

ನಾವು ನಮ್ಮ ಮಾತೃಭಾಷೆಯನ್ನು ಗೌರವಿಸುವಂತೆ ಉಳಿದವರ ಮಾತೃಭಾಷೆಯನ್ನೂ ಗೌರವಿಸಬೇಕು.

ನಮ್ಮ ರಾಜ್ಯದ ಸಂಪತ್ತು ಸಮೃದ್ಧವಾಗಿದೆ; ಬಹುವಿಧವಾಗಿದೆ. ಇಲ್ಲಿ ಪ್ರಾಚೀನ ಪುಣ್ಯ ಕ್ಷೇತ್ರಗಳಿವೆ. ನೋಡುವವರಿಗೆ ದಂಗು ಬಡಿಸುವಂಥ ಶಿಲ್ಪಕಲೆಯ ಬೀಡುಗಳಿವೆ. ಆರೋಗ್ಯಧಾಮಗಳಿವೆ. ಸೃಷ್ಟಿ ಸೌಂದರ್ಯದ ಸ್ಥಳಗಳಿವೆ. ಮಹಾಕವಿಗಳ, ಮತಸ್ಥಾಪಕರ, ಶರಣರ, ದಾಸರ 'ಮಾತೃಭೂಮಿ' ಈ ರಾಜ್ಯವಾಗಿದೆ. ಈ ರಾಜ್ಯದ ಪ್ರಜೆಗಳಾದ ನಾವು ಇವುಗಳಿಗಾಗಿ ಹೆಮ್ಮೆಪಡಬೇಕು. ನಮ್ಮ ಜೀವನವನ್ನು ಒಳ್ಳೆಯದಾಗಿ ಮಾಡುವಂತೆ ಇವುಗಳಿಂದ ಸ್ಫೂರ್ತಿಯನ್ನು ಪಡೆಯಬೇಕು. ಆದರೆ ಈ ಅಭಿಮಾನವು ಅಳತೆಗೆಡಬಾರದು. ಅದರಿಂದ ಕೆಡಕಾಗುವದು. ಶ್ರೇಷ್ಠವಾದ ವಸ್ತುಗಳು ಯಾವ ರಾಜ್ಯದಲ್ಲಿದ್ದರೇನು ? ಯಾವ ದೇಶಲ್ಲಿದ್ದರೇನು ? ಅವು ಶ್ರೇಷ್ಠವಾದವುಗಳೆ. ಅಂಥ ವಸ್ತುಗಳು ಎಲ್ಲಿದ್ದರೂ ಸಜ್ಜನರು ಅವುಗಳನ್ನು ಮೆಚ್ಚುವರು. ನಾವೂ ಹೀಗೆಯೆ ಮಾಡಬೇಕು. ಆದರೆ 'ನಮ್ಮದು ಮಾತ್ರ ಮೇಲು,ಉಳಿದವರದೆಲ್ಲ ಕೀಳು' ಎಂದು ಹೇಳುವದು ಬಹು ದೊಡ್ಡ ತಪ್ಪು. ಹೀಗೆ ಹೇಳುವವರು ಬಾವಿಯೊಳಗಿನ ಕಪ್ಪೆಯಿದ್ದಂತೆ. ತಾನಿರುವ ಬಾವಿಗಿಂತಲೂ ಬೇರೊಂದು ದೊಡ್ಡದಾದ ಜಲಾಶಯವಿಲ್ಲೆಂದು ಆ ಕಪ್ಪೆಯು ಭಾವಿಸುವದು. ನಮ್ಮ ಭಾವನೆಯೂ ತಿಳಿಗೇಡಿಯಾದ ಈ ಕಪ್ಪೆಯಂತೆ ಆಗಬಾರದು.

ಭೂಗೋಲ ವಿಷಯವು ನಮಗೆ ಸರಿಯಾದ ಜ್ಞಾನವನ್ನು ತೋರುವದು. ನಮ್ಮ ರಾಜ್ಯದ ಭೌಗೋಲಿಕ ವಿವರಗಳ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಅದು ತಂದು ಕೊಡುವದು. ಇದರ ಜೊತೆಗೆ ಭಾರತದಲ್ಲಿ ಇನ್ನೂ ಬೇರೆ ರಾಜ್ಯಗಳಿವೆ. ಜಗತ್ತಿನಲ್ಲಿ ಬೇರೆ ದೇಶಗಳಿವೆ. ಇವುಗಳಲ್ಲಿಯ ಜೀವನ ಕ್ರಮವು ಹೇಗಿದೆ, ಅಲ್ಲಿರುವ ಒಳ್ಳೆಯ ಸಂಗತಿಗಳು ಯಾವು ಎಂಬುದನ್ನು ತಿಳಿದುಕೊಳ್ಳುವ ಲವಲವಿಕೆಯನ್ನು ಇದೇ ಭೂಗೋಲ ವಿಷಯ ಇನ್ನು ಮುಂದೆ ಉಂಟುಮಾಡುವದು.

15. : : : : : : : : : ಋತುಗಳು

## ಗ್ಲೋಬು ನಕಾಶ ಮುಂತಾದವುಗಳು

ರಾಜ್ಯದ ಬೇರೆ ಬೇರೆ ಭಾಗಗಳ ಮಳೆ ಹವಾಮಾನಗಳನ್ನು ನೀವು ನಿರೀಕ್ಷಿಸಿರುವಿರಿ. ಒಂದೊಂದು ಪ್ರದೇಶದಲ್ಲಿ ಇವು ಭಿನ್ನವಾಗಿರುವದು ನಿಮಗೆ ಕಂಡುಬಂದಿದೆ. ಪ್ರತಿಯೊಂದು ಭಾಗದ ಹವಾಮಾನ ಹಾಗೂ ಮಳೆಯ ಪ್ರಮಾಣಗಳಿಗೆ, ಅದರ ಸ್ಥಾನ ಹಾಗೂ ಭೂರಚನೆ ಒಂದು ಕಾರಣವಾಗಿದೆ. ಕರಾವಳಿಯ ಭಾಗವು ಸಮುದ್ರಕ್ಕೆ ಸಮೀಪವಾಗಿರುವದು. ಮಲೆನಾಡಿನ ಬೆಟ್ಟಗಳು ಮಳೆ ಗಾಳಿಗಳನ್ನು ತರಬುವವು, ತಪ್ಪಲಿನ ಬಯಲು (ಮೈದಾನ) ಸಮುದ್ರದಿಂದ ದೂರವಾಗಿರುವದು, ಈ ಸ್ಥಾನಿಕ ಕಾರಣಗಳಿಂದ ಈ ಭಾಗಗಳಲ್ಲಿಯ ಮಳೆ–ಹವೆಗಳು ಭಿನ್ನವಾಗಿವೆ.

ಇದಲ್ಲದೆ ಒಂದು ಪ್ರದೇಶದ ಹವೆ ಮಳೆಗಳನ್ನು ವಿವರಿಸುವಾಗ್ಗೆ ಬೇಸಿಗೆಕಾಲ, ಮಳೆಗಾಲ, ಚಳಿಗಾಲ ಎಂಬ ಪದಗಳನ್ನು ನಾವು ಯಾವಾಗಲೂ ಉಪಯೋಗಿಸುವೆವು. ಉದಾಹರಣೆಗಾಗಿ, ಕರಾವಳಿಯ ಭಾಗದಲ್ಲಿ ಚಳಿಗಾಲ ಬೇಸಿಗೆಗಳ ಉಷ್ಣತಾಮಾನಗಳಲ್ಲಿ ಅಂತರವು ಬಹಳೇ ಕಡಿಮೆಯಾಗಿರುವದೆಂದು ನೀವು ಹೇಳುವಿರಿ. ಬೇಸಿಗೆ, ಮಳೆಗಾಲ, ಚಳಿಗಾಲ ಎಂದರೇನು ? ಅವು ಹೇಗೆ ಉಂಟಾಗುವವು ? ನಮ್ಮ ಜೀವನಕ್ರಮವು ಅವುಗಳಿಗೆ ಹೆಚ್ಚಾಗಿ ಹೊಂದಿಕೊಂಡು ಹೇಗೆ ಸಾಗುವದು ? ಇವುಗಳನ್ನು ನೀವು ತಿಳಿದುಕೊಳ್ಳುವದೂ ಅಗತ್ಯವಾಗಿದೆ.

ನಿಮ್ಮ ಶಾಲೆಗೆ ಅತಿದೊಡ್ಡ ರಜೆ (ಸೂಟಿ) ಯಾವ ತಿಂಗಳಿನಲ್ಲಿ ದೊರೆಯುವದು ? ಮೇ ತಿಂಗಳಿನಲ್ಲಿ ಅಲ್ಲವೆ ? ಈ ರಜೆ ಬೇಸಿಗೆಯ ರಜೆಯೆಂದು ಕರೆಯುವರು. ನಿಮಗೆ ಬೇಸಿಗೆಯ ತಾಪವಾಗಬಾರದೆಂದು ಈ ದೀರ್ಘವಾದ ರಜೆ ಕೊಡುವರು. ಮಾರ್ಚ, ಎಪ್ರಿಲ್, ಮೇ ತಿಂಗಳುಗಳಲ್ಲಿ ಸೂರ್ಯನ ಬಿಸಿಲು ಪ್ರಖರವಾಗಿರುವದು. ರಾತ್ರಿಯಲ್ಲಿಯೂ ನಿಮಗೆ ಸೆಕೆಯೆನಿಸುವದು. ಹರವಿಗಳಲ್ಲಿಟ್ಟ ತಣ್ಣೀರು ನಿಮಗೆ ಬೇಕೆನಿಸುವದು. 'ಲಾಲವಾಲಾ–ಮಲಾಯಿವಾಲಾ' ಮಾರುವ 'ಆಯಿಸ್—ಕ್ಯಾಂಡಿ' ( ಬರ್ಫದ ತುಣುಕು)ಗಳಿಗಾಗಿ ನೀವು ಆಶೆಪಡುವಿರಿ. ಈಸು ( ಈಜಲು ) ಕಲಿಯಲು ಇದೇ ಒಳ್ಳೇ ಸಮಯ. ಮೈಮೇಲಿನ ಎಂಥ ತೆಳುವಾದ ಬಟ್ಟೆಯೂ ಭಾರ

ವೆನಿಸುವದು, ಬೇಡವೆನಿಸುವದು. ಸಂಜೆಗೆ ಹೆಚ್ಚು ಕಾಲದವರೆಗೆ ನೀವು ಬಯಲಲ್ಲಿ ಆಡಬಹುದು. ಮನೆ, ಬೀದಿಗಳಲ್ಲಿ ದೀಪಹಚ್ಚುವ ವೇಳೆಯು ತಡವಾಗುವದು. ಇವೆಲ್ಲ ಹೀಗೇಕೆ? ಎಂಬುದು ನಿಮಗೆ ಗೊತ್ತೆ? ಈ ಮೂರು ತಿಂಗಳು ಅವಧಿಗೆ 'ಬೇಸಿಗೆ ಕಾಲ, ಬೇಸಿಗೆ ಋತು' ಎಂದು ನಾವು ಹೇಳುವೆವು. ಬೇಸಿಗೆಯಲ್ಲಿ ಬಿಸಿಲು ಹೆಚ್ಚು, ಹಗಲು ದೊಡ್ಡವಾಗಿರುವವು.

ಬೇಸಿಗೆಯಲ್ಲಿ ಒಕ್ಕಲಿಗರು ಹೊಲಗಳನ್ನು ಬಿತ್ತಿಗೆಗಾಗಿ ಸಿದ್ಧಪಡಿಸುವರು. ಜೂನ ತಿಂಗಳು ಸುರುವಾಯಿತೆಂದರೆ, ಅವರ ದೃಷ್ಟಿಯೆಲ್ಲ ಆಕಾಶದ ಕಡೆಗೆ ಮಳೆಯ ಹಾದಿಯನ್ನು ಅವರು ಆತುರತೆಯಿಂದ ನೋಡುವರು ಅವರಂತೆ ಉಳಿದವರೂ ಮಳೆಯ ಬರುವಿಕೆಯನ್ನು ನಿರೀಕ್ಷಿಸುವರು ನಮ್ಮ ದೇಶದಲ್ಲಿ ಬೇಸಿಗೆಯ ಬೇಗೆಯು ಎಲ್ಲರನ್ನು ಬಳಲಿಸಿ ಬಿಡುವದು. ಜೂನ ತಿಂಗಳ ಮೊದಲನೇ ವಾರದಲ್ಲಿ ಮಳೆಗಾಳಿಗಳು ಬೀಸತೊಡಗುವವು 'ಇಂದು ಮೃಗ ಪ್ರವೇಶ'ವೆಂದು ಹಿರಿಯರು ಹೇಳುವದನ್ನು ಕೇಳಿರಬಹುದು ಅಂದ ಮಳೆರಾಯನು ನಮ್ಮ ನಾಡಿನಲ್ಲಿ ಕಾಲಿಡುವನು ಹವೆಯಲ್ಲಿ ಅಂದು ಒಮ್ಮೆಲೆ ಬದಲು ಎನಿಸುವದು, ಆಕಾಶದಲ್ಲಿ ಮೋಡ ಕವಿಯುವದು ತಂಪು ಗಾಳಿ ಬೀಸುವದು. ಈ ಅಕಸ್ಮಿತವಾದ ಹವೆಯ ವ್ಯತ್ಯಾಸದಿಂದ ನಿಮಗೆ ಬಾಧೆಯಾಗಬಾರದೆಂದು ಮನೆಯಲ್ಲಿ ಹಿರಿಯರು ನಿಮಗೆ 'ಇಂಗು-ಬೆಲ್ಲ' ತಿನ್ನಲು ಕೊಡುವರು ನಿಮಗೆ ನೆನಪುಂಟೆ? ಅಂದು ಸಾಮಾನ್ಯವಾಗಿ ಎಲ್ಲ ಕಡೆಗೂ ಗುಡುಗು ಮಿಂಚಿನ ಮಳೆಯಾಗುವದು ಮುಂದೆ ಸೆಪ್ಟೆಂಬರ ಕೊನೆಯವರೆಗೆ ಮಳೆರಾಯನು ಈ ನಾಡಿನಲ್ಲಿ ಸುಳಿದಾಡುವನು. ಮಳೆಯಾಗುವ ಈ ಅವಧಿಗೆ ನಾವು ಮಳೆಗಾಲವೆನ್ನುವೆವು.

ಅಕ್ಟೋಬರದಿಂದ ಹವೆಯಲ್ಲಿ ಮತ್ತೊಂದು ಬಗೆಯ ವ್ಯತ್ಯಾಸವು ತಲೆದೋರುವದು. ಹವೆಯು ತಂಪಾಗುವದು. ಬರಬರುತ್ತ ತಂಪು ಹೆಚ್ಚುವದು. ಚಳಿಯಿಂದ ಮೈ ನಡಗುವದು.. ಮನೆಯಲ್ಲಿ ಮಡಿಚಿಟ್ಟ ಉಣ್ಣೀ ಬಟ್ಟೆ, ಬೆಚ್ಚಗಿನ ಬಟ್ಟೆ ಎಲ್ಲವೂ ಬೇಕೆನಿಸುವದು ಊರಿಯ ಸುತ್ತಲೂ ಜನರು ಗುಂಪುಗುಂಪಾಗಿ ಕುಳಿತುಕಾಯಿಸಿ ಕೊಳ್ಳುವರು 'ಬನದ ಹುಣ್ಣಿಮೆಗೆ ಬನ ನಡುಗಿತು' ಎಂದು ಹಿರಿಯರು ಹೇಳುವದುಂಟು ಈ ಚಳಿಯೊಂದಿಗೆ ಹಗಲಿನ ಅವಧಿಯೂ ಕಡಿಮೆಯಾಗುವದು. ಸಂಜೆ 6 ಗಂಟೆಗೆ ನೀವು ಮನೆ ಮುಟ್ಟುವದರೊಳಗಾಗಿ ಕತ್ತಲೆಯಾಗಿ ಬಿಡುವದು. ಸಂಜೆ ಕಾಲದಲ್ಲಿ ಹೊರಗೆ ಆಡಲು ನಿಮಗೆ ಹೆಚ್ಚು ವೇಳೆ ದೊರೆಯುವದಿಲ್ಲ.

ನಸುಕಿನಲ್ಲಿ 6 ಗಂಟೆಯಾದರೂ ಇನ್ನೂ ಹೊರಗೆ ಕತ್ತಲೆ. ಬೆಳಕು ಹರಿದಿರುವದಿಲ್ಲ. ಅಂತೆಯೇ ಮುಂಜಾನೆ ಶಾಲೆಯಿದ್ದರೆ, ತಡಮಾಡಿ 8 ಗಂಟೆಗೆ ಪ್ರಾರಂಭಿಸುವರು. ಇದು ನಮಗೆ ಚಳಿಗಾಲ.

ಜನೇವರಿಯಿಂದ ಮಾರ್ಚ ತಿಂಗಳ ವರೆಗೆ ಬರಬರುತ್ತ ಚಳಿಯು ಕಡಿಮೆಯಾಗುವದು. ಬಿಸಿಲಿನ ತಾಪವೂ ಕಡಿಮೆ. ಒಳ್ಳೇ ಸೋಗಸಾದ, ಹಿತಕರವಾದ ಹವೆ. ಸುತ್ತಲಿನ ಸೃಷ್ಟಿಗೂ ಒಂದು ಹೊಸ ಜೀವಕಳೆ ಬರುವದು. ನೋಡಿದಲ್ಲೆಲ್ಲ ಭೂಮಿಗೆ ಹಸಿರು ಹಾಸಿಗೆ ಹೊಚ್ಚಿದಂತಿರುವದು. ಈ ಸಮಯದಲ್ಲಿ ಮಾವಿನ ಗಿಡಗಳ ಸೊಬಗನ್ನು ನೋಡಬೇಕು. ಮಾವಿನ ಗಿಡಗಳು ಹೂ ಬಿಡುವದು ಈಗೆಯೆ. 'ಇದುವರೆಗೆ ಮೌನವ್ರತಾಚಾರಿಯಾದ ಕೋಗಿಲೆ' ಇಂದು ಉಲಿಯತೊಡಗುವದು. ಕವಿಗಳು ಬಾಯಿತುಂಬ ಹೊಗಳುವ ಕಾಲವು ಇದೇ ಆಗಿರುವದು.

ಬೇಸಿಗೆ, ಮಳೆಗಾಲ, ಚಳಿಗಾಲ, ವಸಂತಕಾಲ ಇವು ನಮ್ಮ ವರುಷದ ನಾಲ್ಕುವಿಭಾಗಗಳು. ಈ ವಿಭಾಗಗಳಲ್ಲಿ ಮೇಲೆ ಹೇಳಿರುವ ವ್ಯತ್ಯಾಸಗಳು ಹವೆಯಲ್ಲಿ ನಿಶ್ಚಿತವಾಗಿ, ನಿಯಮಿತವಾಗಿ ಒದಗುವವು. ಗೊತ್ತುಪಡಿಸಿದಂತೆ ಹೀಗೆ ನಿಯತಕಾಲಿಕವಾಗಿ ಹವಾಮಾನವಲ್ಲಿ ಸಂಭವಿಸುವ ವ್ಯತ್ಯಾಸಗಳಿಗೆ ಋತುಮಾನಗಳೆನ್ನುವರು. ಮಳೆ ಎಂದೊ, ಚಳಿ ಎಂದೊ, ಬಿಸಿಲು ಎಂದೊ ಎಂದು ಭರವಸೆ ಇಲ್ಲದಿದ್ದರೆ ಭೂಮಿಯ ಮೇಲಿನ ಯಾವ ಜೀವಿಯೂ ಬದುಕುತ್ತಿರಲಿಲ್ಲ. ಇಂತಿಂತಹ ವೇಳೆಗೆ ಮಳೆಯಾಗುವ ಭರವಸೆಯಿಂದಲೆ ಕಾಯಿ ಹಣ್ಣಾಗುವದು. ನಮ್ಮ ಊಟ, ಉಡಿಗೆ, ಮನೆಗಳ ಸ್ವರೂಪ ಇವುಗಳೆಲ್ಲ ಋತುಮಾನಗಳ ಪ್ರಭಾವಕ್ಕೆ ಹೇಗೆ ಒಳಗಾಗಿರುವವೆಂಬುದನ್ನು ಹಿಂದೆ ಹೇಳಿದೆ. ನಮ್ಮ ಹಬ್ಬ, ಜಾತ್ರೆ–ಉತ್ಸವಗಳೂ ಕೂಡ ಋತು-ಮಾನಗಳಿಗೆ ಹೊಂದಿಕೊಂಡಿರುವವು.

ಒಂದು ಸಂಗತಿಯನ್ನು ಮಾತ್ರ ನೀವು ನೆನಪಿನಲ್ಲಿಡಬಹುದು. ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಈ ಋತುಮಾನಗಳು ಕಟ್ಟುನಿಟ್ಟಾಗಿ ನಡೆಯುವದಿಲ್ಲ. ಕೆಲವೊಂದು ಭಾಗದಲ್ಲಿ ಋತುಮಾನಗಳೇ ಇಲ್ಲವೆನ್ನುವಂತೆ, ಇಡೀ ವರುಷ ಒಂದೇ ಸಮನಾದ ಹವೆ, ಒಂದೇ ಸಮನಾದ ಮಳೆ ಇರುವದು. ಕೆಲವೊಂದು ಪ್ರದೇಶದಲ್ಲಿ ಚಳಿಗಾಲದಲ್ಲಿ ಮಳೆಯಾಗುವದು. ಋತುಮಾನಗಳ ವಿಷಯಕ್ಕೆ ಈ ಹೆಚ್ಚಿನ ವಿವರಗಳನ್ನು ಮೇಲಿನ ವರ್ಗಗಳಲ್ಲಿ ನೀವು ತಿಳಿದುಕೊಳ್ಳುವಿರಂತೆ.

ಆದರೆ ಋತುಮಾನಗಳು ಹೇಗೆ ಆಗುವವು ? ಎಂಬ ಬಗ್ಗೆ ನೀವು ಸುಲಭವಾಗಿ ತಿಳಿಯಬಹುದಾದ ಒಂದೆರಡು ಸಂಗತಿಗಳಿವೆ. ನೀವು ಚಂದ್ರ ಗ್ರಹಣವನ್ನು ನೋಡಿರುವಿರಿ. ಗ್ರಹಣ ಕಾಲದಲ್ಲಿ ಚಂದ್ರನ ಮೇಲೆ ಒಂದು ಕಪ್ಪು ಛಾಯೆಯು ಮೂಡಿರುವ ದಿಲ್ಲವೆ ? ಅದೇ ಪೃಥ್ವಿಯ ನೆರಳು. ಈ ನೆರಳು ಗೋಲಾಕಾರವಾಗಿರುವದು. ಸೂರ್ಯ ಚಂದ್ರರಂತೆ ಪೃಥ್ವಿಯೂ ಒಂದು ಗ್ರಹವು. ಈ ಗ್ರಹಗಳಂತೆ ಅದೂ ಒಂದು ಗೋಲವಾಗಿದೆ. ಗೋಲಾಕಾರವಾದ ಪೃಥ್ವಿಯ ಸಣ್ಣದೊಂದು ' ಮಾಡೆಲ್ಲು ' ಆಕೃತಿ, ನಿಮ್ಮ ಶಾಲೆಯಲ್ಲಿರುವ ' ಗ್ಲೋಬು '. ಈ ಗ್ರಹಗಳಿಗೆಲ್ಲ ಸೂರ್ಯನೇ ಮೂಲ ತೇಜೋರಾಶಿ, ಅಧಿದೈವ. ಈ ಗ್ರಹಗಳು ಬಗರಿಯಂತೆ ತಮ್ಮ ಸುತ್ತಲೂ ತಿರುಗುವವು. ತಮ್ಮ ತಮ್ಮ ದಾರಿಯಲ್ಲಿ, ಸೂರ್ಯನ ಸುತ್ತಲೂ ಪ್ರದಕ್ಷಿಣೆಯನ್ನು ಹಾಕುವವು. ಮುಂದಿನ ಆಕೃತಿಯಲ್ಲಿ ಪೃಥ್ವಿಯು ಸೂರ್ಯನ ಸುತ್ತಲೂ ಹೇಗೆ ತಿರುಗುವದೆಂಬುದನ್ನು ತೋರಿಸಿದೆ ( ಪುಟ 121 ನೋಡಿರಿ ).



ಗ್ಲೋಬು

ಈ ಆಕೃತಿಯ ಬಗ್ಗೆ ಚೆನ್ನಾಗಿ ತಿಳಿದುಕೊಳ್ಳಿರಿ. ಪೃಥ್ವಿಯು ಸೂರ್ಯನ ಸುತ್ತಲು ತಿರುಗುವಾಗ್ಗೆ, ಅದರ ಉತ್ತರ ತುದಿಯು ಲಂಬವಾಗಿರದೆ ಬಾಗಿ ನಿಂತಿರುವದನ್ನು ನೀವು ನಿರೀಕ್ಷಿಸಬೇಕು. ಆಕೃತಿಯಲ್ಲಿ ಪೃಥ್ವಿಯ 1 ನೆಯ ಸ್ಥಾನವನ್ನು ನೋಡಿರಿ. ಉತ್ತರ ತುದಿಯು ಸೂರ್ಯನ ಕಡೆಗೆ ಬಾಗಿದೆ. ಪೃಥ್ವಿಯು ಈ ಸ್ಥಾನದಲ್ಲಿರುವಾಗ್ಗೆ ಅದರ ಉತ್ತರಾರ್ಧದ ಭಾಗಕ್ಕೆ ಸೂರ್ಯನಿಂದ ಹೆಚ್ಚು ಉಷ್ಣತೆಯು ದೊರೆಯುವದು. ಆತನ ಪ್ರಕಾಶವೂ ಹೆಚ್ಚು ಕಾಲ ದೊರೆಯುವದು. ಆದುದರಿಂದ ಉತ್ತರಾರ್ಧದ ಜನರಿಗೆ ಈಗ್ಗೆ ಬೇಸಿಗೆಯ ಕಾಲ. ಬಿಸಲು ಹೆಚ್ಚು, ಹಗಲು ದೊಡ್ಡವುಗಳು. ದಕ್ಷಿಣ ತುದಿಯು ಹಿಂದೆ ಸರಿದು ಸೂರ್ಯನಿಂದ ದೂರವಾಗುವದರಿಂದ ದಕ್ಷಿಣಾರ್ಧದಲ್ಲಿ

ಚಳಿಗಾಲವಾಗುವದು. ಪೃಥ್ವಿಯು ಸೂರ್ಯನ ಸುತ್ತಲೂ ತನ್ನ ಪ್ರದಕ್ಷಿಣೆಯನ್ನು ಮುಂಬರಿಸುವದು. ಪೃಥ್ವಿಯು ಸೂರ್ಯನ ಸುತ್ತಲು ತಿರುಗು




ವಾಗ್ಗೆ ಅದರ ಉತ್ತರ ತುದಿಯು ಯಾವಾಗಲೂ ಅದೇ ದಿಕ್ಕನ್ನು ತೋರಿಸುವದು. ಪೃಥ್ವಿಯು ಹೊಯ್ದಾಡುತ್ತಿದ್ದರೆ ಕ್ಷಣದಲ್ಲಿ ಬೇಸಿಗೆ, ಕ್ಷಣದಲ್ಲಿ ಚಳಿಗಾಲ-ಹೀಗೆ ಅವ್ಯವಸ್ಥೆ, ಅನರ್ಥಗಳು ಉಂಟಾಗುತ್ತಿದ್ದವು. ಪೃಥ್ವಿಯು ಹೀಗೆ ಮಾಡುವದಿಲ್ಲ. ಅಂತೆಯೆ ಅದಕ್ಕೆ 'ಸ್ಥಿರಾ-ಅಚಲಾ' ಎಂದು ಹಿಂದಿನ ಹಿರಿಯರು ಕರೆದಿರುವರು. ಮಹಾಪುರುಷರ ಮನಸ್ಸು ಪೃಥ್ವಿಯಂತೆ ಸ್ಥಿರವಾಗಿದೆ ಎಂದೂ ಹೇಳುವರು.

ಆಕೃತಿಯಲ್ಲಿ ಪೃಥ್ವಿಯ ಎರಡನೆಯ ಸ್ಥಾನವನ್ನು ನೋಡಿರಿ. ಅದರ ಉತ್ತರ ತುದಿಯು ಇಲ್ಲಿಯೂ ಅದೇ ದಿಕ್ಕನ್ನು ತೋರಿಸುವದು. ಪೃಥ್ವಿಯು ಈ ಸ್ಥಾನದಲ್ಲಿರುವಾಗ್ಗೆ ಉತ್ತರಾರ್ಧಕ್ಕೆ 'ಶರತ್ಕಾಲ' ವೆಂದು ಹೇಳುವರು. ನಮಗೆ ಅದು ಮಳೆಗಾಲದ ಕೊನೆಯ ಭಾಗ ನದಿಗಳ ನೀರು ತಿಳಿಯಾಗಿರು. ವದು. 'ಹಿಟ್ಟು ಚೆಲ್ಲಿದ' ಬೆಳದಿಂಗಳು ಇದೇ ಕಾಲದಲ್ಲಿ ನಿಮಗೆ ದೊರೆಯುವದು. ಪೃಥ್ವಿಯು ಮಾರ್ಗಕ್ರಮಣ ಮಾಡುತ್ತಾ 3 ನೆಯ ಸ್ಥಾನಕ್ಕೆ ಬರುವದು. ಅದರ ಉತ್ತರ ತುದಿಯು ಹಿಂದಕ್ಕೆ ಸರಿದು ಸೂರ್ಯನಿಗೆ ದೂರವಾಗಿರುವದು. ಉತ್ತರಾರ್ಧಕ್ಕೆ ಸೂರ್ಯನ ಕಿರಣಗಳು ವಕ್ರವಾಗಿ

ಬೀಳುವವು. ಆಗ್ಗೆ ನಮಗೆ ಚಳಿಗಾಲ. ಚಳಿಯು ಹೆಚ್ಚುತ್ತ ಹೋಗು ವದು, ರಾತ್ರಿಗಳು ದೊಡ್ಡವುಗಳಾಗುವವು. ಪೃಥ್ವಿಯು ಇಲ್ಲಿಂದ ತನ್ನ ಮಾರ್ಗದಲ್ಲಿ ಮುಂದಕ್ಕೆ ಹೋದಂತೆ, ಉತ್ತರ ತುದಿಯು ಸೂರ್ಯನ ಕಡೆಗೆ ಹೆಚ್ಚು ಒಲಿಯಹತ್ತುವದು ಚಳಿಯು ಮಾಯವಾಗುವದು ಬಿಸಿಲು ಮಿತ ವಾಗಿರುವದು, ಹಿತವಾಗಿರುವದು ಇದೇ ಕವಿಗಳ ಮೆಚ್ಚಿನ ' ಮಧು-ಮಾಸ', ವಸಂತ ಋತು.

ಋತುಮಾನಗಳು ಹೀಗೆ ನಿಯಮಿತವಾಗಿ ಉಂಟಾಗಲು ನಾಲ್ಕು ಸಂಗತಿಗಳು ಕಾರಣವೆಂಬುದು ನಿಮಗೆ ಕಂಡು ಬಂದಿರಬಹುದು. ಪೃಥ್ವಿಯು ಗೋಲವಾಗಿರುವದು; ಸೂರ್ಯನ ಸುತ್ತಲೂ ಪ್ರದಕ್ಷಿಣೆ ಹಾಕುವದು; ಅದರ ಉತ್ತರದ ತುದಿಯು ಬಾಗಿರುವದು; ಹಾಗೂ ಉತ್ತರ ತುದಿಯು ಯಾವಾ ಗಲೂ ಒಂದೇ ದಿಕ್ಕನ್ನು ತೋರಿಸುವದು; —ಇವೇ ಆ ನಾಲ್ಕು ಸಂಗತಿಗಳು. ಇವುಗಳನ್ನು ನೀವು ಚೆನ್ನಾಗಿ ತಿಳಿದುಕೊಳ್ಳಬೇಕು, ನೆನಪಿನಲ್ಲಿ ಇಡಬೇಕು.

ಗೋಲಾಕಾರದ ಪೃಥ್ವಿಯ ಒಂದು ಸಣ್ಣ ಮಾದರಿಯೆ ನಿಮ್ಮ ಶಾಲೆ ಯಲ್ಲಿರುವ 'ಗ್ಲೋಬು' ಎಂಬುದು ನಿಮಗೆ ಗೊತ್ತಾಗಿದೆ. ಈ ಗ್ಲೋಬಿನ ಮೇಲಿರುವ ಬಣ್ಣಬಣ್ಣದ ಚಿತ್ರಗಳು ನಮ್ಮ ಜಗತ್ತಿನ ಬೇರೆ ಬೇರೆ ಭಾಗಗಳ ನಕಾಶಗಳು. ನಿಮ್ಮ ವರ್ಗದ ಕೋಣೆ, ನಿಮ್ಮ ತಾಲೂಕು, ಜಿಲ್ಲೆ, ಹಾಗೂ ರಾಜ್ಯಗಳ ನಕಾಶಗಳನ್ನು ನೀವು ನೋಡಿರುವಿರಿ. ಇಲ್ಲಿ ನೀವು ಕಾಣುವದು ಭೂಖಂಡಗಳ ನಕಾಶಗಳು, ನಮ್ಮ ಭಾರತವು ಏಶಿಯಾಖಂಡದಲ್ಲಿದೆ. ಜಗತ್ತಿನ ಮಾನದಿಂದ ನೋಡಿದರೆ, ಗ್ಲೋಬಿನಲ್ಲಿ ನಮ್ಮ ಭಾರತವು ಬಹಳೇ ಚಿಕ್ಕ ದಾಗಿ ತೋರುವದಲ್ಲವೆ? ನಮ್ಮ ಮೈಸೂರು ರಾಜ್ಯವನ್ನು ಇದರಲ್ಲಿ ನೀವು ಕಾಣಲಾರಿರಿ

ಒಂದು ಭೂಭಾಗವನ್ನು ಒಂದು ಪ್ರಮಾಣಕ್ಕೆ ಸರಿಯಾಗಿ ಹೀಗೆ ರೇಖೆಗಳಲ್ಲಿ ತೋರಿಸುವ ಚಿತ್ರವೇ 'ನಕಾಶ'. ನಿಮ್ಮ ವರ್ಗದ ಕೋಣೆಯ ಇಲ್ಲವೆ ಶಾಲೆಯ ನಕಾಶವನ್ನು ನೀವು ಹಿಂದಿನ ವರ್ಗಗಳಲ್ಲಿ ಇದೇ ರೀತಿ ಯಾಗಿ ತೆಗೆದಿರುವಿರಿ. ನಮಗೆ ಬೇಕಾಗಿರುವ ಒಂದು ಭೂಭಾಗ, ಇಲ್ಲವೆ ಒಂದು ಸ್ಥಳ, ನಕಾಶದಲ್ಲಿ ಇಂಥಲ್ಲಿಯೇ ಇದೆ ಎಂಬುದನ್ನು ಕೂಡಲೆ ಗುರುತಿಸಲು ಕೆಲವೊಂದು ರೇಖೆಗಳನ್ನು ಕಲ್ಪಿಸಿರುವರು. ನಿಮ್ಮ ಗ್ಲೋಬಿನ ಮೇಲೆ, ನಕಾಶದ ಮೇಲೆ ಇಂಥ ರೇಖೆಗಳು ನಿಮಗೆ ಕಾಣುವವು. ಕೆಲವು ರೇಖೆಗಳು 'ದಕ್ಷಿಣೋತ್ತರ'ವಾಗಿವೆ. ಇವುಗಳಿಗೆ ' ಅಕ್ಷಾಂಶ ' ಇಲ್ಲವೆ ಅಕ್ಷ

ವೃತ್ತಗಳೆನ್ನುವರು. ಕೆಲವು ರೇಖೆಗಳು ಪೂರ್ವ-ಪಶ್ಚಿಮವಾಗಿವೆ. ಇವುಗಳಿಗೆ 'ರೇಖಾಂಶ' ಇಲ್ಲವೆ ರೇಖಾವೃತ್ತಗಳೆನ್ನುವರು. ಅಕ್ಷಾಂಶ ರೇಖಾಂಶಗಳು ಒಂದನ್ನೊಂದು ಛೇದಿಸುವವು. ಜಾಳಿಗೆಯಂತೆ ಇವು ನಕಾಶದಲ್ಲಿ ಹರಡಿರುವವು. ಅಕ್ಷಾಂಶ ರೇಖಾಂಶಗಳು ನಗರದಲ್ಲಿಯ ಬೀದಿಗಳಿದ್ದಂತೆ; ಎರಡು ಬೀದಿಗಳು ಕೂಡುವಲ್ಲಿ ಒಂದು 'ಕೂಟ,' ಒಂದು 'ಚೌಕು' ಉಂಟಾಗುವದು. ನಕಾಶದಲ್ಲಿಯೂ ಇಂಥ ಕೂಟ, ಇಂಥ ಚೌಕುಗಳನ್ನು ನೀವು ಕಾಣುವಿರಿ. ಮನೆಯ ವಿಳಾಸ ಹೇಳುವಾಗ್ಗೆ ಇಂಥ ಕೂಟ ಇಂಥ ಚೌಕಿನಲ್ಲಿ ಅದೆ ಎಂದು ಹೇಳುವೆವು. ಅಂದರೆ ಆ ಮನೆಯನ್ನು ಕೂಡಲೆ ಗೊತ್ತು ಹಚ್ಚಬಹುದು ನಕಾಶದಲ್ಲಿ ಒಂದು ಸ್ಥಾನವನ್ನು ಗೊತ್ತುಹಚ್ಚಲೂ ಕೂಡ ಇದೇ ರೀತಿಯನ್ನು ಅನುಸರಿಸುವೆವು. 15 ನೆಯ ಉತ್ತರದ ಅಕ್ಷಾಂಶವು 73 ನೆಯ ಪೂರ್ವರೇಖಾಂಶವನ್ನು ಸಂಧಿಸುವಲ್ಲಿ ಮುಂಬಯಿ ನಗರವಿದೆ ಎಂದು ತಿಳಿದರೆ ಭಾರತದ ನಕಾಶದಲ್ಲಿ ನೀವು ಅದನ್ನು ಕೂಡಲೆ ಗುರುತಿಸುವಿರಿ. ನಮ್ಮ ಮೈಸೂರು ರಾಜ್ಯವು ಸುಮಾರು $11\frac{1}{2}$ ಉತ್ತರ ಅಕ್ಷಾಂಶದಿಂದ 19 ಉತ್ತರ ಅಕ್ಷಾಂಶಗಳಲ್ಲಿ ದಕ್ಷಿಣೋತ್ತರವಾಗಿ ನೆಲೆಸಿದೆ. 74 ಪೂರ್ವ ರೇಖಾಂಶದಿಂದ $78\frac{1}{2}$ ಪೂರ್ವ ರೇಖಾಂಶಗಳಲ್ಲಿ ಪೂರ್ವ ಪಶ್ಚಿಮವಾಗಿ ಪಸರಿಸಿದೆ. ನಮ್ಮ ರಾಜ್ಯಧಾನಿಯಾದ ಬೆಂಗಳೂರು ಸುಮಾರು 13 ಉತ್ತರ ಅಕ್ಷಾಂಶ, ಹಾಗೂ $77\frac{1}{2}$ ಪೂರ್ವ ರೇಖಾಂಶಗಳು ಕೂಡುವಲ್ಲಿದೆ ನಕಾಶದಲ್ಲಿ ಅದನ್ನು ಸುಲಭವಾಗಿ ಗುರುತಿಸಬಹುದು.

ದಿಕ್ಕುಗಳ ಸಹಾಯದಿಂದಲೂ ನಾವು ಸ್ಥಳಗಳನ್ನು ಗುರುತಿಸುವೆವು. ಶಾಲೆಯ ಬಾಗಿಲು ಪೂರ್ವಕ್ಕಿದೆ, ಆಟದ ಬಯಲು ಉತ್ತರಕ್ಕಿದೆ ಎಂದು ನಾವು ಹೇಳುವೆವು. ಹೊರಗಿನ ಬಯಲಿನಲ್ಲಿ ದಿಕ್ಕುಗಳನ್ನು ತಿಳಿದುಕೊಳ್ಳಲು ಸೂರ್ಯನು ನಮಗೆ ಸಹಾಯ ಮಾಡುವನು. ಆತನು ಮೂಡುವ ದಿಕ್ಕು ಪೂರ್ವ, ಮುಳುಗುವ ದಿಕ್ಕು ಪಶ್ಚಿಮ. ಪೂರ್ವ-ಪಶ್ಚಿಮ ದಿಕ್ಕುಗಳು ಗೊತ್ತಾದರೆ ಉತ್ತರ ದಕ್ಷಿಣ ದಿಕ್ಕುಗಳು ಸುಲಭವಾಗಿ ತಿಳಿಯುವವು. ಎರಡು ದಿಕ್ಕುಗಳ ನಡುವಿನ ಮೂಲೆಗಳಿಗೂ ಪ್ರತ್ಯೇಕವಾದ ಹೆಸರುಗಳಿರುವವು. ಪೂರ್ವ–ದಕ್ಷಿಣಗಳ ನಡುವಿನ ಮೂಲೆ ಆಗ್ನೇಯ. ಪೂರ್ವ-ಉತ್ತರಗಳ ಮೂಲೆ ಈಶಾನ್ಯ



ನಕಾಶದ ದಿಕ್ಕುಗಳು

ಪಶ್ಚಿಮ-ದಕ್ಷಿಣಗಳ ನಡುವಿನ ಮೂಲೆ ನೈಋತ್ಯ. ಪಶ್ಚಿಮ-ಉತ್ತರಗಳ ನಡುವಿನ ಮೂಲೆ ವಾಯವ್ಯ.

ಸೂರ್ಯನಿಲ್ಲದ ಸಮಯದಲ್ಲಿ ದಿಕ್ಕುಗಳನ್ನು ಗುರುತಿಸಲು ಬೇರೊಂದು ಉಪಯುಕ್ತವಾದ ಸಾಧನವಿದೆ. ಅದಕ್ಕೆ 'ಹೋಕಾಯಂತ್ರ' ವೆನ್ನುವರು. ಈ ಯಂತ್ರದಲ್ಲಿಯ ಮುಳ್ಳು, ಯಾವಾಗಲೂ ಉತ್ತರ ದಿಕ್ಕನ್ನೇ ತೋರಿಸುವದು. ಇದರ ಸಹಾಯದಿಂದ ಎಲ್ಲ ದಿಕ್ಕುಗಳನ್ನೂ ಗುರುತಿಸಲು ಬರುವದು. ಸಾಗರಗಳಲ್ಲಿ ಸಂಚರಿಸುವ ನಾವಿಕರಿಗೆ, ಆಕಾಶದಲ್ಲಿ ಸಂಚರಿಸುವ ವೈಮಾನಿಕರಿಗೆ ಈ ಯಂತ್ರವು ಬಹಳೇ ಉಪಯುಕ್ತವಾಗಿರುವದು.




ಹೋಕಾ ಯಂತ್ರ

ನಕಾಶದಲ್ಲಿ ದಿಕ್ಕುಗಳನ್ನು ತೋರಿಸಲೂ ಒಂದು ಕ್ರಮವಿರುವದು. ನಕಾಶದ ಕಡೆಗೆ ನೀವು ಮೋರೆಮಾಡಿಕೊಂಡು ನಿಂತರೆ ಮೇಲ್ಭಾಗವೆ ಉತ್ತರ, ಕೆಳಭಾಗವೇ ದಕ್ಷಿಣ, ಬಲಭಾಗವೇ ಪೂರ್ವ, ಎಡಭಾಗವೇ ಪಶ್ಚಿಮ. ಮೈಸೂರು ರಾಜ್ಯದ ನಕಾಶದಲ್ಲಿ, ಮೈಸೂರು ದಕ್ಷಿಣ ತುದಿಯಂಚಿನಲ್ಲಿ, ಕಲಬುರ್ಗಿ ಉತ್ತರದ ತುದಿಯಂಚಿನಲ್ಲಿ, ಬೆಂಗಳೂರು ಪೂರ್ವದ ತುದಿಯಂಚಿನಲ್ಲಿ, ಮಂಗಳೂರು ಪಶ್ಚಿಮದ ತುದಿಯಂಚಿನಲ್ಲಿ ನಿಮಗೆ ಕಂಡುಬರುವವು. ನಮ್ಮ ರಾಜ್ಯದ ಪ್ರೇಕ್ಷಣೀಯ ಸ್ಥಳಗಳು, ಉದ್ಯೋಗದ

ನೆಲೆಸಿವೆ. ಇವುಗಳನ್ನು ಸಂಧಿಸುವ ಸಾರಿಗೆ–ಸಂಚಾರಗಳ ಸಾಧನಗಳಾದರೂ ಎಲ್ಲ ದಿಕ್ಕುಗಳಲ್ಲಿಯೂ ಜಾಳಿಗೆಯಂತೆ ಪಸರಿಸಿವೆ.

ನಮ್ಮ ರಾಜ್ಯದಲ್ಲಿ ಎಷ್ಟೊಂದು ಪ್ರೇಕ್ಷಣೀಯವಾದ ಸ್ಥಳಗಳಿವೆ. ವಿವಿಧವಾದ ಕಲೆ-ಕೈಗಾರಿಕೆಗಳ ಕೇಂದ್ರಗಳಿವೆ ಎಂಬುದನ್ನು ನೀವು ತಿಳಿದುಕೊಂಡಿರುವಿರಿ; ಆದಕ್ಕಾಗಿಯೆ ದೇಶದೇಶಗಳಿಂದ ಸಾವಿರಾರು ಸಂದರ್ಶಕರು ವರುಷವರುಷವೂ ಇಲ್ಲಿಗೆ ಬಂದು ಹೋಗುವರು. ನಿಮ್ಮ ಗುರುಗಳು ಇಂಥ ಸ್ಥಳಗಳಿಗೆ ನಿಮಗಾಗಿ ಪ್ರವಾಸಗಳನ್ನು ಏರ್ಪಡಿಸುವರು. ಪ್ರವಾಸವೆಂದರೆ ನಿಮಗೆ ಪ್ರೀತಿಯ ಸಂಗತಿ. ಆದರೆ ಇಂಥ ಪ್ರವಾಸಗಳಿಂದ ನೀವು

ಪೂರ್ಣ ಪ್ರಯೋಜನ ಪಡೆಯಬೇಕು. ಅದಕ್ಕಾಗಿ ಕೆಲವೊಂದು ಅಗತ್ಯದ ಸಂಗತಿಗಳನ್ನು ನೀವು ಲಕ್ಷ್ಯದಲ್ಲಿಡಬೇಕಾಗುವದು. ನೀವು ಪ್ರವಾಸಕ್ಕೆ ಹೋಗುವ ಊರಿನ ಬಗ್ಗೆ ಮೊದಲು ಶಕ್ಯವಿದ್ದಷ್ಟು ವಿವರಗಳನ್ನು ತಿಳಿದುಕೊಳ್ಳ ಬೇಕು. ಐತಿಹಾಸಿಕ ಸ್ಥಳವಾಗಿದ್ದರೆ ಅದರ ಇತಿಹಾಸವೇನು ? ನೀವು ಓದುವ ಚರಿತ್ರೆಗೆ ಅದು ಹೇಗೆ ಸಂಬಂಧಿಸಿರುವದು ? ಉದ್ಯೋಗದ ಕೇಂದ್ರವಾಗಿದ್ದರೆ, ಅಲ್ಲಿಯ ಆ ಉದ್ಯೋಗವು ನಡೆಯಲು ಭೂಗೋಲದ ಸಂಗತಿಗಳೇನು ? ಅಲ್ಲಿಯ ಕಾರಖಾನೆಗಳಲ್ಲಿ ಕೆಲಸ ಮಾಡುವವರ ಜೀವನವೆಂತಹದು ? ಇವೇ ಮುಂತಾದ ಸಂಗತಿಗಳನ್ನು ನೀವು ಗುರುಗಳಿಂದ ಕೇಳಿ ಹಾಗೂ ನಿರೀಕ್ಷಿಸಿ ತಿಳಿದುಕೊಳ್ಳ ಬೇಕು. ಬೆಂಗಳೂರಿನಂಥ ದೊಡ್ಡ ನಗರವಾಗಿದ್ದರೆ, ಆ ಊರಿನ ಪ್ರತ್ಯೇಕ ವಾದ ನಕಾಶ ದೊರೆಯುವದು; ಆ ನಕಾಶದ ಸಹಾಯದಿಂದ ಅಲ್ಲಿಯ ಪ್ರೇಕ್ಷ ಣೀಯವಾದ ಸ್ಥಳಗಳನ್ನು ಕಂಡುಕೊಳ್ಳಲು ಯತ್ನಿಸಬೇಕು. ನಿಮ್ಮ ಪ್ರವಾ ಸದ ದಿನಚರಿಯನ್ನು ತಪ್ಪದೆ ಬರೆದಿಡಬೇಕು. ಇದಲ್ಲದೆ ಅಲ್ಲಲ್ಲಿ ದೊರೆಯುವ ಅಪರೂಪ ವಸ್ತುಗಳನ್ನು ಸಂಗ್ರಹಿಸಬೇಕು.

ಅಪರೂಪ ವಸ್ತುಗಳನ್ನು ಸಂಗ್ರಹಿಸಬೇಕೆಂದು ಹಿಂದೆ ಹೇಳಿದೆಯ ಲ್ಲವೆ ? ನಿಮಗೂ ಇದು ಅಪರಿಚಿತ ಕೆಲಸವಾಗಿಲ್ಲ. ತುಸು ಚಿಕ್ಕವ ರಿದ್ದಾಗ ನಿಮ್ಮ ಕಿಸೆ ( ಜೇಬು ) ಯಲ್ಲಿ ಆಕರ್ಷಕ ವಸ್ತುಗಳನ್ನು ತುಂಬಿ ಕೊಳ್ಳುತ್ತಿದ್ದಿರಿ. ಇದೇ ರೀತಿಯಾಗಿ ನಿಮ್ಮ ಶಾಲೆಯ ವಸ್ತುಸಂಗ್ರಹಾ ಲಯವನ್ನು ನೀವು ನಿರ್ಮಿಸಬೇಕು. ನೀವು ಇರುವಲ್ಲಿಯೆ ಕೈಚಾಚಿದರೆ ನಿಮಗೆ ಎಷ್ಟೊಂದು ಕಲ್ಲಿನ ಪ್ರಕಾರಗಳು ದೊರೆಯುವವು ! ಉಸುಕಿನ ಕಲ್ಲು, ಬೆಣಚಕಲ್ಲು. ರಂಗೋಲಿ ಹರಳು. ಬಣ್ಣಬಣ್ಣದ ಬಳಪದಕಲ್ಲು ಇವು ಎಲ್ಲ ಕಡೆಗೂ ದೊರೆಯುವವು. ಲೋಹಗಳಿಂದ ಕೂಡಿದ ಬಗೆ ಬಗೆಯ ಅದಿರುಗಳನ್ನು ನೀವು ಕಲೆಹಾಕಬಹುದು. ತೇಗು, ಶಿಶುವು, ಶ್ರೀಗಂಧ, ಮತ್ತಿ, ಹೊನ್ನಿ ಮೊದಲಾದ ಕಟ್ಟಿಗೆಯ ತುಣುಕುಗಳನ್ನು ಕೂಡಿಸಿ ಇಡಬಹುದು. ಪಕ್ಷಿಗಳ ಗೂಡುಗಳು, ಎಲೆ ಬೇರುಗಳ ಪ್ರಕಾರ ಗಳು, ಶಕ್ಯವಿದ್ದರೆ ಹಳೆ-ಹೊಸ-ನಾಣ್ಯಗಳು—ಇವೇ ಮುಂತಾದವುಗಳನ್ನು ಸಂಗ್ರಹಿಸಿ ಶಾಲೆಯ ವಸ್ತು–ಸಂಗ್ರಹಾಲಯದಲ್ಲಿ ನೀವು ಅಂದವಾಗಿ ಇಡ ಬಹುದು. ಇದರಿಂದ ಮುಂದೆ ಬರುವ ವಿದ್ಯಾರ್ಥಿಗಳಿಗೂ ನೀವು ದಾರಿ ಹಾಕಿ ಕೊಟ್ಟಂತಾಗುವದು. ನಿಮ್ಮ ಶಾಲೆಯ ವಸ್ತುಸಂಗ್ರಹಾಲಯವು

ವರುವರುಷವೂ ಬೆಳೆಯುತ್ತ ಹೋಗುವದು.

ಈ ವಸ್ತುಸಂಗ್ರಹ ಕಾರ್ಯವಿರಲಿ, ನೀವು ಪ್ರತ್ಯೇಕವಾಗಿ ಮಾಡಬಹುದಾದ ಇನ್ನೊಂದು ಒಳ್ಳೇ ಕೆಲಸವಿದೆ ನೀವು ಆಕರ್ಷಕವಾದ ' ಚಿತ್ರಸಂಗ್ರಹ ' ವನ್ನು ಸಂಪಾದಿಸಬಹುದು. ಇದಕ್ಕೆ ' ಆಲ್ಬಮ್ ' ಎನ್ನುವರು. ನಿಮ್ಮ ಚಿತ್ರಸಂಗ್ರಹವಾದ ಪುಸ್ತಿಕೆಯಲ್ಲಿ ನಾಲ್ಕು ವಿಭಾಗಗಳಿರಬಹುದು : ಇತಿಹಾಸಕ್ಕೆ ಸಂಬಂಧಿಸಿದ ಚಿತ್ರಗಳು; ಭೂಗೋಲದ ದೃಶ್ಯಗಳು ; ವಿಜ್ಞಾನದ ವೈಚಿತ್ರ್ಯಗಳು ಹಾಗೂ ಸಾಮಾನ್ಯ ಚಿತ್ರಗಳು. ಕಡ್ಡೀ ( ಬೆಂಕೀ ) ಪೆಟ್ಟಿಗೆಯ ಮೇಲೆ ಬಂದಿರುವ ಚಿತ್ರಗಳನ್ನೆ ಕೂಡಿಸಿದರೆ ನೂರೆಂಟು ಚಿತ್ರಗಳಾಗಬಹುದು. ನಮ್ಮಲ್ಲಿ ಎಷ್ಟೋ ವಾರ ಹಾಗೂ ಮಾಸ ಪತ್ರಿಕೆಗಳು 'ಸಚಿತ್ರ'ವಾಗಿರುವವು. ಅವುಗಳ 'ವಿಶೇಷ ಸಂಚಿಕೆಗಳು' ಹಾಗೂ 'ಮೈಸೂರ ವಾಣಿ'ಯಂಥ ಸರಕಾರಿ ಪತ್ರಿಕೆಗಳಲ್ಲಿ ಉಪಯುಕ್ತವಾದ, ಉದ್ಬೋಧಕವಾದ ಅನೇಕ ಚಿತ್ರಗಳು ಬರುವವು. ಹಿಂದಿನ ಸಂಚಿಕೆಗಳನ್ನು ಸಂಪಾದಿಸಿ, ಒಳ್ಳೇ ಚಿತ್ರಗಳನ್ನು ನೀವು ಆಯ್ದುಕೊಳ್ಳಬೇಕು ವಿವಿಧ ರಾಷ್ಟ್ರಗಳ ಧ್ವಜ ಚಿನ್ಹಗಳಿಗೂ, ಅಂಚೆ ತಿಕೀಟುಗಳಿಗೂ, ನಿಮ್ಮ ಚಿತ್ರಸಂಗ್ರಹದಲ್ಲಿ ನೀವು ಸ್ಥಾನ ಕೊಡಬಹುದು.

ಭೂಗೋಲವೆಂದರೆ ಕೇವಲ ' ಗಿಳಿ ಓದು ', ಬೆಟ್ಟ ಹೊಳೆಗಳ ಯಾದಿಯನ್ನು ಕಂಠಪಾಠ ಮಾಡುವದು ಎನ್ನುವ ಭ್ರಮೆಯು ನಿಮ್ಮಿಂದ ದೂರವಾಗಬೇಕು. ಈ ವಿಷಯದ ಅಭ್ಯಾಸದಿಂದ ನಿಮ್ಮ ನಿರೀಕ್ಷಣೆಯು ಸೂಕ್ಷ್ಮವಾಗಬೇಕು. ಅನುಭವಸಂಪತ್ತಿಯು ವಿವಿಧವಾಗಬೇಕು. ನೀರಿನ ಮಡುವಿನಲ್ಲಿ ಒಂದು ಹರಳು ಚೆಲ್ಲಿದರೆ ತರಂಗಗಳು ಉಂಟಾಗುವದನ್ನು ನೀವು ನೋಡುವಿರಿ. ಈ ತರಂಗಗಳು ಒಂದಕ್ಕಿಂತ ಒಂದು ದೊಡ್ಡವುಗಳಾಗುತ್ತ ಹೋಗುವವು. ನಿಮ್ಮ ಜೀವನವಾದರೂ ಇದೇ ರೀತಿಯಾಗಿ ನಿರೀಕ್ಷಣೆಯಿಂದ, ಅನುಭವದಿಂಡ, ಅಧ್ಯಯನದಿಂದ ವಿವಿಧ ಚಟುವಟಿಕೆಗಳಿಂದ ಹೆಚ್ಚೆಚ್ಚು ವಿಶಾಲವಾಗಬೇಕು, ಸುಸಂಪನ್ನವಾಗಬೇಕು. ಇದನ್ನು ಸಾಧಿಸಲು ಈ ಪುಸ್ತಕವು ನಿಮಗೆ ನೆರವು ನೀಡುವದು, ಮಾರ್ಗದರ್ಶನ ಮಾಡುವದು.

## ಅಭ್ಯಸನಗಳು

1. ಹವಾಮಾನದಲ್ಲಿ ವ್ಯತ್ಯಾಸಗಳನ್ನುಂಟುಮಾಡುವ ಸ್ಥಾನಿಕ ಕಾರಣಗಳು ಯಾವು ?
2. ಋತುಮಾನಗಳೆಂದರೇನು ? ಅವು ಹೇಗೆ ಉಂಟಾಗುವವು ?

3. ಭೌಗೋಲಿಕ ಕಾರಣಗಳನ್ನು ಕೊಡಿರಿ.

(ಅ) ಉತ್ತರಾರ್ಧದಲ್ಲಿ ಬೇಸಿಗೆಯಿದ್ದಾಗ್ಗೆ, ದಕ್ಷಿಣಾರ್ಧದಲ್ಲಿ ಚಳಿಗಾಲವಿರುವದು.

(ಬ) ಬೇಸಿಗೆಯಲ್ಲಿ ಸಂಜೆಗೆ ಹೆಚ್ಚು ಕಾಲ ನೀವು ಹೊರಗೆ ಆಡಬಹುದು.

(ಕ) ಡಿಸೆಂಬರ ತಿಂಗಳಿನಲ್ಲಿ ರಾತ್ರಿಯು ದೊಡ್ಡದಾಗಿರುವದು.

4. ಪೃಥ್ವಿಗೆ 'ಸ್ಥಿರಾ-ಅಚಲಾ' ಎಂದು ನಮ್ಮ ಹಿರಿಯರು ಏಕೆ ಹೇಳಿರಬಹುದು ?

5. ನೀವು ಇರುವ ಊರಿನಿಂದ ಬೆಂಗಳೂರಿಗೆ ಹೋಗುವ ಲೈನ ಇಲ್ಲವೆ ರೇಲು ಮಾರ್ಗವನ್ನು ಮೈಸೂರಿನ ಬಾಹ್ಯರೇಷೆಯ ನಕಾಶದಲ್ಲಿ ತೋರಿಸಿರಿ. ಅದು ಯಾವ ದಿಕ್ಕಿನಲ್ಲಿ ಸಾಗಿದೆ ? ಎಲ್ಲಿ ದಿಕ್ಕು ಬದಲಿಸುವದು ?

6. ಶಾಲೆಯ ಪ್ರವಾಸಕ್ಕೆ ಹೊರಡುವ ಮೊದಲು ಯಾವ ಸಿದ್ಧತೆಯನ್ನು ನಾವು ಮಾಡಿಕೊಳ್ಳಬೇಕು ?

7. ಶಾಲೆಯ ವಸ್ತುಸಂಗ್ರಹಾಲಯವನ್ನು ನೀವು ಹೇಗೆ ಬೆಳೆಸಬಹುದು ?

8. ಚಿತ್ರಗಳ ಸಂಗ್ರಹವನ್ನು ಸುಲಭವಾಗಿ ನೀವು ಹೇಗೆ ಸಂಪಾದಿಸಬಲ್ಲಿರಿ ?

# ವಿಭಾಗ ೨–ಜೀವನ ಚರಿತ್ರೆಗಳು

ಈ ರಾಜ್ಯದ ಯಾವ ಭಾಗದಲ್ಲಿಯೇ ನೀವು ಸಂಚರಿಸಿರಿ. ಅಲ್ಲಲ್ಲಿಯ ಒಂದು ಕೆರೆ, ಒಂದು ಕೋಟೆ, ಒಂದು ಬಂಡೆಗಲ್ಲು ಇತಿಹಾಸದ ಒಂದೊಂದು ಸಂಗತಿಯನ್ನು ಸಾರಿ ಹೇಳುವವು. ಇಗೊ, ಇದು ನಿಜಗಲ್ಲು. ಇಲ್ಲಿಯ ರಾಣಿಯೊಬ್ಬಳು ತನ್ನ ಚಿಕ್ಕ ರಾಜ್ಯದ ಗೌರವಕ್ಕಾಗಿ ಬಲಿದಾನ ಮಾಡಿದಳು. ಇಕೊ, ಇದು ಶ್ರೀರಂಗಪಟ್ಟಣ. ಇಲ್ಲಿಯೆ 'ಮೈಸೂರಿನ ಹುಲಿಯು' ವಿದೇಶದ ಶತ್ರುಗಳೊಡನೆ ಹೋರಾಡುತ್ತ ಪ್ರಾಣ ಬಿಟ್ಟಿತು. ಇದು ರಕ್ಕಸತಂಗಡಿಗೆ. ಇಲ್ಲಿಯೆ ಎಂದೂ ಮರೆಯಲಾಗದ ಸಾಮ್ರಾಜ್ಯ ಕೊನೆಗಂಡಿತು. ಇದು ಶೃಂಗೇರಿ. ಆದ್ಯ ಶಂಕರಾಚಾರ್ಯರು ಪೂಜಿಸಿದ ಶಾರದಾಂಬಾ ಇಲ್ಲಿಯೆ ಇರುವಳು. ಇದು ಕಲ್ಯಾಣ. ಇದನ್ನೇ ಬಸವಣ್ಣನವರು ಕೈಲಾಸಕ್ಕೆ ಸಮವಾಗಿ ಮಾಡಿದರು. ಇದು ಉಡುಪಿ. ಇಲ್ಲಿಯೆ ಶ್ರೀ ಮಧ್ವಮುನಿಗಳು ಕೃಷ್ಣಮಂದಿರವನ್ನು ಸ್ಥಾಪಿಸಿದರು. ಇದು ಕಿತ್ತೂರು. ಇಲ್ಲಿಯೆ ಚೆನ್ನಮ್ಮ ರಾಣಿಯು ವೀರ ಮಹಿಳೆಯಾಗಿ ಮಿಂಚಿದಳು. ಒಂದೇ, ಎರಡೇ, ಲೆಕ್ಕವಿಲ್ಲದಷ್ಟು ಇಂಥ ಸ್ಥಳಗಳು ನಮ್ಮ ನಾಡಿನಲ್ಲಿ ನೆಲೆಸಿರುವವು. ಇವುಗಳನ್ನು ನೋಡ ಹೋದಾಗ್ಗೆ ನಮ್ಮ ಮೈ ನವಿರೇಳುವದು. ಕನ್ನಡ ನಾಡಿನ ಬಗ್ಗೆ ನಮ್ಮ ಆದರ ಅಭಿಮಾನಗಳು ತುಂಬಿ ಬರುವವು.

ನಮ್ಮ ಮಾತೃಭೂಮಿಯಾದ ಭಾರತವೂ ಜಗದ್ವಂದ್ಯರಾದ ಅನೇಕ ಮಹಾಪುರುಷರಿಗೆ ಜನ್ಮವಿತ್ತಿದೆ. ಇವರಲ್ಲಿ ಬುದ್ಧ, ಮಹಾವೀರರು ಶಾಂತಿ ಅಹಿಂಸೆಗಳ ದಿವ್ಯ ಸಂದೇಶವನ್ನು ನೀಡಿರುವರು. ಶ್ರೀ ರಾಮಕೃಷ್ಣ ಪರಮಹಂಸರು ಜಗತ್ತಿಗೆ ಆರ್ಯಧರ್ಮದ ಮಹತಿಯನ್ನು ಎತ್ತಿ ತೋರಿಸಿದವರು. ಹಾನಿಕರವಾದ ರೂಢಿಸಂಪ್ರದಾಯಗಳನ್ನು ನಿವಾರಿಸಿ ಸಮಾಜ ಸುಧಾರಣೆ ಮಾಡಲು ಯತ್ನಿಸಿದವರು ಕೆಲವರು. ದಾಸ್ಯದ ಬಂಧನದಿಂದ ಭಾರತದ ವಿಮೋಚನೆ ಮಾಡಿದ ಸ್ವಾತಂತ್ರ್ಯ ವೀರರು ಕೆಲವರು. ವಾಸ್ತು ಶಿಲ್ಪದ ತಮ್ಮ ಪ್ರತಿಭೆಯಿಂದ ಇಲ್ಲಿಯ ನದಿಗಳನ್ನು ಬಂಧಿಸಿ ಭಾರತವನ್ನು ಸಮೃದ್ಧ ರಾಷ್ಟ್ರವನ್ನಾಗಿ ಮಾಡಿದವರು ಕೆಲವರು.

ನವ ಭಾರತವನ್ನು ನಿರ್ಮಿಸಲು ತಮ್ಮ ಜೀವನವನ್ನೇ ಮುಡಿಪಿಟ್ಟ ಕೆಲವು ಮಹಾಪುರುಷರ ಚರಿತ್ರೆಗಳನ್ನು ಇಲ್ಲಿ ಕೊಟ್ಟಿದೆ. ಅವರ ಮಹಾಕೃತಿಗಳ ಬಗ್ಗೆ ನೀವು ತುಸುವಾದರೂ ತಿಳಿದುಕೊಳ್ಳಬೇಕು. ಅವರಿಗೆ ನಿಮ್ಮ ಗೌರವ-ಕೃತಜ್ಞತೆಗಳನ್ನು ಅರ್ಪಿಸಬೇಕು.

# 1. ಮಹಾವೀರ ವರ್ಧಮಾನ

ನಮ್ಮ ದೇಶದಲ್ಲಿ ಬಹುಕಾಲದಿಂದ ವೈದಿಕ, ಜೈನ, ಬೌದ್ಧ ಧರ್ಮಗಳ ಜನರು ಒಂದೆಡೆಗೆ ಬಾಳಿ ಬದುಕಿದ್ದಾರೆ. ವರ್ಧಮಾನ ಗುರುವಿನ ಉಪದೇಶದಂತೆ ಜೈನರು ನಡೆದುಕೊಳ್ಳುತ್ತಾರೆ. ದ್ವೇಷ ಮೊದಲಾದ ಮನಸ್ಸಿನ ಎಲ್ಲ ದುಷ್ಟ ಪ್ರವೃತ್ತಿಗಳೊಡನೆ ವೀರನಂತೆ ಹೋರಾಡಿ ಅವನ್ನು ವರ್ಧಮಾನನು ಜಯಿಸಿದ್ದನು. ಅಂತೆಯೇ ಅವನಿಗೆ 'ಮಹಾವೀರ' ನೆಂದೂ ಹೆಸರು ಇದೆ.



ಮಹಾವೀರ ವರ್ಧಮಾನ

ವರ್ಧಮಾನನ ತಂದೆಯ ಹೆಸರು ಸಿದ್ಧಾರ್ಥ; ತಾಯಿಯ ಹೆಸರು ತ್ರಿಶಲಾ, ಉತ್ತರಭಾರತದಲ್ಲಿ ಈಗಿನ ಬಿಹಾರ ರಾಜ್ಯವಿರುವಲ್ಲಿ ವೈಶಾಲಿ ಎಂಬ ಸ್ಥಳದ ಹತ್ತಿರ ಕುಂಡನಗ್ರಾಮ ಎಂಬ ಹೆಸರಿನ ಒಂದು ಊರು ಇತ್ತು. ಸಿದ್ಧಾರ್ಥನೆಂಬವನು ಅಲ್ಲಿ ರಾಜನಾಗಿದ್ದನು. ಇಂದಿಗೆ 2500 ವರುಷಗಳ ಪೂರ್ವದಲ್ಲಿ ಚೈತ್ರ ಶುದ್ಧ ತ್ರಯೋದಶಿಯ ದಿನ ವರ್ಧಮಾನನು ಜನಿಸಿದನು.

## ಬಾಲ್ಯ

ಚಿಕ್ಕಂದಿನಿಂದಲೇ ವರ್ಧಮಾನನು ತೇಜಸ್ವಿಯಾಗಿದ್ದನು. ಅವನ ಕಣ್ಣುಗಳಲ್ಲಿ ಕಾಂತಿಯಿತ್ತು. ಮುಖದಲ್ಲಿ ತೇಜವಿತ್ತು. ಯಾವಾಗಲೂ ನಗು-ಮುಖ. ಹಾವು-ಹುಲಿಗಳನ್ನು ಕಂಡರೂ ಹೆದರುತ್ತಿದ್ದಿಲ್ಲ. ಒಂದು ದಿನ ಅತಿ ಸಮೀಪದಲ್ಲಿಯೇ ಹಾವು ಹರಿದು ಹೋದರೂ ಅವನಿಗೆ ಯಾವ ಅಪಾಯವೂ ಆಗಲಿಲ್ಲ.

## ವನಕ್ಕೆ ಹೋಗಿ ಜ್ಞಾನಿಯಾದುದು

ಮುಂದೆ ಆತನು ದೊಡ್ಡವನಾದನು. ತಾನೊಬ್ಬ ಸಾಧುವಾಗಬೇಕೆಂಬ ವಿಚಾರವು ಅವನ ತಲೆಯಲ್ಲಿ ಯಾವಾಗಲೂ ಸುಳಿಯುತ್ತಿತ್ತು.

ತ್ರಾಯಿಯು ಮಾತನ್ನು ಮೀರಲಾರದೆ ಯಶೋದೆಯೆಂಬ ಕುವರಿಯು ನ್ನೇನೋ ಮದುವೆ ಆದನು. ಈ ದಂಪತಿಗಳಿಗೆ ಕೆಲವು ವರ್ಷಗಳಲ್ಲಿ ಒಂದು ಹೆಣ್ಣು ಮಗುವೂ ಹುಟ್ಟಿತು. ಆದರೆ ಬರಬರುತ್ತ ಸಂಸಾರದಲ್ಲಿ ಆತನ ಲಕ್ಷ್ಯವು ಉಳಿಯಲಿಲ್ಲ. ಆತನು ಇಪ್ಪತ್ತೆಂಟು ವರ್ಷದನಿರುವಾಗ ತಾಯಿ ತಂದೆಗಳು ತೀರಿಕೊಂಡರು. ಆಗಂತ ಅವನಿಗೆ ಅತಿಶಯ ದುಃಖವೆನಿಸಿತು. ಅರಮನೆಯಲ್ಲಿ ಇದ್ದೂ ಅವನು ಉಪವಾಸ ಮೊದಲಾದ ವ್ರತಗಳನ್ನು ಕೈಕೊಂಡನು. ದಾನ ಧರ್ಮಗಳನ್ನು ಮಾಡತೊಡಗಿದನು. ಕೊನೆಗೆ ತನ್ನ ಮೂವತ್ತನೆಯ ವಯಸ್ಸಿನಲ್ಲಿ ಮನೆಯನ್ನು ಬಿಟ್ಟುಕೊಟ್ಟು ವನಕ್ಕೆ ಹೊರಟು ಅಲ್ಲಿಯೇ ಇರತೊಡಗಿದನು. 12 ವರುಷ ಘೋರ ತಪಸ್ಸು ಮಾಡಿ ಜ್ಞಾನಿಯಾದನು. ಎಲ್ಲ ಇಂದ್ರಿಯಗಳನ್ನು ಗೆದ್ದು 'ಜಿನ' ನಾದನು.

### ಜ್ಞಾನ ಪ್ರಸಾರದ ಕಾರ್ಯ.

ಆ ಬಳಿಕ ಮಹಾವೀರ ವರ್ಧಮಾನಸ್ವಾಮಿಯು ವನದಿಂದ ಹಿಂತಿರುಗಿ ಬಂದನು. ದೇಶವನ್ನು ಸುತ್ತಿ ಜ್ಞಾನಪ್ರಸಾರ ಮಾಡತೊಡಗಿದನು. ವರ್ಷದಲ್ಲಿ ಎಂಟು ತಿಂಗಳು ಕಾಲ ತನ್ನ ಜ್ಞಾನವನ್ನು ಜನರಿಗೆ ಬೋಧಿಸುತ್ತಿದ್ದನು. ಮಳೆಗಾಲದಲ್ಲಿ ಮಾತ್ರ ನಾಲ್ಕು ತಿಂಗಳು ಒಂದೇ ಸ್ಥಳದಲ್ಲಿದ್ದು ಉಪದೇಶ ಮಾಡುತ್ತಿದ್ದನು.

ವೈಶಾಲಿ, ಚಂಪಾ, ರಾಜಗೃಹ, ಮಿಥಿಲಾ, ಶ್ರಾವಸ್ತಿ ಎಂಬೀ ನಗರಗಳು ಅವನ ವಾಸಸ್ಥಳಗಳಾದವು. ಬಂಗಾಲ, ಬಿಹಾರ, ಕಾಶೀ ರಾಜ್ಯಗಳಲ್ಲಿ ಸಂಚಾರಗೈದು ಜ್ಞಾನವನ್ನು ಬೋಧಿಸತೊಡಗಿದನು. ಅವನು ಹೋದ ಹೋದಲ್ಲೆಲ್ಲ ಜನರು ಪ್ರೇಮದಿಂದ ಸ್ವಾಗತಿಸುತ್ತಿದ್ದರು.

### ಮಹಾವೀರನ ಉಪದೇಶ

ಅವನ ಉಪದೇಶದ ಸಾರವು ಹೀಗಿದೆ: "ದೇಹ ಅಶುದ್ಧವಾಗಿದೆ; ಆದರೆ ಒಳಗಿರುವ ಆತ್ಮವು ಶುದ್ಧವಾಗಿದೆ. ದೇಹವನ್ನು ದಂಡಿಸಬೇಕು. ಯಾರಿಗೂ ಹಿಂಸೆಯನ್ನು ಮಾಡಕೂಡದು. ಎಲ್ಲ ಪ್ರಾಣಿಗಳಿಗೂ ದಯೆ ತೋರಬೇಕು. ಜೀವದಯೆ ಮುಖ್ಯವು. ಅಹಿಂಸೆಯೇ ಪರಮಧರ್ಮವು. ಎಲ್ಲರೂ ಸದಾಚಾರದಿಂದ ನಡೆದುಕೊಳ್ಳಬೇಕು. ಬ್ರಹ್ಮಚರ್ಯೆಯನ್ನು ಪಾಲಿಸಬೇಕು. ಹೀಗೆ ಮಾಡಿದಲ್ಲಿ ಪಾಪವು ಇಲ್ಲದಾಗುವದು. ಆಗ ಜನನ ಮರಣಗಳ ಚಕ್ರದಿಂದ ಜೀವನು ಮುಕ್ತನಾಗುವನು. ದೇವರು

ಇದ್ದಾನೋ ಇಲ್ಲವೋ ಎಂಬ ಚಿಂತೆ ನಮಗೆ ಬೇಡ. ನಾವು ಚೆನ್ನಾಗಿ ಇದ್ದು ತೋರಿಸಬೇಕು." ಅವನು ಜನರ ಬಳಕೆಯ ಭಾಷೆಯಾದ ಅರ್ಧ ಮಾಗಧಿಯಲ್ಲಿ ಉಪದೇಶ ಮಾಡಿದನು.

ಕೊನೆ

ಮೂವತ್ತು ವರ್ಷಗಳ ವರೆಗೂ ಆತನು ಜ್ಞಾನ ಪ್ರಚಾರವನ್ನು ನಡಸಿದನು. ಅನೇಕ ರಾಜರು ಅವನಿಗೆ ಶಿಷ್ಯರಾದರು. ಮಗಧ ದೇಶದ ರಾಜನಾದ ಬಿಂಬಸಾರನೂ ಆತನ ಮಗನಾದ ಅಜಾತಶತ್ರುವೂ ವರ್ಧಮಾನ ಸ್ವಾಮಿಯ ಶಿಷ್ಯರಾದರು. ತನ್ನ ವಯಸ್ಸಿನ 72 ನೆಯ ವರ್ಷದಲ್ಲಿ ಮಹಾವೀರ ಸ್ವಾಮಿಯು ಇಹಲೋಕದಿಂದ ಕಣ್ಮರೆಯಾದರು. (ಕ್ರಿ.ಪೂ.468)

ಜೈನಧರ್ಮದಲ್ಲಿ 24 ಜನ ಗುರುಗಳಾಗಿ ಹೋದರೆಂದು ಆ ಧರ್ಮದ ಅನುಯಾಯಿಗಳು ನಂಬುತ್ತಾರೆ. ಇವರಿಗೆ 'ತೀರ್ಥಂಕರ'ರೆಂದು* ಹೆಸರಿದೆ. ಮಹಾವೀರ ಸ್ವಾಮಿಯು ಕೊನೆಯ ತೀರ್ಥಂಕರನೆಂದೂ ಹಿಂದಿನಿಂದ ನಡೆದು ಬಂದ ಜೈನಧರ್ಮವನ್ನು ಈತನು ಉಜ್ವಲಗೊಳಿಸಿದನೆಂದೂ ಜೈನರು ಹೇಳುತ್ತಾರೆ. ಕರ್ನಾಟಕದಲ್ಲಿ ಜೈನರು ಸಾಕಷ್ಟು ಜನರಿದ್ದಾರೆ: ಸಾವಿರಾರು ಸುಂದರ ಬಸದಿಗಳು ಕನ್ನಡ ನಾಡಿನಲ್ಲುಂಟು. ಶ್ರವಣಬೆಳಗೊಳ, ಕಾರ್ಕಳ ಮೊದಲಾದ ಪುಣ್ಯಕ್ಷೇತ್ರಗಳು ಜೈನರಿಗೆ ಯಾತ್ರಾ ಸ್ಥಳಗಳಾಗಿವೆ. ಬೆಳಗೊಳದ ಗೊಮ್ಮಟಮೂರ್ತಿ ವಿಶ್ವದ ಅದ್ಭುತ ಕಲಾಕೃತಿಗಳಲ್ಲಿ ಒಂದಾಗಿದೆ.

ಅಭ್ಯಾಸನಗಳು

1) ವರ್ಧಮಾನನಿಗೆ 'ಮಹಾವೀರ'ನೆಂದು ಏಕೆ ಕರೆಯುವರು?

2) ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ.

ಅ) ವರ್ಧಮಾನನ ತಾಯಿಯ ಹೆಸರು.................... ಆಕೆಯ ಮಾತನ್ನು ಮೀರಲಾರದೆ ಆತನು ........ ಎಂಬ ಕುವರಿಯನ್ನು ಮದುವೆಯಾದನು. ಮುಂದೆ ತಾಯಿ ತಂದೆಗಳು ತೀರಿಕೊಂಡ ಬಳಿಕ ಅವನು........ಗೈಯಲು ವನಕ್ಕೆ ಹೊರಟನು .......... ವರುಷ ತಪಗೈದು ಜ್ಞಾನಿಯಾದನು. ಅವನು ತನ್ನ ಜ್ಞಾನವನ್ನು ವೈಶಾಲಿ........ ಮೊದಲಾದ ಸ್ಥಳಗಳಲ್ಲಿ ಬೋಧಿಸಿದನು. ವಯಸ್ಸಿನ........ನೇ ವರ್ಷದಲ್ಲಿ ಮಹಾವೀರನು ಇಹಲೋಕದಿಂದ ಕಣ್ಮರೆಯಾದನು.

ಆ) ಜೈನರಿಗೆ ಕರ್ನಾಟಕದಲ್ಲಿ........... ವು ಪುಣ್ಯಕ್ಷೇತ್ರವಾಗಿದೆ.

3) ಜೈನಧರ್ಮದ ಮುಖ್ಯ ತತ್ವಗಳು ಯಾವವು ?

---

* ಶಿಷ್ಯರನ್ನು ಪವಿತ್ರರನ್ನಾಗಿ ಮಾಡುದವರು.

## 2. ಗೌತಮ ಬುದ್ಧ

ಜಗತ್ತಿನಲ್ಲಿ ಈಗ ರೂಢಿಯಲ್ಲಿರುವ ಮುಖ್ಯ ಧರ್ಮಗಳಲ್ಲಿ ಬೌದ್ಧ ಧರ್ಮವೂ ಒಂದು. ಈ ಧರ್ಮವನ್ನು ಉಪದೇಶಿಸಿದ ಮಹಾಪುರುಷನೇ ಭಗವಾನ್ ಬುದ್ಧದೇವನು. 2500 ವರ್ಷಗಳ ಹಿಂದೆ ಈ ಬುದ್ಧನು ಲೋಕದ ಜನರ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಂಡನು. ಇವನ ತಂದೆಯ ಹೆಸರು ಶುದ್ಧೋದನ, ತಾಯಿಯ ಹೆಸರು ಮಾಯಾದೇವಿ. ಶುದ್ಧೋದನನು ಶಾಕ್ಯ ವಂಶದ ಅರಸನು. ಉತ್ತರ ಭಾರತದ ಬಿಹಾರದಲ್ಲಿಯ ಕಪಿಲವಸ್ತುವು ಇವನ ರಾಜಧಾನಿ. ಬುದ್ಧನಿಗೆ ತೊಟ್ಟಿಲಲ್ಲಿ ಇಟ್ಟ ಹೆಸರು ಸಿದ್ಧಾರ್ಥ. ಹುಟ್ಟಿದ ಏಳು ದಿನಗಳಲ್ಲಿ ತಾಯಿಯನ್ನು ಕಳೆದುಕೊಂಡ. ಚಿಕ್ಕಮ್ಮನಾದ ಗೌತಮಿ ಎಂಬವಳು ಅವನನ್ನು ಸಾಕಿ ಸಲುಹಿದಳು. ಆದ್ದರಿಂದ ಇವನಿಗೆ ಗೌತಮನೆಂದೂ ಕರೆಯತೊಡಗಿದರು.



ಗೌತಮ ಬುದ್ಧ

### ಶಿಕ್ಷಣ-ವಿವಾಹ

ಸಿದ್ಧಾರ್ಥನು ಚೆಲುವನು. ಮೋರೆಯ ಮೇಲೆ ಯಾವಾಗಲೂ ಕಾಂತಿಯು ಕಂಗೊಳಿಸುತ್ತಿತ್ತು. ಶುದ್ಧೋದನನು ರಾಜಕುಮಾರನಿಗೆ ಅವಶ್ಯವಿದ್ದ ವಿದ್ಯೆಗಳನ್ನೆಲ್ಲ ಕಲಿಸಿದನು. ಗೌತಮನು ಜಾಣನಾಗಿದ್ದರೂ ಅವನಿಗೆ ಗರ್ವವೆಂಬುದೇ ಗೊತ್ತಿರಲಿಲ್ಲ. ಇವನ ವಿವಾಹವು 20 ನೆಯ ವಯಸ್ಸಿಗೆ ಆಯಿತು. ಇವನ ಹೆಂಡತಿಯ ಹೆಸರು ಯಶೋಧರಾ. ಅವಳಿಗೆ ಒಬ್ಬ ಮಗನು ಹುಟ್ಟಿದನು. ಅವನ ಹೆಸರು ರಾಹುಲ.

ಈ ರೀತಿಯಾಗಿ ಅವನು ಸುಖವಾಗಿದ್ದನು. ಆ ಕಾಲದಲ್ಲಿ ರಾಜರು ಯಜ್ಞಗಳನ್ನು ಮಾಡುತ್ತಿದ್ದರು. ಜನರು ದೇವರ ಹೆಸರಿನಲ್ಲಿ ಮೂಕ ಪ್ರಾಣಿಗಳನ್ನು ಬಲಿಗೊಡುತ್ತಿದರು. ಇದನ್ನೆಲ್ಲ ನೋಡಿ ಬುದ್ಧನ ತಲೆ-

ಯಲ್ಲಿ ವಿಚಾರಗಳ ಸುಂಟರಗಾಳಿಯೆದ್ದಿತು. ಈ ಹಿಂಸೆಯಿಂದ ದೇವರು ಹೇಗೆ ಮೆಚ್ಚಬಹುದು ? ಮೂಕ ಪ್ರಾಣಿಗಳನ್ನು ಕೊಲ್ಲುವದರಲ್ಲಿ ಯಾವ ಘನತೆ ಯಿದೆ ? ಇದೇನು ಮನುಷ್ಯತ್ವವೇ ? ಈ ರೀತಿಯ ವಿಚಾರಚಕ್ರವು ಅವನ ತಲೆಯಲ್ಲಿ ಸುಳಿಯತೊಡಗಿತು.

## ಮನೆಯನ್ನು ತೊರೆದು ವನಕ್ಕೆ ಹೋದದು

ಜಗತ್ತಿನ ಜನರೆಲ್ಲರೂ ದಯಾಳುಗಳಾಗಬೇಕು. ಆದರೆ ಇದು ಹೇಗೆ ಸಾಧ್ಯ ? ಒಂದು ದಿನ ಸಂಜೆಯ ವಿಹಾರಕ್ಕೆ ಹೊರಟಿರಲು, ಮೈಸುಕ್ಕುಗಟ್ಟಿ ಟೊಂಕ ಬಾಗಿದ ಮುದುಕನೊಬ್ಬನನ್ನು ಮೊದಲು ಕಂಡ. ಮುಂದೆ ಸ್ವಲ್ಪ ದೂರದಲ್ಲಿ ಒಬ್ಬ ಮಹಾರೋಗಿ ಕಣ್ಣಿಗೆ ಬಿದ್ದ. ಹಾಗೆಯೇ ಮುಂದೆ ಸಾಗಿ ರಲು ಒಂದು ಹೆಣವನ್ನು ಕಂಡ. ಈ ಎಲ್ಲ ದುಃಖದ ಪ್ರಸಂಗಳನ್ನು ನೋಡಿ ಅವನು ಚಿಂತೆಗೀಡಾದನು. ಜನನ-ಮರಣಗಳ ಜಂಜಡದಿಂದ ಪಾರಾಗುವ ಬಗೆ ಹೇಗೆ ಎಂಬುದನ್ನು ನೆನೆಯತೊಡಗಿದ. ಹೆಂಡತಿ ಮಕ್ಕಳನ್ನೂ ತೊರೆದು ಅರಣ್ಯಕ್ಕೆ ಹೋಗಲು ನಿಶ್ಚಯಿಸಿದ. ಒಂದು ರಾತ್ರಿ ಸತಿ ಯಶೋಧರೆಯೂ ಮಗ ರಾಹುಲನೂ ಸುಖವಾಗಿ ನಿದ್ರೆಮಾಡುತ್ತಿದ್ದರು. ಆಗ ಒಕ್ಕಲೇ ಗೌತ ಮನು ಎದ್ದು ಅವರಿಬ್ಬರನ್ನು ಕೊನೆಯಸಲ ನೋಡಿ ಮನೆ ಬಿಟ್ಟು ಹೊರ ಹೊರಟನು' ಮುಂದೆ ಅಡವಿಯೊಂದನ್ನು ಹೊಕ್ಕನು.

## ಜ್ಞಾನ ದೊರೆಯಿತು !

ಆ ಅಡವಿಯಲ್ಲಿ ಒಬ್ಬ ಸಾಧುವಿನ ಜೊತೆಗೆ ಸಿದ್ಧಾರ್ಥನು ಅನೇಕ ವರ್ಷಗಳ ವರೆಗೆ ಇದ್ದನು. ಆದರೆ ಅವನಿಗೆ ಅಲ್ಲಿ ಸುಖದ ಮಾರ್ಗವು ದೊರಕಲಿಲ್ಲ. ಆದ್ದರಿಂದ ಅಲ್ಲಿಂದ ಹೊರಟನು. ಮನೆಗೆ ಮರಳೆಂದು ಅನೇಕ ಹಿರಿಯರು ಹೇಳಿದರು. ಆದರೆ ಅವನು ಮತ್ತೆ ಮುಂದೆ ಸಾಗಿ ಗಯಾ ಪಟ್ಟಣ ಸೇರಿದನು. ಅಲ್ಲಿಯೇ ನದೀ ತೀರದಲ್ಲಿಯ ಒಂದು ಅರಳಿಯ ಮರದ ಕೆಳಗೆ ಕುಳಿತಿರುವಾಗಲೇ ಒಂದು ದಿನ ಅವನಲ್ಲಿ ಜ್ಞಾನ ಮೂಡಿತು. ಯಾವ ಗಿಡದ ಕೆಳಗೆ ಧ್ಯಾನಕ್ಕೆ ಕುಳಿತಾಗ ಅವನಿಗೆ ಜ್ಞಾನೋದಯವಾಯಿತೋ ಅದಕ್ಕೆ ಬೋಧಿವೃಕ್ಷವೆಂದು ಕರೆಯುತ್ತಾರೆ. ಆ ಸ್ಥಳವು ಇಂದು ಜಗತ್ತಿನಲ್ಲಿಯ ಬೌದ್ಧರೆಲ್ಲರ ಯಾತ್ರಾ ಸ್ಥಳವಾಗಿದೆ. ಸಿದ್ಧಾರ್ಥನು ‘ ಬುದ್ಧ ’ನಾದನು. ಬುದ್ಧ ಎಂದರೆ ತಿಳಿವು ಮೂಡಿ ಎಚ್ಚತ್ತವನು ಎಂದರ್ಥ.

## ಧರ್ಮ ಪ್ರಸಾರ

ಕಾಶೀಪಟ್ಟಣದ ಹತ್ತಿರ ಸಾರನಾಥ ಎಂಬ ಸ್ಥಳವಿದೆ. ಅಲ್ಲಿಯೇ ಅವನು ಮೊದಲ ಸಲ ಭಾಷಣವನ್ನು ಮಾಡಿದನು. ಅಲ್ಲಿ ಐದು ಜನ ಪಂಡಿತರು ಇವನ ಭಕ್ತರಾದರು. ರಾಜಗೃಹದ ಬಿಂಬಸಾರ ರಾಜನು ಈಗ ಬುದ್ಧನ ಭಕ್ತನಾದನು. ಬುದ್ಧನು ಉಪದೇಶವನ್ನು ಮಾಡುತ್ತ ಮಾಡುತ್ತ ಕಪಿಲ ವಸ್ತುವಿಗೆ ಬಂದನು. ಅಲ್ಲಿ ಗೌತಮಿಯೂ ಸಿದ್ಧಾರ್ಥನ ಸತಿಯೂ ಮಗ ರಾಹುಲನೂ ಬುದ್ಧನ ಶಿಷ್ಯರಾದರು. ಮುಂದೆ ಅವನು ಬಿಹಾರ, ಓಡಿಸಾ, ಉತ್ತರ ಪ್ರದೇಶವನ್ನು ಮುಂತಾದ ರಾಜ್ಯಗಳಲ್ಲೆಲ್ಲ ಅಡ್ಡಾಡಿ ಹೊಸ ಧರ್ಮವನ್ನು ಉಪದೇಶ ಮಾಡಿದನು. ಅನೇಕರು ಶಿಷ್ಯರಾದರು. 81 ವರ್ಷದವನಾದಾಗ ಕಾಶೀನಗರದಲ್ಲಿ ಬುದ್ಧನು ಮರಣಹೊಂದಿದನು. ಇವನ ಶಿಷ್ಯರಿಗೆ 'ಭಿಕ್ಷು' ಎಂದು ಹೆಸರು. ಇವರೇ ತಮ್ಮ ಗುರುವಿನ ತತ್ವಗಳನ್ನು ಪ್ರಸಾರಮಾಡಿದರು.

## ಬುದ್ಧನ ತತ್ವಗಳು

ಬುದ್ಧನ ತತ್ವಗಳು ಸರಳವಾಗಿರುವವು. ಎಲ್ಲ ಜನರಿಗೂ ತಿಳಿಯ-ಬೇಕೆಂದು ತನ್ನ ತತ್ವಗಳನ್ನು ಸಂಸ್ಕೃತದಲ್ಲಿ ಹೇಳದೆ ಜನರ ಭಾಷೆಯಾದ ಪಾಲಿಯಲ್ಲಿ ಹೇಳಿದನು. ಜಗತ್ತು ದುಃಖದಿಂದ ತುಂಬಿರುವದು. ಆ ದುಃಖಕ್ಕೆ ಮೂಲ ಕಾರಣವು ಆಸೆ. ಆ ಆಸೆಯನ್ನು ಕಿತ್ತಿ ಒಗೆಯುವದೆ ಸುಖಕ್ಕೆ ದಾರಿ. ಆದ್ದರಿಂದ ಮನುಷ್ಯನು ಆಸೆಯನ್ನು ಬಿಡಬೇಕು. ಪ್ರಾಣಿಗಳನ್ನು ಕೊಲ್ಲಬಾರದು. ಅಹಿಂಸೆಯೇ ಪರಮಧರ್ಮ. ಎಲ್ಲ ಮನುಷ್ಯರನ್ನು ಸರಿ ಸಮಾನರೆಂದು ತಿಳಿಯಬೇಕು. ಜಾತಿಭೇದವನ್ನು ಮಾಡಬಾರದು. ಒಳ್ಳೆಯ ಕೆಲಸಗಳನ್ನಷ್ಟೇ ಮಾಡಬೇಕು. ಇದೇ ಪುಣ್ಯ. ಇದರಿಂದಲೇ ಮುಕ್ತಿ.

ಬೌದ್ಧ ಧರ್ಮದವರು ವೇದಗಳಿಗೆ ಮಹತ್ವ ಕೊಡುವದಿಲ್ಲ. ಬುದ್ಧನ ಈ ಎಲ್ಲ ತತ್ವಗಳು 'ತ್ರಿಪಾಠಿಕ' ಎಂಬ ಪುಸ್ತಕದಲ್ಲಿ ಇವೆ. 'ಜಾತಕ ಕಥೆಗಳು' ಎಂಬ ಪುಸ್ತಕದಲ್ಲಿ ಬುದ್ಧನ ಪೂರ್ವಜನ್ಮದ ಕಥೆಗಳನ್ನೂ ಆ ಧರ್ಮದ ತತ್ವಗಳನೂ ಹೇಳಿದೆ.

ಇಂದು ಭಾರತದಲ್ಲಿ ಈ ಧರ್ಮವು ಮುಖ್ಯ ಧರ್ಮವಾಗಿರದಿದ್ದರೂ ಹಿಂದೂ ಜನರು ಬುದ್ಧನನ್ನು ಪೂಜ್ಯ ಪುರುಷನೆಂದು ತಿಳಿಯುವರು. ಬೌದ್ಧಧರ್ಮದ ಹಲವೊಂದು ತತ್ವಗಳು ಹಿಂದೂ ಧರ್ಮದಲ್ಲಿ ಸಮಾವೇಶ

ವಾಗಿದೆ. ಅಹಿಂಸೆ, ತ್ಯಾಗ, ದಯೆ ಈ ಸದ್ಗುಣಗಳನ್ನು ಬೌದ್ಧಧರ್ಮವು ಬೆಳೆಸಿತು. ಅವು ಇಂದಿಗೂ ಬೇಕು, ಎಂದಿಗೂ ಬೇಕು.

**ಅಭ್ಯಸನಗಳು**

1. ಬುದ್ಧನು ಯಾರು ? ಮತ್ತು ಅವನಿಗೆ ಯಾವ ರೀತಿಯ ಶಿಕ್ಷಣ ದೊರೆಯಿತು ?
2. ಬುದ್ಧನು ಮನೆಯನ್ನು ಏಕೆ ಬಿಟ್ಟು ಹೋದನು ?
3. ಬುದ್ಧನು ಹೇಳಿದ ಎರಡು ತತ್ವಗಳನ್ನು ಹೇಳಿರಿ.

## 3. ದೇವಪ್ರಿಯ ಅಶೋಕ

ನಮ್ಮ ದೇಶದ ನಾಣ್ಯಗಳ ಮೇಲೆ ನಾವು ಒಂದು ಚಿತ್ರವನ್ನು ನೋಡುತ್ತೇವೆ. ಮೂರು ಸಿಂಹಗಳು ಒಂದು ಕಂಬದ ಮೇಲೆ ನಿಂತಿರುತ್ತವೆ. ನಡುವಿನ ಸಿಂಹದ ಕೆಳಗೆ ಒಂದು ಚಕ್ರವಿದೆ. ಅದೇ ಚಕ್ರವನ್ನು ನಮ್ಮ ರಾಷ್ಟ್ರಧ್ವಜದಲ್ಲಿಯೂ ನಾವು ಕಾಣುತ್ತೇವೆ. ಈ ಚಿತ್ರವು ನಮ್ಮ ದೇಶದ ರಾಜಮುದ್ರೆಯಾಗಿದೆ. ಈ ಚಿತ್ರವು ನಮಗೆ ಒಬ್ಬ ರಾಜನ ನೆನಪನ್ನು ಕೊಡುತ್ತದೆ. ಆತನೇ ಅಶೋಕ.



ದೇವಪ್ರಿಯ ಅಶೋಕ

**ಅಶೋಕನ ಬಾಲ್ಯ**

ಅಶೋಕನು ಒಬ್ಬ ದೊಡ್ಡ ರಾಜನು. ಆತನು ಸುಮಾರು 2200 ವರ್ಷಗಳ ಹಿಂದೆ ಪಾಟಲೀಪುತ್ರದಲ್ಲಿ ಆಳುತ್ತಿದ್ದನು (ಪಾಟಲೀಪುತ್ರಕ್ಕೆ ಈಗ ಪಾಟಣಾ ಅನ್ನುತ್ತಾರೆ; ಇದು ಬಿಹಾರದ ರಾಜಧಾನಿ). ಅವನು ಮೌರ್ಯ ಮನೆತನದ ಚಂದ್ರಗುಪ್ತನ ಮೊಮ್ಮಗನು; ಬಿಂದುಸಾರನ ಮಗನು. ತಂದೆಯ ಕಾಲಕ್ಕೆ, ಅಶೋಕನು ತಕ್ಷಶಿಲೆ, ಉಜ್ಜಯಿನಿಗಳನ್ನು ಆಳುತ್ತಿದ್ದನು. ಅನೇಕ ದಂಗೆಗಳನು ಮುರಿದಿದ್ದನು. ಯುದ್ಧ ಮಾಡುವದರಲ್ಲಿ ನುರಿತವನಾಗಿದ್ದನು. ಬಿಂದುಸಾರನು ತೀರಿಕೊಂಡ ಮೇಲೆ ಸಹೋದರರನ್ನು ಸೋಲಿಸಿ ತಾನೇ ಪಟ್ಟವೇರಿದನು. ಬಳಿಕ ತನ್ನ ರಾಜ್ಯವನ್ನು ಬೆಳೆಯಿಸತೊಡಗಿದನು. ಅನೇಕ [illegible]

ಗಳನ್ನು ಗೆದ್ದನು. ಕೊನೆಗೆ ಕಲಿಂಗ (ಓಡಿಸಾ) ರಾಜ್ಯದ ಮೇಲೆ ಏರಿ ಹೋದನು.

## ಇನ್ನುಮುಂದೆ ಯುದ್ಧವಿಲ್ಲ

ಕಲಿಂಗ ರಾಜ್ಯವು ಸಮುದ್ರದ ದಂಡೆಗೆ ಹತ್ತಿದೆ. ಅಲ್ಲಿಯ ಜನರು ಹಡಗುಗಳಲ್ಲಿ ಕುಳಿತು ದೂರ ದೇಶಗಳಕೂಡ ವ್ಯಾಪಾರ ಮಾಡುತ್ತಿದ್ದರು. ಅವರು ಧೈರ್ಯಶಾಲಿಗಳು, ಶ್ರೀಮಂತರು. ಇಂಥವರನ್ನು ಸೋಲಿಸಲು ಅಶೋಕನು ಬಹಳ ದೊಡ್ಡ ಸೈನ್ಯವನ್ನು ತಂದಿದ್ದನು. ಕಲಿಂಗದ ರಾಜ ನಾದರೂ ಕಲಿತನದಿಂದ ಕಾದಿದನು. ದೊಡ್ಡ ಯುದ್ಧವಾಗಿ ಕೊನೆಗೆ ಅಶೋಕನಿಗೆ ಜಯವಾಯಿತು. ಆದರೆ ಈ ಯುದ್ಧದಲ್ಲಿ ಲಕ್ಷಗಟ್ಟಲೆ ಸೈನಿಕರು ಮಡಿದದ್ದನ್ನು ನೋಡಿದ. ಅವರ ಹೆಂಡಿರು ಮಕ್ಕಳು ಅನಾಥ ರಾದರು; ತನ್ನಿಂದಲೇ ಅವರಿಗೆ ಕಷ್ಟವಾಯಿತೆಂಬುದನ್ನು ಅರಿತ. ಯುದ್ಧ ಮಾಡಿದ ಆ ತಪ್ಪಿಗಾಗಿ ಮರುಗಿದ. ಇದೇ ವೇಳೆಗೆ ಉಪಗುಪ್ತನೆಂಬ ಬೌದ್ಧ ಸನ್ಯಾಸಿಯ ದರ್ಶನವಾಯಿತು. ಪ್ರಾಣಿಗಳಿಗೆ ದಯೆ ತೋರ ಬೇಕೆಂದು ಆ ಬೌದ್ಧ ಗುರು ಉಪದೇಶ ಮಾಡಿದನು. ಅಶೋಕನಿಗೆ ಈಗ ಬುದ್ಧಿ ಬಂತು. ಇನ್ನು ಮೇಲೆ ಯುದ್ಧ ಮಾಡುವದಿಲ್ಲವೆಂದು ಆಣೆ ಇಟ್ಟು ಕೊಂಡ. ಬೇಟೆಯಾಡುವದನ್ನೂ ಮಾಂಸ ತಿನ್ನುವದನ್ನೂ ಬಿಟ್ಟ. ಜನರ ಸೇವೆಯಲ್ಲಿ ಕಾಲ ಕಳೆಯ ತೊಡಗಿದ. ಜನರಿಗಾಗಿ ಧರ್ಮ ಶಾಲೆಗಳೂ ಔಷಧಾಲಯಗಳೂ ಪ್ರಾರಂಭವಾದವು. ಬೌದ್ಧ ಸನ್ಯಾಸಿಗಳಿಗೆ ವಿಹಾರ-ಮಠಗಳನ್ನು ಸ್ಥಾಪಿಸಿಕೊಟ್ಟ. ತಾನೂ ಬೌದ್ಧ ಧರ್ಮವನ್ನು ಸೇರಿದನು. ರಾಜರ ಉಡುಪುಗಳನ್ನು ಬಿಟ್ಟು ಸನ್ಯಾಸಿಯಂತೆ ಸಾದಾ ಉಡುಪು ಹಾಕಿಕೊಂಡನು.

## ಬೌದ್ಧ ಧರ್ಮದ ಪ್ರಸಾರ

ಅಶೋಕನಿಗೆ ಜನರ ಹಿತ ಮಾಡುವದು ಬೇಕಾಗಿತ್ತು. ಯುದ್ಧದಿಂದ ಜನರಿಗೆ ಹಿತವಾಗುವದಿಲ್ಲವೆಂದು ಅವನಿಗೆ ತಿಳಿದಿತ್ತು. ಅವನು ಯುದ್ಧ ವನ್ನೇ ನಿಲ್ಲಿಸಿದ. ಜನರಿಗೆ ಇಷ್ಟರಿಂದಲೇ ಸುಖವಾಗದು. ಅವರಿಗೆ ನಿಜ ವಾದ ಸುಖವಾಗಬೇಕಾದರೆ ಅವರೂ ಸುಧಾರಿಸಬೇಕು. ಉಳಿದವರೊಡನೆ ಪ್ರೇಮದಿಂದ ನಡೆದುಕೊಳ್ಳಬೇಕು. ಇವೆಲ್ಲ ಮಾತುಗಳನ್ನು ಪ್ರಜೆಗಳಿಗೆ ತಿಳಿಸಿ ಹೇಳಬೇಕಾಗಿತ್ತು. ಬೌದ್ಧ ಧರ್ಮವು ದಯೆ ಹಾಗೂ ಅಹಿಂಸೆ ಇವುಗಳ ಮಹತ್ವವನ್ನು ಹೇಳುತ್ತಿತ್ತು. ಆದ್ದರಿಂದ ಅಶೋಕನು ಬೌದ್ಧ

ಭಕ್ತರಾಗಿದ್ದರು. ಒಳ್ಳೇಯವರಾಗಿ ಜೀವಿಸುತ್ತಿದ್ದಿಲ್ಲ. ದೇವ ರನ್ನು ಎಷ್ಟು ಮಾತ್ರವೂ ಪ್ರೇಮಿಸುತ್ತಿದ್ದಿಲ್ಲ. ಆದರೆ ತಮ ಗಿಂತಲೂ ಒಳ್ಳೇಯವರು ಮತ್ತು ಜ್ಞಾನವುಳ್ಳವರು ಯಾರೂ ಇಲ್ಲವೆಂದು ನೆನಸುತ್ತಿದ್ದರು. ವೇದ ಶಾಸ್ತ್ರಿಗಳು ವೇದವನ್ನು ಕುರಿತು ಜನರಿಗೆ ಬೋಧಿಸುವಂಥವರು. ಈ ಫರಿಜೇಯರು ಮತ್ತು ಶಾಸ್ತ್ರಜ್ಞರು ಜೇಸುನಾಥರ ಮೇಲೆ ಹೊಟ್ಟೆಕಿಚ್ಚುಪಡ ಹತ್ತಿದರು. ಯಾಕೆಂದರೆ ಎಲ್ಲ ಜನರು ಜೇಸುನಾಥರನ್ನು ಪ್ರೇಮಿಸುತ್ತಿದ್ದರು. ಮತ್ತು ಜೇಸುನಾಥರು ಎಲ್ಲರಿಗೂ ಸ್ನೇಹಿತರಾಗಿದ್ದರು. ಅದಲ್ಲದೆ ಸುಂಕದವರನ್ನು ಪಾಪಾತ್ಮರನ್ನು ಹೆಚ್ಚಾಗಿ ಪ್ರೇಮಿಸುತ್ತಿದ್ದರಿಂದ ಅವರಲ್ಲಿ ತಪ್ಪನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಿದ್ದರು.

ಸುಂಕದವರೆಂದರೆ ರೋಮಾನ ರಾಜ್ಯದಲ್ಲಿ ಜೂದರಿಂದ ತೆರಿಗೆಯನ್ನು ಎತ್ತುವವರು. ಇವರು ತೆರಿಗೆ ಎತ್ತುವಾಗ ಕೆಲವು ಸಾರೆ ನಿರ್ಧಯರಾಗಿರುತ್ತಿದ್ದರು. ಆದರೆ ಜೂದರಿಗೆ ಇವರ ಮೇಲೆ ಬಹಳ ಸಿಟ್ಟು ಇತ್ತು.

ಆ ಕಾಲದಲ್ಲಿ ಜೂದರು ಇತರ ಜನಾಂಗದವರೊಂದಿಗೆ ಸೇರುವದು ತಪ್ಪೆಂದು ನೆನಸುತ್ತಿದ್ದರು. ಮತ್ತು ತಮ್ಮನ್ನು ತಾವೇ ಹೆಚ್ಚಿಸಿಕೊಳ್ಳುತ್ತಿದ್ದರು. ಆದರೆ ಜೇಸುನಾಥರು ಜೂದರ ಸಂಗಡಲೂ, ಸಾಮರ್ರ್ಯರಸಂಗಡಲೂ ಸುಂಕದವರ ಸಂಗಡಲೂ ಇದ್ದು, ಎಲ್ಲರೂ ಅರಿತ ಪಾಪಾತ್ಮರನ್ನು ಬಹಳವಾಗಿ ಪ್ರೇಮಿಸುತ್ತಿದ್ದರು. ಆದ್ದರಿಂದ ಫರಿಜೇಯರು ಇವರನ್ನು ವಿರೋಧಿಸಿಕೊಲ್ಲಲು ಯತ್ನಿಸಿದರು.

## ಕ್ರಿಸ್ತನ ಜನ್ಮ

ಕ್ರಿಸ್ತನ ತಾಯಿ ಮೇರಿ. ತಂದೆ ಯೊಸೆಫ. ಈತನು ಪಾಲೆಸ್ತಾನದಲ್ಲಿಯ 'ಬೆಥೇಲ್‌ಹೇಮು' ಎಂಬ ಊರಿನವನು. ಯೊಸೆಫ್‌ನು ಬಡಿಗತನ ಮಾಡುತ್ತಿದ್ದನು. ಅವನು ನೈಜರೇಥದಲ್ಲಿ ಇರುವದೇ ಬಹಳ. ಆದರೆ ತನ್ನ ಮಗನು ಬೆಥಲ್‌ಹೇಮ್‌ದಲ್ಲಿಯೇ ಜನಿಸಬೇಕೆಂದು ಬಯಸಿ ಮೇರಿಯೊಡನೆ ಬೆಥಲ್‌ಹೇಮ್‌ಕ್ಕೆ ಬಂದನು. ಅಲ್ಲಿಯ ಧರ್ಮಶಾಲೆಯಲ್ಲಿ ಇಳಿದುಕೊಂಡಿದ್ದನು. ಅಲ್ಲಿಯೇ ಕ್ರಿಸ್ತನು ಹುಟ್ಟಿದನು.

## ಗಂಡಾಂತರದಿಂದ ಪಾರಾದನು

ಯಹೂದಿ ಪ್ರಾಂತಕ್ಕೆ ಹಿರೋದ ಎಂಬ ರಾಜನಿದ್ದನು. "ನಿನ್ನ ಶತ್ರು ಬೆಥಲ್‌ಹೆಮ್‌ದಲ್ಲಿ ಹುಟ್ಟಿದ್ದಾನೆ'' ಎಂದು ಆವನಿಗೆ ಜ್ಯೋತಿಷಿಗಳು ಹೇಳಿದರು. ಆಗ ರಾಜ ಆ ಊರಲ್ಲಿಯ ಎರಡು ವರ್ಷದವರೆಗಿನ ಎಲ್ಲ ಮಕ್ಕಳನ್ನು ಕೊಲ್ಲಲು ಅಪ್ಪಣೆ ಕೊಟ್ಟ. ಈ ಸುದ್ದಿ ಮೊದಲೇ ತಿಳಿದು ಯೊಸೆಫನು ಮಗನನ್ನು ನೈಜರಥಕ್ಕೆ ಕರೆದೊಯ್ದ. ಯೇಸುವಿನ ಸಾವು ತಪ್ಪಿತು.

## ಯೋಹಾನನ ಶಿಷ್ಯನಾದನು

ಮುಂದೆ ದೊಡ್ಡವನಾದ ಯೇಸುವು ಬಡಿಗತನ ಮಾಡುತ್ತ ದೇವರ ಧ್ಯಾನದಲ್ಲಿ ಕಾಲಕಳೆದನು. 'ಯೋಹಾನ'ನೆಂಬ ಸಾಧುವು ಜನರಿಗೆ ಸದ್ವಿಚಾರಗಳನ್ನು ಉಪದೇಶಿಸತೊಡಗಿದ್ದನು. ಯೇಸುವು ಅವನ ಕಡೆಗೆ ಹೋಗಿ ಶಿಷ್ಯನಾದನು. ಆ ಮೇಲೆ ಅವನು ಒಂದು ಪರ್ವತಕ್ಕೆ ಹೋಗಿ ಅಲ್ಲಿ 40 ದಿನಗಳವರೆಗೆ ದೇವರ ಧ್ಯಾನ ಮಾಡಿದನು. ಅಲ್ಲಿ ಅವನಿಗೆ ಜ್ಞಾನವಾಯಿತು. ತನಗಾದ ಜ್ಞಾನವನ್ನು ಜನರಿಗೆ ತಿಳಿಸಬೇಕೆಂದೂ ಆದಕ್ಕಾಗಿ ಎಷ್ಟೇ ಕಷ್ಟಬಂದರೂ ಸಹಿಸಬೇಕೆಂದೂ ನಿರ್ಧರಿಸಿದನು.

## ಉಪದೇಶದ ಆರಂಭ

"ನಾನು ಕ್ರಿಸ್ತ ಎಂದರೆ ದೇವರ ಮಗನಿದ್ದೇನೆ. ನನ್ನ ತಂದೆ ಯಹೂದಿಗಳ ರಾಜನು. ಆ ತಂದೆಯ ಮೇಲೆ ಭಕ್ತಿಯನ್ನು ಇಡಿರಿ. ನಿಮ್ಮಿಂದ ಆದ ತಪ್ಪುಗಳನ್ನು ಒಪ್ಪಿಕೊಂಡು ಪಶ್ಚಾತ್ತಾಪಪಡಿರಿ. ಉಚ್ಚ ನೀಚ ಭೇದ ಮಾಡಬೇಡಿರಿ. ದೇವರು ತೀರ್ಥ ಇಲ್ಲವೆ ಮಂದಿರಗಳಲ್ಲಿ ಇಲ್ಲ. ಅವ ಎಲ್ಲರ ಹೃದಯದಲ್ಲಿ ಇದ್ದಾನೆ." ಇಂತು ಯೇಸು ಉಪದೇಶ ಮಾಡತೊಡಗಿದನು. ಅವನಿಂದ ಅನೇಕ ಪವಾಡಗಳು ನಡೆದವು. ಅವನ ಕೃಪೆಯಿಂದ ಕುರುಡರಿಗೆ ಕಣ್ಣು ಬಂದವು. ಮೂಕರು ಮಾತನಾಡ

ತೊಡಗಿದರು. ಆತನು ಮುಟ್ಟಿದರೆಸಾಕು, ರೋಗಗಳು **ನಾಶವಾದವು**. ಕೈಯಲ್ಲಿಯ ಕಲ್ಲು ರೊಟ್ಟಿಯಾಯ್ತು. ಆತನು ಉಪದೇಶ ಮಾಡುವ ಪದ್ಧತಿ ಚನ್ನಾಗಿತ್ತು. ಕಥೆ ಹೇಳಿ ತತ್ತ್ವ ತಿಳಿಸುತ್ತಿದ್ದನು.

## ಪೂಜಾರಿಗಳಿಗೆ ಕೋಪ

ಪ್ರತಿ ಸಲದಂತೆ ಜೆರೂಸಲೇಮುದ ಜಾತ್ರೆ ಪ್ರಾರಂಭವಾಯಿತು. ಯೇಸುವು ಅಲ್ಲಿಗೆ ಹೋದನು. ಅಲ್ಲಿಯ ಮಂದಿರದ ಒಂದು ಭಾಗದಲ್ಲಿ ಅಂಗಡಿ ಹಚ್ಚಿದ್ದರು, ಅಂಗಡಿಕಾರರಿಂದ ಪೂಜಾರಿಗಳಿಗೆ ಬಾಡಿಗೆ ಸಿಗುತ್ತಿತ್ತು. ಹೀಗಾಗಿ ಮಂದಿರವು ಸಂತೆಯಂತೆ ಕಾಣುತ್ತಿತ್ತು. ಆದ್ದರಿಂದ ಯೇಸುವು ಅಂಗಡಿಕಾರರಿಗೆ ಹೋರಗೆ ಹೋಗಲು ಹೇಳಿದನು. "ಹೀಗೆ ಹೇಳುವ ನೀನು ಯಾರು ? ನಿನಗೇನು ಅಧಿಕಾರ ?" ಎಂದು ಅವರು ಕೇಳಿದರು. ಅದಕ್ಕೆ ಅವನು "ನಾನು ಭಕ್ತನು; ಪ್ರಸಂಗ ಬಿದ್ದರೆ ಇಂಥ ಗುಡಿಯನ್ನು ಮೂರು ದಿನಗಳಲ್ಲಿ ಕಟ್ಟಿ ತೋರಿಸೇನು" ಎಂದು ಹೇಳಿದನು. ಇದರಿಂದ ಪೂಜಾರಿಗಳಿಗೆ ಯೇಸುವಿನ ಮೇಲೆ ಕೋಪ ಬಂದುಬಿಟ್ಟಿತು.

## ಶೂಲಕ್ಕೇರಿಸಿದರು


ಯೇಸು ಕ್ರಿಸ್ತರು

ಪೂಜಾರಿಗಳ ಸಭೆಯಲ್ಲಿ ಯೇಸುವಿನ ವಿಚಾರಣೆಯಾಯಿತು, "ಯೇಸುವು ತಾನೇ ದೇವರೆಂದು ಹೇಳಿಕೊಳ್ಳುತ್ತಾನೆ. ಅವನು ನಾಸ್ತಿಕನು. ಆದ್ದರಿಂದ ಅವನನ್ನು ಶೂಲಕ್ಕೇರಿಸಬೇಕು" ಎಂದು ನಿರ್ಣಯಿಸಿದರು. ಆದರೆ ಮರಣ ಶಿಕ್ಷೆ ಕೊಡುವದು ಅವರ ಕೈಯಲ್ಲಿ ಇರಲಿಲ್ಲ. ಆದ್ದರಿಂದ ಯೇಸುವನ್ನು ಪ್ರಾಂತದ ಅಧಿಕಾರಿಯ ಕಡೆಗೆ ಕಳಿಸಿಕೊಟ್ಟರು. ಯೇಸುವು ರಾಜ್ಯದಲ್ಲಿ ಒಳಸಂಚು ನಡಿಸಿದ್ದಾನೆಂದು ಆ ಅಧಿಕಾರಿಗೂ ಸಂಶಯ ಬಂದಿತು. ಯೇಸುವನ್ನು ಕೊಲೆಗಡಕರ ಕೈಗೆ ಕೊಟ್ಟರು.

## 'ದೇವರೇ ಈ ಜನರನ್ನು ಕ್ಷಮಿಸು'

ಯೇಸುವಿನ ಎರಡು ಕಾಲುಗಳಿಗೂ ಕೈಗಳಿಗೂ ಮೊಳೆಗಳನ್ನು ಹೊಡೆದು ಶೂಲಕ್ಕೇರಿಸಿದರು. ಆಗ ಅವನು ಶಾಂತವಾಗಿಯೇ ಇದ್ದನು. 'ದೇವರೇ, ನಾನು ನಿನ್ನ ಕಡೆಗೆ ಬರುತ್ತಿದ್ದೇನೆ. ನನ್ನನ್ನು ಶೂಲಕ್ಕೇರಿಸಿದವರನ್ನು ನೀನು ಕ್ಷಮಿಸಿಬಿಡು. ತಾವು ಏನು ಮಾಡುತ್ತಿದ್ದೇವೆಂಬುದೇ ಅವರಿಗೆ ಗೊತ್ತಿಲ್ಲ.' ಎಂದು ಅವನು ದೇವರನ್ನು ಬೇಡಿಕೊಂಡನು.

ಯೇಸುವಿನ ವಿಚಾರಣೆ ನಡೆದಾಗ ಅವನು ಯಾರ ಮೇಲೆಯೂ ಸಿಟ್ಟಿಗೇಳಲಿಲ್ಲ. ಆತನನ್ನು ಶೂಲಕ್ಕೇರಿಸುವಾಗ ಆತನು ದುಃಖಿಸಲಿಲ್ಲ. ಸತ್ತಿದ್ದಾದರೂ ಬಹಳ ಶಾಂತರೀತಿಯಿಂದ. ಈ ಸಂಗತಿಗಳ ಪರಿಣಾಮವು ಜನರ ಮನಸ್ಸಿನ ಮೇಲೆ ಬಹಳವಾಯಿತು. ಅವನನ್ನು ಶೂಲಕ್ಕೇರಿಸಿದವರು ಬಹಳ ಪಾಶ್ಚಾತ್ತಾಪ ಪಟ್ಟರು; ಕ್ರಿಸ್ತೀ ಧರ್ಮವನ್ನು ಸೇರಿದರು. ಸಾವಕಾಶವಾಗಿ ಆ ಧರ್ಮವು ಯುರೋಪದ ತುಂಬೆಲ್ಲ ಹಬ್ಬಿತು; ಈಗ ಜಗತ್ತಿನ ತುಂಬೆಲ್ಲ ಅದು ಹಬ್ಬಿದೆ.

### ಅಭ್ಯಸನಗಳು

1) ದೇವ ಮಂದಿರದ ಪೂಜಾರಿಗಳು ಯೇಸುವಿನ ಮೇಲೆ ಏಕೆ ಸಿಟ್ಟಾದರು ?
2) ಪ್ರಾಂತದ ಅಧಿಕಾರಿಯು ಯೇಸುವನನ್ನು ಶೂಲಕ್ಕೇರಿಸಿದ ಕಾರಣವೇನು ?
3) ಸಾಯುವಾಗ ಯೇಸುವು ಬೇಡಿಕೊಂಡದ್ದನ್ನು ಪಾರ್ಥಿಸಿ ತೋರಿಸಿರಿ.

## 5. ಮುಹಮ್ಮದ ಪೈಗಂಬರ

ಬಹುದಿನಗಳ ಹಿಂದೆ ಅರಬಸ್ಥಾನದ ಪರಿಸ್ಥಿತಿಯು ತೀರ ವಿಚಿತ್ರವಾಗಿತ್ತು. ಅರಬ ಜನರು ಗುಂಪುಗಟ್ಟಿಕೊಂಡು ಇರುತ್ತಿದ್ದರು. ಅಲ್ಲಿ ಇಂಥವನೊಬ್ಬನ ರಾಜ್ಯವೆಂಬುದೇ ಇರಲಿಲ್ಲ. ಅರಬರು ಬಲು ಶೂರರಾಗಿದ್ದರು. ಅಂತೆಯೇ ಅವರು ಮೇಲಿಂದಮೇಲೆ ತಮ್ಮ ತಮ್ಮೊಳಗೆ ಹೊಡೆದಾಡುತ್ತಿದ್ದರು. ಈ ಜಗಳದಲ್ಲಿ ರಕ್ತಪಾತವಾಗುತ್ತಿತ್ತು. ಮತ್ತು ಈ ಜಗಳವು ವಂಶಪರಂಪರವಾಗಿ ಸಾಗುತ್ತಿತು. ಅವರು ಸೆರೆಗುಡುಕರು, ಜೂಜುಗಾರರು. ಧರ್ಮದ ಬಗ್ಗೆ ಅವರ ಕಲ್ಪನೆಗಳು ಬಹಳ ಹಳೆಯ ಬಗೆಯಾಗಿದ್ದವು. ಸಮಾಜ ವ್ಯವಸ್ಥೆಯಾದರೂ ಚೆನ್ನಾಗಿರಲಿಲ್ಲ.

ಹೆಣ್ಣುಮಕ್ಕಳನ್ನು ಸರಿಯಾಗಿ ನಡೆಯಿಸಿಕೊಳ್ಳುತ್ತಿರಲಿಲ್ಲ. ಈ ಬಗೆಯ ಜನಧ ದೇಶದಲ್ಲಿ ಅವರ ಸುದೈವದಿಂದ ಮುಹಮ್ಮದ ಪೈಗಂಬರರು ಹುಟ್ಟಿದರು. ಅರಬರಿಗೆ ಅವರು ಸರಿಯಾದ ದಾರಿ ತೋರಿಸಿಕೊಟ್ಟರು.

**ಬಾಲ್ಯ**

ಶಿಶು ಮುಹಮ್ಮದನು ಇ. ಸ. 570 ರಲ್ಲಿ ಕುರೇಶ ಜಾತಿಯಲ್ಲಿ ಮಕ್ಕಾದಲ್ಲಿ ಹುಟ್ಟಿದನು. ಅವನ ತಂದೆಯ ಹೆಸರು ಅಬ್ದುಲ್ಲಾ ಹಾಗು ತಾಯಿಯ ಹೆಸರು ಅಮೀನಾ. ಅವನ ತಂದೆ ಈತನು ಹುಟ್ಟುವ ಆರು ತಿಂಗಳು ಮೊದಲೇ ತೀರಿದ್ದನು. ಈತ ಆರು ವರ್ಷದವನಿದ್ದಾಗ ಅವನ ತಾಯಿಯೂ ತೀರಿದಳು. ಅವನನ್ನು ಅವನ ಅಜ್ಜನೂ ತರುವಾಯ ಅವನ ಕಕ್ಕನೂ ಸಲಹಿದರು. ಕಕ್ಕನಿಗೆ ನೆರವಾಗಬೇಕೆಂದು ಅವನು ಸಣ್ಣವನಿರುವಾಗ ಆಡುಗಳನ್ನು ಮೇಯಿಸುತ್ತಿದ್ದನು, ಅಥವಾ ಎಷ್ಟೋ ಸಲ ಒಂಟೆಯ ಹಿಂಡಿಗೆ ನೀರು ಕುಡಿಸಲು ಅಡವಿಗೆ ಅಟ್ಟಿಕೊಂಡು ಹೋಗುತ್ತಿದ್ದನು.

**ಮದುವೆ**

ಮುಹಮ್ಮದನು ದೊಡ್ಡವನಾದನು. "ಖತೀಜಾ" ಎಂಬ ಧನವಂತಳಾದ ಸ್ತ್ರೀಯ ಬಳಿಗೆ ಕೆಲಸಹಿಡಿದನು. ಮುಹಮ್ಮದನು ತನ್ನ ಕರ್ತವ್ಯವನ್ನು ನಿರ್ವಂಚನೆಯಿಂದ ಮಾಡುತ್ತಿದ್ದನು. ಒಡತಿಗೆ ಅವನ ಕೆಲಸ ನೋಡಿ ತುಂಬ ಆನಂದವಾಗುತ್ತಿತ್ತು. ಅಕೆ ವಿಧವೆ. ಮುಂದೆ ಆಕೆ ಮುಹಮ್ಮದನನ್ನ ಮದುವೆಯಾದಳು. ಆಕೆಗೆ ನಾಲ್ವತ್ತು ವರ್ಷ, ಮುಹಮ್ಮದನಿಗೆ ಇಪ್ಪತ್ತೈದು ವಯಸ್ಸು. ಈ ಜೋಡಿ ಬಹಳ ಸುಖದಿಂದ ಸಂಸಾರ ಮಾಡಿತು.

**ಗವಿಯಲ್ಲಿಯ ಧ್ಯಾನ**

ವ್ಯಾಪಾರದ ಸಲುವಾಗಿ ಮುಹಮ್ಮದನು ಉಸುಕಿನ ಪ್ರದೇಶದಲ್ಲಿ ತಿರುಗಾಡಬೇಕಾಗುತ್ತಿತ್ತು. ಅವನು ಅದೆಷ್ಟೋ ಹಗಲು ರಾತ್ರಿಗಳನ್ನು ಪ್ರವಾಸದಲ್ಲಿ ಕಳೆದನು. ಆಗ ಅವನು ಜನರೊಡನೆ ಚರ್ಚೆ ಮಾಡುವನು. ಇದರಿಂದ ಅರಬರ ಕರುಣಾಜನಕ ಸ್ಥಿತಿಯು ಅವನ ಗಮನಕ್ಕೆ ಬಂದಿತು. ಅದರಿಂದ ಅವನಿಗೆ ಕೆಡಕೆನಿಸಿತು. ಮಕ್ಕೆಯ ಬಳಿ 'ಹೀರಾ' ಎಂಬ ಗುಡ್ಡವಿರುತ್ತದೆ. ಅಲ್ಲಿಯ ಗವಿಯಲ್ಲಿ ಕುಳಿತು ಧ್ಯಾನಮಾಡುತ್ತ ದೇವರ ಪ್ರಾರ್ಥನೆ ಮಾಡುವನು. ಅನೇಕ ವರ್ಷ ಹೀಗೆ ಈಶ ಚಿಂತನೆ ಮಾಡುತ್ತಿರಲು ಒಂದು ರಾತ್ರಿ ಅವನಿಗೆ ಸಾಕ್ಷಾತ್ಕಾರವಾಯಿತು.

## ಧರ್ಮ ಪ್ರಸಾರ

ಮುಹಮ್ಮದನು 'ಪೈಗಂಬರ'ನಾದನು. ತನ್ನ ಹೊಸ ಧರ್ಮದ ಪ್ರಚಾರಕ್ಕೆ ಪ್ರಾರಂಭಿಸಿದನು. ಮೂರು ವರ್ಷಗಳಲ್ಲಿ ಅವನಿಗೆ ತನ್ನ ಬಂಧು ಬಳಗದವರಿಂದ ಮೂವತ್ತು ಜನ ಶಿಷ್ಯರು ದೊರಕಿದರು. ಅವರೆಲ್ಲರಿಗೂ ಪೈಗಂಬರನ ಮೇಲೆ ಪೂರ್ಣ ವಿಶ್ವಾಸವಿತ್ತು. ಮುಂದೆ ಅವನು ಕುರೇಶ ಜನಗಳಿಗೆ ಪ್ರಕಟವಾಗಿಯೇ ತನ್ನ ಸಂದೇಶವನ್ನು ಹೇಳತೊಡಗಿದನು. " ನೀವು ಮೂರ್ತಿ ಪೂಜೆ ಮಾಡಬೇಡಿರಿ. ಹೀಗೆ ಮಾಡಿ ನೀವು ಪರಮೇಶ್ವರ ನಿಗೆ ಅಪಮಾನ ಮಾಡುತ್ತೀರಿ; ಸತ್ಯದಿಂದ ನಡೆದುಕೊಳ್ಳಿರಿ, ದಾನ ಧರ್ಮ ಮಾಡಿರಿ'' ಜನರಿಗೆ ಇದು ಸೇರಲಿಲ್ಲ. ಮೂರ್ತಿಪೂಜೆ ನಿಂತು ಹೋದರೆ ತಮಗೆ ದೊರಕುವ ದಾನಧನವು ನಿಂತುಬಿಡುವದೆಂದು ಪೂಜಾರಿ ಗಳಿಗೆ ಅನಿಸಿತು. ಅವರೆಲ್ಲ ಅವನನ್ನು ದ್ವೇಷಿಸಹತ್ತಿದರು. ಮುಹಮ್ಮದನ ಶಿಷ್ಯರಿಗೆ ಅವರು ಹಿಂಸೆ ಕೊಡತೊಡಗಿದರು. ಅವನನ್ನು ಹೊಡೆಯುವ ಹೊಂಚನ್ನು ಅವರು ಹೂಡಿದರು ಇದರ ಸುಳಿವು ಹತ್ತುತ್ತಲೇ ಅವನ ಶಿಷ್ಯರು ತಮ್ಮ ಗುರುವಿಗೆ ಮಕ್ಕಾಬಿಟ್ಟು ಹೋಗಲು ಸಲಹೆ ಕೊಟ್ಟರು. ಮಕ್ಕಾದಿಂದ ಅವನು ಮದೀನಾಕ್ಕೆ ತೆರಳಿದನು. ಇಸ್ಲಾಂ ಧರ್ಮಲ್ಲಿ ಈ ಘಟನೆಗೆ 'ಹಿಜರಾ' ಎಂದು ಹೇಳುತ್ತಾರೆ (ಕ್ರಿ. ಶ. 622).

## ರಾಜ್ಯವ್ಯವಸ್ಥೆ ಮತ್ತು ಸುಧಾಣೆರ

ಮದೀನಾ ವಾಸಿಗಳಿಗೆ ಮುಹಮ್ಮದನು ತನ್ನ ನಡೆವಳಿಯಿಂದ ಸರಳತೆಯನ್ನು ಕಲಿಸಿದನು ಅಲ್ಲದೆ ಅವನು ಧರ್ಮಪ್ರಸಾರ ಕೈಕೊಂಡನು. ಅವನು ಮದಿನಾ ನಿವಾಸಿಗಳ ಮುಂದಾಳ್ತನವನ್ನೇ ಕೈಕೊಂಡನಲ್ಲದೆ ಮದೀನಾದ ರಾಜ್ಯಭಾರವನ್ನೂ ನಡೆಯಿಸತೊಡಗಿದನು. ಅವನು ಅಲ್ಲಿ ಕಾನೂನುಗಳನ್ನು ರಚಿಸಿ, ಸುವ್ಯವಸ್ಥೆ ಉಂಟುಮಾಡಿದನು. ಹೆಣ್ಣುಮಕ್ಕ ಳನ್ನು ಒಳ್ಳೆಯ ರೀತಿಯಿಂದ ನಡೆಯಿಸಿಕೊಳ್ಳುವಂತೆ ಕಟ್ಟಪ್ಪಣೆ ಮಾಡಿದನು. ಬಾಲಹತ್ಯೆಯನ್ನು ನಿಲ್ಲಿಸಿಬಿಟ್ಟನು. ದೇವರ ಪೂಜೆಯ ಸಲುವಾಗಿ ನರಬಲಿ ಕೊಡುವ ಪದ್ಧತಿಯನ್ನು ತಡೆಗಟ್ಟಿದನು. ಜನರಿಗೆ ಪರಮೇಶ್ವರನ ಪ್ರಾರ್ಥನೆ ಮಾಡುವದನ್ನು ಕಲಿಸಿಕೊಟ್ಟನು. ಅವನ ಉಪದೇಶದ ಪ್ರಭಾ ವವು ಹೆಚ್ಚುತ್ತ ನಡೆಯಿತು. ಅವನ ಶಿಷ್ಯರ ಸಂಖ್ಯೆಯೂ ಬೆಳೆಯುತೊಡಗಿತು. ಕೊನೆಗೆ ಮಕ್ಕಾ ಪಟ್ಟಣವೂ ಕೈವಶವಾಯಿತು. ಮಸೀದೆಗಳು ನಿರ್ಮಾಣ ವಾಗಿ ಪ್ರಾರ್ಥನೆ ನಡೆದವು. ಮೂರ್ತಿ ಪೂಜೆ ನಿಂತಿತು. ಇದರಿಂದ

ಬಹಳ ಒಳ್ಳೆಯ ಪರಿಣಾಮವಾಯ್ತು. ಅರಬಸ್ಥಾನದ ತುಂಬ ಪಸರಿಸಿದ ಅನೇಕ ಗುಂಪುಗಳು ಈ ಇಸ್ಲಾಂ ಧರ್ಮವನ್ನು ಅನುಸರಿಸತೊಡಗಿದವು. ಇದರಿಂದ ಅರಬಸ್ಥಾನದಲ್ಲಿ ಸಂಘಟಿತ ಬಲವು ನಿರ್ಮಾಣವಾಯಿತು. ಮಹಮ್ಮದನು ಮದೀನಾದಲ್ಲಿ ತನ್ನ ವಯಸ್ಸಿನ ಅರವತ್ತೆರಡನೆಯ ವರ್ಷ ದೇಹವಿಟ್ಟನು. ( ಇ.ಸ. 637). ಮದೀನಾದಲ್ಲಿ ಅವನ ಗೋರಿ ಇದೆ. ಇಂದು ಅವನ ಅಸಂಖ್ಯ ಅನುಯಾಯಿಗಳು ಜಗತ್ತಿನ ತುಂಬೆಲ್ಲ ಹಬ್ಬಿ ಕೊಂಡಿದ್ದಾರೆ.

### ಅಭ್ಯಸನಗಳು

1. ಅರಬರಿಗೆ ಸರಿಯಾದ ದಾರಿಯನ್ನು ಪೈಗಂಬರರು ಹೇಗೆ ತೋರಿಸಿದರು?
2. ಕುರೇಶ ಜನರಿಗೆ ಪೈಗಂಬರರು ಏನು ಉಪದೇಶಮಾಡಿದರು ?

## 6. ಸಮ್ರಾಟ್ ಹರ್ಷವರ್ಧನ

ಗುಪ್ತಸಾಮ್ರಾಜ್ಯವು ಕೊನೆಗೊಂಡ ಬಳಿಕ ಉತ್ತರ ಭಾರತದಲ್ಲಿ ಚಿಕ್ಕ ಚಿಕ್ಕ ರಾಜ್ಯಗಳು ತಲೆಯೆತ್ತಿದವು. ಅವು ತಮ್ಮ ತಮ್ಮಲ್ಲಿ ಯುದ್ಧ ಮಾಡತೊಡಗಿದವು. ಹೂಣರೆಂಬ ಪರಕೀಯರ ದಂಡು ವಾಯವ್ಯದಿಂದ ಬರುತ್ತಿತ್ತು. ಈ ಜನರು ಅಶಿಕ್ಷಿತರೂ, ಕ್ರೂರರೂ ಆಗಿದ್ದರು ಅವರನ್ನು ನಿರ್ಮೂಲನ ಮಾಡುವ ಕಾರ್ಯವು ಸ್ಥಾನೇಶ್ವರದ ವರ್ಧನ ವಂಶಜನಾದ ಪ್ರಭಾಕರ ವರ್ಧನ ಎಂಬ ರಾಜನ ಮೇಲೆ ಬಿತ್ತು. ರಾಜ್ಯವರ್ಧನ ಮತ್ತು ಹರ್ಷವರ್ಧನ ಇವರಿಬ್ಬರು ಅವನ ಮಕ್ಕಳು. ರಾಜ್ಯಶ್ರೀ ಎಂಬ ವಳು ಅವನ ಮಗಳು. ಈ ಮಕ್ಕಳ ತಾಯಿಯ ಹೆಸರು ಯಶೋಮತಿ ರಾಜ್ಯಶ್ರೀಯ ವಿವಾಹವು ಕನೋಜದ ರಾಜನೊಡನೆ ಆಗಿದ್ದಿತು.

### ಹರ್ಷನು ರಾಜನಾದುದು

ಆಗಿನ ವಿಚಿತ್ರ ರಾಜಕೀಯ ಪರಿಸ್ಥಿತಿಯ ಮೂಲಕ, ತಂದೆಯ ತರುವಾಯ ಹರ್ಷನೇ ರಾಜನಾಗಬೇಕಾಯಿತು; ಏಕೆಂದರೆ ಅಣ್ಣನು. ಅಕಾಲದಲ್ಲಿ ತೀರಿಕೊಂಡನು; ತಂಗಿಯಾದ ರಾಜ್ಯಶ್ರೀಯು ವಿಧವೆಯಾಗಿ ಕಷ್ಟಕ್ಕೊಳಗಾದಳು. 16 ವರುಷದ ಹರ್ಷನು ತಂಗಿಯನ್ನು ಸಂತೈಸಿ ಕನೋಜದ ಆಡಳಿತದ ಹೊಣೆ ಹೊತ್ತನು ಸ್ಥಾನೇಶ್ವರ ಮತ್ತು ಕನೋಜ ರಾಜ್ಯಗಳೆರಡೂ ಕೂಡಿದವು. ಈ ರೀತಿಯಲ್ಲಿ ಹರ್ಷನ ಬಲ ಹೆಚ್ಚಾಯಿತು.

### ಹರ್ಷನ ರಾಜ್ಯ ವಿಸ್ತಾರ

ಹರ್ಷನಿಗೆ ಅನೇಕ ಸಲ ಯುದ್ಧಮಾಡುವ ಪ್ರಸಂಗಗಳು ಬಂದವು. ಮೊದಲಿನ 5-6 ವರ್ಷಗಳಲ್ಲಿ ಮಾಡಿದ ಯುದ್ಧಗಳು ಮಹತ್ವದವು. ಆಸಾಮುದ ರಾಜನಾದ ಭಾಸ್ಕರ ವರ್ಮನು ಇವನೊಡನೆ ಗೆಳೆತನ ಬೆಳೆಸಿದನು. ಅನಂತರ ಹರ್ಷನು ತನ್ನ ಅಣ್ಣನ ಕೊಲೆಗೆ ಕಾರಣನಾದ ಗೌಡನ (ಬಂಗಾಲ) ರಾಜನಾದ ಶಶಾಂಕನನ್ನು ಬಗ್ಗು ಬಡಿದು ಅಲ್ಲಿಂದ ಮಾಳವ ಗುಜರಾಥಗಳ ಕಡೆಗೆ ಹೊರಟನು. ಮುಂದೆ ಕೆಲವು ವರ್ಷಗಳಲ್ಲಿ ಅವನು ಗೌಡ (ಬಂಗಾಲ) ಮತ್ತು ಓಡಿಸಾ ಪ್ರಾಂತಗಳನ್ನು ಪೂರ್ಣವಾಗಿ ಗೆದ್ದನು. ಹೀಗೆ ಅವನ ರಾಜ್ಯವು ಕಾಠೇವಾಡದಿಂದ ಆಸಾಮುದ ವರೆಗೆ



ಸಮ್ರಾಟ್ ಹರ್ಷವರ್ಧನ

ಉತ್ತರ ಭಾರತದಲ್ಲಿ ಹಬ್ಬಿತ್ತು.

### ಹರ್ಷ-ಪುಲಿಕೇಶಿಯರ ಸೆಣಸಾಟ

ಹರ್ಷನಿಗೆ ನಿಜವಾಗಿ ವಿರೋಧವಾದದ್ದು ನರ್ಮದಾ ನದಿಯ ತೀರದಲ್ಲಿ. ಆಗ ದಕ್ಷಿಣದಲ್ಲಿ ಮಹಾಶೂರನಾದ 2ನೇ ಪುಲಿಕೇಶಿಯು ಬಾದಾಮಿಯಲ್ಲಿ ರಾಜ್ಯವಾಳುತ್ತಿದ್ದನು. ಅವನ ರಾಜ್ಯವು ನರ್ಮದೆಯ ವರೆಗೆ ಹಬ್ಬಿತ್ತು. ಹರ್ಷನು ಹಿಂದೆ ಸರಿದು ರಾಜಧಾನಿಗೆ ಮರಳಿದನು. ಆ ಬಳಿಕ ಆತನು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಹೋಗಲಿಲ್ಲ.

### ಹುಎನ್‌ತ್ಸಾಂಗನು ಬರೆದುದು:—

ಹರ್ಷನ ಆಡಳಿತದಲ್ಲಿ ಚೀನದ ಒಬ್ಬ ಶ್ರೇಷ್ಠ ಭೀಕ್ಷುವು ಭಾರತಕ್ಕೆ ಬೌದ್ಧ ಧರ್ಮದ ಅಭ್ಯಾಸಕ್ಕಾಗಿ ಬಂದಿದ್ದನು. ಅವನು 15 ವರುಷ ಭಾರತದಲ್ಲಿದ್ದನು. ಹೆಚ್ಚು ಕಾಲ ಹರ್ಷನ ರಾಜ್ಯದಲ್ಲಿಯೇ ಇದ್ದನು. ಅವನು ಭಾರತದ ಬಗ್ಗೆ ಒಂದು ಗ್ರಂಥವನ್ನು ಬರೆದಿದ್ದು ಅದರಲ್ಲಿ ಹರ್ಷನ ಕಾರ್ಯದಕ್ಷತೆಯ ಬಗೆಗೂ ಆ ಕಾಲದ ಧರ್ಮೋತ್ಸವದ ಬಗೆಗೂ

ಹೇಳಲಾಗಿದೆ. ಅವನು ಹೀಗೆ ಹೇಳುತ್ತಾನೆ : " ಪ್ರತಿ 5 ವರುಷಕ್ಕೊಮ್ಮೆ ತನ್ನ ರಾಜ್ಯದಲ್ಲಿ ಹರ್ಷನು ಬೌದ್ಧ ಧರ್ಮದವರ ಒಂದು ಮೇಳ*ವನ್ನು ಕೂಡಿಸುತ್ತಿದ್ದನು. ಆಗ ಹರ್ಷನ ಎಲ್ಲ ಮಾಂಡಲಿಕ ರಾಜರೂ ಬರುತ್ತಿದ್ದರು. ಈ ಮೇಳಕ್ಕೆ ಸುಮಾರು 5 ಲಕ್ಷ ಜನರು ಕೂಡುತ್ತಿದ್ದರು. ಈ ಜಾತ್ರೆಯು ಮೂರು ತಿಂಗಳುಗಳ ವರೆಗೆ ನಡೆಯುತ್ತಿತ್ತು. ಮೊದಲನೆಯ ದಿನ ಬುದ್ಧನ ಪುತ್ಥಳಿಯ ಪೂಜೆಯನ್ನು ವೈಭವದಿಂದ ಮಾಡುತ್ತಿದ್ದರು. ಎರಡನೆಯ ದಿನ ಸೂರ್ಯನನ್ನು, ಮೂರನೆಯ ದಿನ ಶಿವನನ್ನು ಪೂಜಿಸುತ್ತಿದ್ದರು, ನಾಲ್ಕನೆಯ ದಿನ ಸುಮಾರು 10 ಸಾವಿರ ಬೌದ್ಧ ಭಿಕ್ಷುಗಳ ಪರೀಕ್ಷೆ ಜರುಗಿ ಅವರವರ ಯೋಗ್ಯತೆಗೆ ತಕ್ಕಂತೆ ಸಂಭಾವನೆಯನ್ನು ಕೊಡುತ್ತಿದ್ದರು. ಮುಂದಿನ 20 ದಿವಸಗಳಲ್ಲಿ ವೈದಿಕ ಬ್ರಾಹ್ಮಣರಿಗೂ, ತರುವಾಯ 10 ದಿವಸಗಳಲ್ಲಿ ಜೈನ ಸನ್ಯಾಸಿಗಳಿಗೂ ದಕ್ಷಿಣೆ ಹಂಚುವ ರೂಢಿ ಇತ್ತು. ಈ ಶುಭಪ್ರಸಂಗದಲ್ಲಿ ಶ್ರೀಹರ್ಷನು ಆನೆ-ಸೈನ್ಯ ಇವೆರಡನ್ನು ಬಿಟ್ಟು ಉಳಿದ ತನ್ನ ಸಕಲ ಸಂಪತ್ತನ್ನು ಜನರಿಗೆ ದಾನ ಮಾಡುತ್ತಿದ್ದನು, ಇಂತು ಬುದ್ಧ ಮೂರ್ತಿಯ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿ ಈ ಸಮಾರಂಭವನ್ನು ಕೊನೆಗೊಳಿಸುತ್ತಿದ್ದನು. "

## ಶ್ರೀಹರ್ಷನ ವಿದ್ಯಾಪ್ರೀತಿ

ಹರ್ಷನು ವಿದ್ಯಾಪ್ರೇಮಿಯೂ, ಸ್ವತಃ ವಿದ್ವಾಂಸನೂ ಆಗಿದ್ದನು. ' ರತ್ನಾವಲೀ ' ' ಪ್ರಿಯದರ್ಶಿಕಾ ' ' ನಾಗಾನಂದ ' ಎಂಬ ಮೂರು ಸಂಸ್ಕೃತ ನಾಟಕಗಳನ್ನು ಆತನು ರಚಿಸಿದನು. ಇವನ ಆಸ್ಥಾನದಲ್ಲಿ ಬಾಣಭಟ್ಟ, ಮಯೂರ ಮೊದಲಾದ ಕವಿಶ್ರೇಷ್ಠರು ಇದ್ದರು. ಬಾಣಭಟ್ಟನು 'ಹರ್ಷಚರಿತ' ಮತ್ತು ' ಕಾದಂಬರಿ ' ಎಂಬ ಗ್ರಂಥಗಳನ್ನು ರಚಿಸಿದನು. ನಾಲಂದ ವಿಶ್ವವಿದ್ಯಾಲಯಕ್ಕೆ ಹರ್ಷನು ಕೆಲವು ಗ್ರಾಮಗಳನ್ನು ಉಂಬಳಿಯಿತ್ತನು.

ಹರ್ಷನು ಸ್ವತಃ ಬೌದ್ಧನಾದರೂ ವೈದಿಕ ಜೈನ ಧರ್ಮಗಳನ್ನು ಗೌರವದಿಂದ ಕಂಡನು. ಇವನು 24 ವರ್ಷ ರಾಜ್ಯವಾಳಿದನು. ಇವನ ರಾಜ್ಯದಲ್ಲಿ ಸುವ್ಯವಸ್ಥೆ ಪೂರ್ಣವಾಗಿ ನೆಲೆಗೊಂಡಿತ್ತು. ಹರ್ಷನು ತನ್ನ 62ನೆಯ ವರುಷದಲ್ಲಿ ಮರಣಹೊಂದಿದನು,

---

* ಪ್ರಸಿದ್ಧ ಕುಂಭಮೇಳದ ಪ್ರಾರಂಭವೇ ಇದೆಂದು ಕೆಲವರ ಮತ.

### ಅಭ್ಯಸನಗಳು

1. ಹರ್ಷನ ಕಾಲದ ಧರ್ಮೋತ್ಸವಗಳ ವರ್ಣನೆಯನ್ನು ಮಾಡಿರಿ.
2. ಕೆಳಗೆ ಕೊಟ್ಟ ವ್ಯಕ್ತಿಗಳನ್ನು ಕುರಿತು ಒಂದೊಂದು ವಾಕ್ಯವನ್ನು ಬರೆಯಿರಿ.
   ಹ್ಯುಎನ್‌ತ್ಸಾಂಗ, ಯಶೋಮತಿ, ರಾಜ್ಯಶ್ರೀ, ಬಾಣಭಟ್ಟ.
3. ಹರ್ಷನ ವಿದ್ಯಾಪ್ರೀತಿಯ ಬಗ್ಗೆ ನಿಮಗೆ ಏನು ಗೊತ್ತಿದೆ?

## 7. ಸತ್ಯಾಶ್ರಯ ಪುಲಿಕೇಶಿ

ಬಹಳ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಚಾಲುಕ್ಯ ಮನೆತನದ ಅರಸರು ಆಳುತ್ತಿದ್ದರು. ಅವರ ರಾಜಧಾನಿಯು 'ವಾತಾಪಿ' ಎಂಬ ಪಟ್ಟಣ. ವಿಜಾಪುರ ಜಿಲ್ಲೆಯ ಈಗಿನ ಬಾದಾಮಿಗೆ ಆಗ 'ವಾತಾಪಿಪುರ' ನ್ನುತ್ತಿದ್ದರು. ಈ ಚಾಲುಕ್ಯ ಮನೆತನದ ಅರಸರಲ್ಲಿ 2ನೇ ಪುಲಿಕೇಶಿಯು ಬಹಳ ಶೂರನು. ಇವನ ತಂದೆಯ ಹೆಸರು ಕೀರ್ತಿವರ್ಮ. ಪುಲಿಕೇಶಿಯು ಚಿಕ್ಕವನಿದ್ದಾಗಲೇ ಕೀರ್ತಿವರ್ಮನು ಮಡಿದನು. ಆದುದರಿಂದ ಪುಲಿಕೇಶಿಯ ಕಕ್ಕನಾದ ಮಂಗಳೇಶನು ರಾಜ್ಯವನ್ನು ಆಳತೊಡಗಿದನು. ಪುಲಿಕೇಶಿಯು ವಯಸ್ಸಿಗೆ ಬಂದನು. ಆದರೂ ಸಹ ಆತನ ಕಕ್ಕನು ಪುಲಿಕೇಶಿಗೆ ರಾಜ್ಯವನ್ನು ಬಿಡಲಿಲ್ಲ. ಆಗ ಪುಲಿಕೇಶಿಯು ತನ್ನ ಕಕ್ಕನೊಡನೆ ಯುದ್ಧವನ್ನು ಮಾಡಿದನು. ಯುದ್ಧದಲ್ಲಿ ಅವನನ್ನು ಸೋಲಿಸಿ ಕ್ರಿ. ಶ. 609 ರಲ್ಲಿ ತಾನೇ ಅರಸನಾದನು.


ಸತ್ಯಾಶ್ರಯ ಪುಲಿಕೇಶಿ

### ರಾಜ್ಯ ವಿಸ್ತಾರ

ಅರಸನಾದ ಮೇಲೆ ಅವನು ತನ್ನ ರಾಜ್ಯವನ್ನು ಬೆಳೆಸತೊಡಗಿದನು. ಪಶ್ಚಿಮದಲ್ಲಿ ಬನವಾಸಿಯ ಕದಂಬರನ್ನು ಸೋಲಿಸಿದನು. ಮೈಸೂರಿನ ಗಂಗರನ್ನು ಗೆದ್ದನು. ಮಲಬಾರದ ಆಲುಪರು ಇವನಿಗೆ ಅಂಜಿ ಹಿಂಜರಿದರು

ಕೊಂಕಣದ ಮೌರ್ಯರು ಸೋತರು. ಆ ಮೇಲೆ ಇವನು ತನ್ನ ರಾಜ್ಯದ ಉತ್ತರಕ್ಕೆ ಸಾಗಿದನು. ಗುಜರಾಥ, ಮಾಳವಾ ಮತ್ತು ರಜಪುತಾನಾ ಇವುಗಳ ಅರಸರನ್ನೂ ಗೆದ್ದನು.

ಈ ಕಾಲಕ್ಕೆ ಉತ್ತರ ಭಾರತದಲ್ಲಿ ಸಮ್ರಾಟ್ ಹರ್ಷವರ್ಧನನು ಅಲ್ಲಿಯ ಎಲ್ಲ ದೊರೆಗಳನ್ನು ಗೆದ್ದು ದಕ್ಷಿಣ ಭಾರತವನ್ನು ಸಹ ಗೆಲ್ಲ ಬೇಕೆಂದು ನರ್ಮದೆಯ ವರೆಗೆ ಸೈನ್ಯವನ್ನು ತಂದಿದ್ದನಷ್ಟೆ. ಪುಲಿಕೇಶಿಯ ಸೈನ್ಯವು ಎದುರಾಗಿ ನರ್ಮದೆಯ ದಂಡೆಯ ಮೇಲೆ ಇಬ್ಬರಿಗೂ ಬಹು ದೊಡ್ಡ ಕಾಳಗವಾಯಿತು. ಆದರಲ್ಲಿ ಹರ್ಷವರ್ಧನನು ಹಿಂದಕ್ಕೆ ಸರಿದನು (ಕ್ರಿ. ಶ. 620). ಮುಂದೆ ಅವನು ದಕ್ಷಿಣಕ್ಕೆ ಹಣಿಕಿ ಸಹ ಹಾಕಲಿಲ್ಲ.

ಇದಾದಮೇಲೆ ಪುಲಿಕೇಶಿಯು ಕೋಸಲ, ಕಳಿಂಗ, ವೆಂಗಿ, (ಗೋದಾವರಿ, ಕೃಷ್ಣಾ ನದಿಗಳ ನಡುವಿನ ಪ್ರದೇಶ) ನಾಡುಗಳನ್ನು ಗೆದ್ದನು. ಕಂಚಿಯ ಪಲ್ಲವ ಅರಸು ಚಾಲುಕ್ಯರ ಕಡುಹಗೆಗಳು. ಪಲ್ಲವ ಅರಸನಾದ ಮಹೇಂದ್ರವರ್ಮನನ್ನು ಪುಲಿಕೇಶಿಯು ಪೂರಾ ಸೋಲಿಸಿ, ಅವನ ರಾಜಧಾನಿಯಾದ ಕಂಚಿಯನ್ನು ಹಾಳುಮಾಡಿದನು. ಪಾಂಡ್ಯ, ಚೋಳ, ಕೇರಳ ರಾಜ್ಯಗಳು ಇವನ ಕೈವಶವಾದವು.

ಹೀಗೆ ಪುಲಿಕೇಶಿಯು ಪಶ್ಚಿಮ, ಪೂರ್ವ ಮತ್ತು ದಕ್ಷಿಣ ಸಮುದ್ರಗಳ ನಡುವಿನ ಎಲ್ಲ ರಾಜ್ಯಗಳನ್ನು ಗೆದ್ದು ಸಮ್ರಾಟನೆನಿಸಿಕೊಂಡನು. ಇಂಥ ಮಹಾ ವಿಜಯಕ್ಕೆ ಕಾರಣವಾದ ಅವನ ಸೈನ್ಯಕ್ಕೆ "ಕಾಂಚೀಶ-ಕೇರಳ ನರಾಧಿಪ–ಪಾಂಡ್ಯ–ಚೋಳ-ಶ್ರೀಹರ್ಷವಜ್ರಟ ವಿಭೇದ ವಿಧಾನ ದಕ್ಷಂ ಕರ್ನಾಟಕ ಬಲಂ" ಎಂಬ ಬಿರುದು ಇತ್ತು. ಬಳಿಕ ಪುಲಿಕೇಶಿಯು ಅಶ್ವಮೇಧ ಯಜ್ಞವನ್ನು ಮಾಡಿ ಸತ್ಯಾಶ್ರಯ, ಪೃಥಿವೀವಲ್ಲಭ, ಪರಮೇಶ್ವರ ಎಂಬ ಬಿರುದು ಧರಿಸಿದನು.

**ಆ ಕಾಲದ ಧಾರ್ಮಿಕ ಸ್ಥಿತಿ**

ಪುಲಿಕೇಶಿಯು ವೈದಿಕ ಧರ್ಮದವನಿದ್ದನು. ವಿಷ್ಣುಭಕ್ತನಾಗಿದ್ದನು. ಸಂಸ್ಕೃತ ಭಾಷೆಗೆ ಇವನು ಉತ್ತೇಜನ ಕೊಟ್ಟನು. ವೇದಗಳ ಅಭ್ಯಾಸ ವನ್ನು ಮಾಡುವದಕ್ಕಾಗಿ ಪಂಡಿತರಿಗೆ ಹೊಲಗಳನ್ನು ಕೊಡುತ್ತಿದ್ದನು. ಹೀಗೆ ಕೊಟ್ಟ ದಾನಗಳಿಗೆ 'ಅಗ್ರಹಾರ' ಎನ್ನುತ್ತಿದ್ದರು. ಚಾಲುಕ್ಯರು ವೈದಿಕ ಧರ್ಮದವರಿದ್ದರೂ ಬೌದ್ಧ, ಜೈನ ಮತದವರಿಗೆ ತೊಂದರೆ ಕೊಡುತ್ತಿರಲಿಲ್ಲ.

ಪತಿಗೆ ಒಬ್ಬ ಸೇವಕನಿದ್ದನು. ಆತನನ್ನು ಅಧಿಕಾರಿ ಬಹಳ ವಾಗಿ ಪ್ರೀತಿಸುತ್ತಿದ್ದನು. ಒಂದು ದಿವಸ ಈ ಸೇವಕನಿಗೆ ಜಡ್ಡಾಗಿ ಮರಣ ಹೊಂದಲು ಸಿದ್ಧನಾಗಿದ್ದನು.

ಆಗ ಶತಾಧಿಪತಿಯು ಜೇಸುನಾಥರ ಬಳಿಗೆ ಹೋಗಿ "ಆಳಿದವರೇ ನನ್ನ ಸೇವಕನು ವ್ಯಾಧಿಯಾಗಿ ಮನೆಯಲ್ಲಿ ಮಲ ಗಿದ್ದಾನೆ," ಎಂದನು ಅದಕ್ಕೆ ಜೇಸುನಾಥರು "ನಾವು ಬಂದು ಸ್ವಸ್ಥ ಪಡಿಸುವೆವು" ಎಂದರು. ಆದರೆ ಶತಾಧಿಪತಿ ಹೇಳಿದ್ದೇ ನಂದರೆ, ಆಳಿದವರೇ ತಾವು ನನ್ನ ಮನೆಯನ್ನು ಪ್ರವೇಶಿಸಲು ನಾನು ಪಾತ್ರನಲ್ಲ. ಆದರೆ ತಾವು ಒಂದು ವಾಕ್ಯ ಮಾತ್ರ ಪಾಲಿಸಿದರೆ ನನ್ನ ಸೇವಕನು ಗುಣ ಹೊಂದುವನು. ಯಾಕಂ ದರೆ ನನ್ನ ಕೈ ಕೆಳಗೆ ಸಹ ಅನೇಕ ಮಂದಿ ಸೇವಕರಿರುವರು. ನಾನು ಅವರಿಗೆ ಏನಾದರೂ ಹೇಳಿದ ಕೂಡಲೇ ವಿಧೇಯಿಸಿ ಮಾಡುವರು.

ಜೇಸುನಾಥರು ಈ ಶತಾಧಿಪತಿಯು ಮಾತನ್ನು ಕೇಳಿ ಆಶ್ಚರ್ಯ ಪಟ್ಟು ಸಂತೋಷಿಸಿ, ತಮ್ಮನ್ನು ಹಿಂಬಾಲಿಸಿದವ ರನ್ನು ನೋಡಿ ಹೀಗೆಂದರು "ನಾನು ಇಸ್ರಾಯೇಲರಲ್ಲಿ ಇಂಥ ವಿಶ್ವಾಸವನ್ನು ಕಾಣಲಿಲ್ಲ" ಎಂದು ಶತಾಧಿಪತಿಯು ಕಡೆಗೆ ತಿರುಗಿ, "ನೀನು ಹೋಗು," ನಿನ್ನ ವಿಶ್ವಾಸದ ಪ್ರಕಾರ ನಿನಗೆ ಆಗಲಿ," ಎಂದರು. ಹಾಗೆಯೇ ಅವನ ಸೇವಕನು ಸ್ವಸ್ಥವಾದನು.

ಈ ಪ್ರಕಾರವಾಗಿ ನಾವು ಸಹ ನಮ್ಮ ಅವಸರಗಳಲ್ಲಿ ಅಧಿಕ ವಿಶ್ವಾಸದೊಂದಿಗೆ ಜೇಸುನಾಥರನ್ನು ಬೇಡಿಕೊಳ್ಳಬೇಕು.

## 8. ಶ್ರೀಶಂಕರಾಚಾರ್ಯರು

ಶಂಕರಾಚಾರ್ಯರು ಗುಪ್ತವಂಶದ ಅರಸರ ಆಳಿಕೆಯನಂತರ ಹಿಂದು ಸ್ಥಾನದಲಿ ಹಿಂದು ( ವೈದಿಕ ) ಧರ್ಮದ ಪುನರುಜ್ಜೀವನವನ್ನು ಮಾಡಿ ಬಹು ಪ್ರಸಿದ್ಧಿಗೆ ಬಂದರು.

### ಜನನ ಮತ್ತು ಬಾಲ್ಯ

ಇವರು ಕ್ರಿ. ಶ. 788ರಲ್ಲಿ ಕೇರಳ ಪ್ರಾಂತ ( ಮಲಬಾರ )ದ ಕಾಲಟೀ ಗ್ರಾಮದಲ್ಲಿ ನಂಬುದ್ರಿ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ವಿದ್ಯಾಧಿರಾಜ



ಶ್ರೀ ಶಂಕರಾಚಾರ್ಯರು

ನೆಂಬ ಇವರ ಅಜ್ಜನೂ ಶಿವಗುರು ವೆಂಬ ಇವರ ತಂದೆಯೂ ಆಗಿನ ಕಾಲದಲ್ಲಿ ಸುಪ್ರಸಿದ್ಧ ಪಂಡಿತರೆನಿಸಿ ದರು. ಶಂಕರಾಚಾರ್ಯರ ತಾಯಿಯ ಹೆಸರು ಸತಿದೇವಿ. ಆರ್ಯಾಂಬೆಯೆಂದೂ ಇವಳನ್ನು ಕರೆ ಯಲಾಗುತ್ತಿತ್ತು. ಶಂಕರನು ಮೂರು ವರುಷದವನಿರುವಾಗಲೇ ಅವನ ತಂದೆ ಯಾದ ಶಿವಗುರು ಮರಣ ಹೊಂದಿ ದನು. ಅಂದಿನಿಂದ ತಾಯಿಯೆ ಇವ ನನ್ನು ಜೋಪಾನ ಮಾಡಿದಳು. ಅತಿ ಚಿಕ್ಕ ವಯಸ್ಸಿನಲ್ಲಿಯೇ ಶಂಕರನು ಅಗಾಧ ಬುದ್ಧಿ ಸಾಮರ್ಥ್ಯವನ್ನು ತೋರಿಸಿದನು. ಮಗನಿಗೆ ಐದು ವರುಷಗಳು ತುಂಬಿದ ಕೂಡಲೇ, ಸತಿ ದೇವಿಯು ಅವನ 'ಉಪನಯನ'ವನ್ನು ಮಾಡಿಸಿದಳು. ಅವನು ಚಿಕ್ಕವ ನಿರುವಾಗಲೇ ತನ್ನ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿದನು. ವಿದ್ವಾಂಸ ರಲ್ಲಿ ಅಗ್ರಗಣ್ಯನೆನಿಸಿದನು. ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ಅವನ ಮನದಾಶೆಯಿತ್ತು. ಆದರೆ ಅದಕ್ಕಾಗಿ ತಾಯಿಯಿಂದ ಅಪ್ಪಣೆ ದೊರೆಯುವದು ಶಂಕರನಿಗೆ ಅಸಾಧ್ಯವೆನಿಸಿತು. ಈ ಪರಿಸ್ಥಿತಿಯಲ್ಲಿ ಒಮ್ಮೆ ತಾಯಿ ಮಕ್ಕಳಿಬ್ಬರೂ ಸ್ನಾನಕ್ಕೆ ನದಿಗೆ ಹೋದಾಗ ನೀರಿನಲ್ಲಿಯ ಮೊಸಳೆ ಯೊಂದು ಶಂಕರನ ಕಾಲನ್ನು ಬಲವಾಗಿ ಹಿಡಿಯಿತಂತೆ. ಸನ್ಯಾಸಿಯಾಗ

ಟ್ಟರೆ ನಮಗೆ ಸಹ ಅದ್ಭುತ ಕಾರ್ಯಗಳನ್ನು ಮಾಡಬಹುದು. ಮತ್ತು ವಿಧವೆಯ ಸ್ತ್ರೀಯ ಮೇಲೆ ಕನಿಕರ ಪಟ್ಟ ಹಾಗೆ ನಮ್ಮ ಮೇಲೆ ಸಹ ಕನಿಕರ ಪಡಬಹುದು.

## 65 ಜೇಸುನಾಥರು ಮರಿಯ ಮಗ್ದಲೇನಮ್ಮನ ಪಾಪಗಳನ್ನು ಮನ್ನಿಸಿದ್ದು

ಒಂದು ದಿನ ಸಿಮೋನನೆಂಬ ಫರಿಜೇಯ ನೊಬ್ಬನು ಜೇಸುನಾಥರನ್ನು ತನ್ನ ಮನೆಗೆ ಊಟಕ್ಕೆ ಕರೆದಿದ್ದನು. ಇವರು ಬೇರೆ ಇತರ ಜನರೊಂದಿಗೆ ಭೋಜನ ಪಂಕ್ತಿಯಲ್ಲಿ ಕುಳಿತು ಕೊಂಡಿದ್ದಾಗ ಒಬ್ಬ ಸೌಂದರ್ಯವಾದ ಹೆಂಗಸು ಅಲ್ಲಿಗೆ ಬಂದಳು.

ಈಕೆಯ ಹೆಸರು ಮರಿಯ ಮಗ್ದಲೇ ನಮ್ಮ. ಈಕೆಯು ದೊಡ್ಡ ಪಾಪಿಷ್ಟಳೆಂದು ಎಲ್ಲ ಜನರಿಗೂ ಗೊತ್ತಿತ್ತು. ಆದರೂ ಒಂದು ಪರಿಮಳ ತೈಲದ ಸೀಸೆಯನ್ನು ತೆಗೆದುಕೊಂಡು ಜೇಸುನಾಥರು ಇದ್ದ ಕಡೆಗೆ ಅಳುತ್ತಾ ಹೋಗಿ ಅವರ ಪಾದದ ಮೇಲೆ ಬಿದ್ದಳು. ಮತ್ತು ತನ್ನ ಕಣ್ಣೀರಿನಿಂದ ಅವರ ಪಾದಗಳನ್ನು ತೊಳೆದು, ತನ್ನ ಉದ್ದವಾದ ಮತ್ತು ಸುಂದರವಾದ ಕೂದಲುಗಳಿಂದ ಅವುಗಳನ್ನು ಒರಸಿ ಬಹಳ ದುಃಖದಿಂದ ಅಲ್ಲೇ ಕೂತಿದ್ದಳು. ಕಡೆಗೆ ತಾನು ತಂದ ಪರಿಮಳ ತೈಲವನ್ನು ಅವರ ಪಾದದ ಮೇಲೆ ಸುರುವಿದಳು.

ಆಗ ಸಿಮೋನ್ ಫರಿಜೇಯನು ಮರಿಯಮ್ಮನು ಮಾಡಿದೆಲ್ಲವನ್ನು ಕಂಡು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ, “ಇವರು ನಿಜವಾದ ದೀರ್ಘದರ್ಶಿಯಾಗಿದ್ದರೆ ತನ್ನನ್ನು ಮಟ್ಟಿದ ಸ್ತ್ರೀ

ವೆಂದೂ * ಕರೆಯಲಾಗುತ್ತದೆ. ಕಾಶಿಯಲ್ಲಿಯೇ ಅವರು ವೇದಾಂತ ಸೂತ್ರಗಳು, ಉಪನಿಷತ್ತುಗಳು, ಮತ್ತು ಭಗವದ್ಗೀತೆ ಈ ಗ್ರಂಥಗಳಿಗೆ ಸಂಸ್ಕೃತ ಭಾಷೆಯಲ್ಲಿ ಟೀಕೆಗಳನ್ನು ಬರೆದರು. ಅವು ಈಗಲೂ ಶಾಂಕರ ಭಾಷ್ಯವೆಂದು ಹೆಸರಾಗಿರುವವು. ಇದಲ್ಲದೆ ಇನ್ನೂ ಅನೇಕ ಧಾರ್ಮಿಕ ಗ್ರಂಥಗಳನ್ನೂ ಸ್ತೋತ್ರಗಳನ್ನೂ ಸಂಸ್ಕೃತದಲ್ಲಿ ರಚಿಸಿರುವರು.

ಮತಪ್ರಚಾರಕ್ಕಾಗಿ ಶಂಕರಾಚಾರ್ಯರು ಮೂರು ಸಾರೆ ಇಡೀ ಹಿಂದುಸ್ತಾನದಲ್ಲಿ ಸಂಚಾರ ಮಾಡಿದರು. ರಾಮೇಶ್ವರದ ಯಾತ್ರೆಯನ್ನು ಮುಗಿಸಿದರು. ತಾಯಿಯ ಮರಣ ಸಮಯದಲ್ಲಿ ಅವಳ ಬಳಿಯಲ್ಲಿದ್ದು ಅಂತ್ಯವಿಧಿಗಳನ್ನು ನೆರವೇರಿಸಿದರು. ತಾವು ಪ್ರಚಾರ ಮಾಡಿದ ಧರ್ಮದ ಸಂರಕ್ಷಣೆಗಾಗಿ ಭಾರತದ ನಾಲ್ಕೂ ದಿಕ್ಕುಗಳಲ್ಲಿ ಮುಖ್ಯ ಮಠಗಳನ್ನು ಸ್ಥಾಪಿಸಿದರು. ಅವು ಯಾವವೆಂದರೆ : (1) ಉತ್ತರದಲ್ಲಿ ಬದರೀಕೇದಾರ ( ಹಿಮಾಲಯದಲ್ಲಿ ), (2) ಪಶ್ಚಿಮದಲ್ಲಿ ದ್ವಾರಕೆ, ( ಕಾಠಿವಾಡದಲ್ಲಿ ) (3) ಪೂರ್ವದಲ್ಲಿ ಜಗನ್ನಾಥಪುರಿ, ( ಒರಿಸಾದಲ್ಲಿ ) (4) ದಕ್ಷಿಣದಲ್ಲಿ ಶೃಂಗೇರಿ ( ಮೈಸೂರ ಪ್ರಾಂತದಲ್ಲಿ ). ಶೃಂಗೇರಿಯು ಆದ್ಯ ಪೀಠವು. ಅಲ್ಲಿಯ ಮಠಕ್ಕೆ ಸುರೇಶ್ವರಾಚಾರ್ಯರು ಮೊದಲನೆಯ ಮಠಾಧಿಪರಾದರು. ( ಇವರೇ ಶಂಕರಾಚಾರ್ಯರಿಂದ ಸೋಲಿಸಲ್ಪಟ್ಟ ಮಂಡನಮಿಶ್ರರು.)

## ಮರಣ ಮತ್ತು ಯೋಗ್ಯತೆ

ಶಂಕರಾಚಾರ್ಯರು ತಮ್ಮ ವಯಸ್ಸಿನ 32ನೆಯ ವರುಷದಲ್ಲಿ ಬದರೀಕೇದಾರದಲ್ಲಿ ದೇಹತ್ಯಾಗ ಮಾಡಿದರು. ಅವರು ವಿಖ್ಯಾತ ತತ್ವಜ್ಞಾನಿಗಳೆಂದೂ ಎಲ್ಲ ಹಿಂದುಗಳಿಗೆ ಜಗದ್ಗುರುಗಳೆಂದೂ ಹೆಸರಾದರು.

### ಅಭ್ಯಸನಗಳು

1) ಹಿಂದುಸ್ತಾನದ ಬಾಹ್ಯರೇಷೆಯ ನಕಾಶದಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಮುಖ್ಯ ಮಠಗಳ ಸ್ಥಳಗಳನ್ನು ಗುರುತಿಸಿರಿ.
2) ಶಂಕರಾಚಾರ್ಯರ ವೈದಿಕ ಧರ್ಮವು ಹೇಗೆ ಹೊಸ ಸ್ವರೂಪ ತಾಳಿತು ?
3) ಶಂಕರಾಚಾರ್ಯರಲ್ಲಿಯ ಅದ್ಭುತ ಪಾಂಡಿತ್ಯವನ್ನು ವರ್ಣಿಸಿರಿ.

* ಜೀವಾತ್ಮಾ ಮತ್ತು ಪರಮಾತ್ಮಾ ಇವುಗಳಲ್ಲಿ ಭೇದವಿಲ್ಲ. (ಪ್ರಾಣಿಗಳಲ್ಲಿಯ ಜೀವವು ಪರಮಾತ್ಮನ ಅಂಶವೇ ಆಗಿರುವದು ಎಂದು ಇವರ ಅಭಿಪ್ರಾಯ )

# 9. ರಾಜೇಂದ್ರ ಚೋಳ

## ಪೂರ್ವೇತಿಹಾಸ

ಅತಿ ಪ್ರಾಚೀನ ಕಾಲದಿಂದಲೂ ದ್ರವಿಡರು ದಕ್ಷಿಣ ಭಾರತದ ಮೂಲನಿವಾಸಿಗಳು. ಅದರಲ್ಲಿಯ ಈಗಿನ ಮಲಬಾರದಲ್ಲಿ ಚೇರರೂ, ಮಧುರೆ-ರಾಮೇಶ್ವರಗಳ ನಡುವಿನ ಪ್ರದೇಶದಲ್ಲಿ ಪಾಂಡರೂ, ಕಾವೇರಿ ನದಿಯ ಪ್ರದೇಶದಲ್ಲಿ ಚೋಳರೂ ರಾಜ್ಯಗಳನ್ನು ಕಟ್ಟಿಕೊಂಡರು. ಚೋಳರು ಮೇಲಾದ ನಾವಿಕರೆನಿಸಿ ಬಹುದೂರದ ದೇಶಗಳೊಂದಿಗೆ ವ್ಯಾಪಾರ ಮಾಡಿದರು. ಚೋಳರಾಜ್ಯವು ಕ್ರಿ. ಶ. 9ನೆಯ ಶತಮಾನದಲ್ಲಿ ತಲೆಯೆತ್ತಿ ಬೆಳೆದಿತು. ಈಗಿನ ತಂಜಾವರವೆ ಚೋಳ ಅರಸರ ರಾಜಧಾನಿಯಾಗಿತ್ತು. ಇವರಲ್ಲಿ ಮೊದಲನೆಯ ರಾಜೇಂದ್ರನೆಂಬವನು ಬಹು ಪ್ರಸಿದ್ಧನಾದ ರಾಜನಾಗಿ ಹೋದನು.



ರಾಜೇಂದ್ರ ಚೋಳ

## ಅರಸೊತ್ತಿಗೆ

ಇವನು ರಾಜರಾಜನೆಂಬ ಚೋಳರಾಜನ ಮಗ. ತಂದೆಯ ಮರಣದ ನಂತರ ಕ್ರಿ. ಶ. 1012ರಲ್ಲಿ ಚೋಳರಾಜ್ಯದ ಪಟ್ಟವೇರಿದನು. ದಕ್ಷಿಣ ಹಿಂದುಸ್ತಾನದಲ್ಲಿ ಆಳಿದ ಪ್ರಖ್ಯಾತ ಅರಸರಲ್ಲಿ ಇವನ ಗಣನೆಯಾಗುತ್ತದೆ. ಸಾರ್ವಭೌಮನೆಂದೆನಿಸಿ ಇವನು ಬಹಳ ವೈಭವದಿಂದ ರಾಜ್ಯವಾಳಿದನು. ರಾಜ್ಯವಿಸ್ತಾರಕ್ಕಾಗಿ ಬಹುತರ ಇಡೀ ದಕ್ಷಿಣ ಹಿಂದುಸ್ತಾನವನ್ನು ವಶಪಡಿಸಿಕೊಂಡನಲ್ಲದೆ, ಓಡಿಸಾ, ಬಂಗಾಲ ಪ್ರಾಂತಗಳವರೆಗೂ ದಾಳಿಯಿಟ್ಟನು. ಬ್ರಹ್ಮದೇಶದ ಪೇಗೂ ಪ್ರಾಂತ ಮತ್ತು ಮಲಯದ ನೆರೆಯಲ್ಲಿಯ ನಡುಗಡ್ಡೆಗಳೂ ಇವನ ವಶಕ್ಕೆ ಬಂದವು. ಸಿಂಹಳ ದ್ವೀಪವು ಇವನ ಪ್ರಭಾವಕ್ಕೊಳಪಟ್ಟಿತು. ಆಗಿನ ಕಾಲಕ್ಕೆ ಭಾರತದ ಪೂರ್ವದಲ್ಲಿದ್ದ ' ಕೊಟಾ ' ಎಂಬ ರಾಜ್ಯವನ್ನು ಜಾವಾದ

ಶೈಲೇಂದ್ರ ರಾಜನಿಂದ ಕಿತ್ತುಕೊಂಡನು. ಗಂಗಾ ನದಿಯವರೆಗೆ ದಂಡೆತ್ತಿ ಹೋದದ್ದರಿಂದ ಇವನಿಗೆ 'ಗಂಗೈಕೊಂಡ' ಎಂಬ ಬಿರುದು ದೊರೆಯಿತು. ಇವನು ಬೇರೊಂದು ರಾಜಧಾನಿಯನ್ನು ಕಟ್ಟಿ ಅದಕ್ಕೆ ಗಂಗೈಕೊಂಡು ಪುರ*ವೆಂದು ' ಹೆಸರಿಟ್ಟನು. ಇವನ ನೌಕಾ ಸೇನೆಯು ಪ್ರಬಲವೆನಿಸಿ ಬಂಗಾಲ ಉಪಸಾಗರವನ್ನೆಲ್ಲ ವಶಪಡಿಸಿಕೊಂಡಿತ್ತು. ಕ್ರಿ. ಶ. 1092 ರಲ್ಲಿ ಇವನು ಮರಣ ಹೊಂದಿದನು.

### ರಾಜ್ಯದಾಡಳಿತೆ

ಆಡಳಿತೆಯ ಮೂಲ ಘಟಕವು ಗ್ರಾಮವಾಗಿದ್ದಿತು. ಇಲ್ಲಿ ಒಂದು 'ಪಂಚಾಯಿತಿ' ಇದ್ದು ಭೂಮಿಯ ಒಡೆತನವೆಲ್ಲ ಸೇರಿದ್ದಿತು. ಇದು ನೀರಾವರಿ ಯೋಜನೆ ನ್ಯಾಯದಾನ ಮುಂತಾದವುಗಳನ್ನು ನೋಡಿ ಕೊಂಡಿತು. 'ಕುರಂ,' 'ಕೊಟ್ಟಂ,' 'ನಾಡು' ಇವು ರಾಜ್ಯದ ಇತರ ಘಟಕ ಗಳು. ಒಕ್ಕಲಿಗನು ಹೊಲದ ಆದಾಯದಲ್ಲಿ $\frac{1}{6}$ ಭಾಗವನ್ನು ಕಂದಾಯ ರೂಪದಿಂದ ಅರಸನಿಗೆ ಸಲ್ಲಿಸುತ್ತಿದ್ದನು. ಅಲ್ಲಿಯ ನಾಣ್ಯಗಳಲ್ಲಿ, 'ಕಾಸು' ಎಂಬುದು ತೀರ ಕಡಿಮೆ ಬೆಲೆಯದಿತ್ತು.

#### ಅಭ್ಯಸನಗಳು

1. ರಾಜೇಂದ್ರನ ದೊಡ್ಡಸ್ತಿಕೆಯ ಉದಾಹರಣೆಗಳನ್ನು ಕೊಡಿರಿ.
2. ಹಿಂದುಸ್ತಾನದ ಬಾಹ್ಯರೇಷೆಯ ನಕಾಶದಲ್ಲಿ ರಾಜೇಂದ್ರ ಚೋಳನು ಗದ್ದ ರಾಜ್ಯಗಳನ್ನು ಗುರುತಿಸಿರಿ.
3. ರಾಜೇಂದ್ರ ಚೋಳನ ಆಡಳಿತೆಯ ಕೆಲವು ಮುಖ್ಯ ವಿವರಗಳನ್ನು ಹೇಳಿರಿ.

## 10. ಶ್ರೀರಾಮಾನುಜಾಚಾರ್ಯರು

### ಬಾಲ್ಯ ಮತ್ತು ಪೂರ್ವಾಶ್ರಮ

ತಮಿಳುನಾಡಿನಲ್ಲಿ ಪೆರಂಬದೂರು ಎಂಬ ಗ್ರಾಮವಿದೆ. ಇದುವೆ ಶ್ರೀರಾಮಾನುಜರ ಜನ್ಮಸ್ಥಳ. ಇವರ ತಂದೆ ಕೇಶವ ಸೋಮಯಾಜಿ, ತಾಯಿ ಕಾಂತಿಮಣಿ; ಈ ದಂಪತಿಗಳು ಸದಾಚಾರ ಸಂಪನ್ನರು. ಬಾಲಕ ರಾಮಾನುಜನ ಸೋದರಮಾವ ಶೈಲಪೂರ್ಣರೆಂಬವರು ತಿರುಪತಿ ಕ್ಷೇತ್ರದಲ್ಲಿ ವೆಂಕಟರಮಣ ದೇವರ ಸೇವೆಯಲ್ಲಿ ತೊಡಗಿದ್ದರು. ಇವರಲ್ಲಿಯೇ

*ಇದು ಈಗಿನ ತ್ರಿಚಿನಾಪಲ್ಲಿ ಜಿಲ್ಲೆಯಲ್ಲಿದೆ. ಈ ಹೊಸ ರಾಜಧಾನಿಯಲ್ಲಿ ಒಂದು ಭವ್ಯವಾದ ಅರಮನೆಯನ್ನೂ ಒಂದು ವಿಶಾಲವಾದ ಸರೋವರ ವನ್ನೂ ಕಟ್ಟಿಸಿದನು.



ಶ್ರೀ ರಾಮಾನುಜಾಚಾರ್ಯರು

ರಾಮಾನುಜರ ವಿದ್ಯಾಭ್ಯಾಸ ಆರಂಭ ವಾಯಿತು. ಮುಂದೆ ದೊಡ್ಡವರಾದೊಡನೆ 'ಯಾದವ ಪ್ರಕಾಶ'ರೆಂಬ ಗುರುಗಳಲ್ಲಿ ಶ್ರೀ ಶಂಕರಾಚಾರ್ಯರಿಂದ ಬೋಧಿಸಲ್ಪಟ್ಟ ಅದ್ವೈತ ಮತವನ್ನು ಚಿಕ್ಕಂದಿನಲ್ಲೇ ಓದಿದರು. ಆ ಮತದ ಎಷ್ಟೋ ತತ್ವಗಳು ಅವರಿಗೆ ಸರಿಯೆನಿಸಲಿಲ್ಲ. ಅಂದು ವೈದಿಕ ವಿದ್ಯೆಯ ಕೇಂದ್ರವಾದ ಕಂಚಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ತೆರಳಿದರು.

**ಸಂನ್ಯಾಸ ಸ್ವೀಕಾರ ಮತ್ತು ಶ್ರೀವೈಷ್ಣವ ಮತದ ಪ್ರಸಾರ**

ರಾಮಾನುಜರ ಮೊದಲು ತಮಿಳು ನಾಡಿನಲ್ಲಿ 'ಆಳ್ವಾರ' ರೆಂಬ ಅನೇಕ ವಿಷ್ಣುಭಕ್ತರು ಆಗಿಹೋಗಿದ್ದರು. ಇವರಲ್ಲಿ ಬ್ರಾಹ್ಮಣ, ಶೂದ್ರ, ಅಸ್ಪೃಶ್ಯ ಮೊದಲಾದ ಎಲ್ಲ ಜಾತಿಯ ಭಕ್ತರೂ ಇದ್ದರು. ಈ ಭಕ್ತಿ ಪಂಥಕ್ಕೆ ಸೇರಿದ 'ಕಂಚೀಪೂರ್ಣ' ಎಂಬ ಒಬ್ಬ ಅಬ್ರಾಹ್ಮಣ ಭಕ್ತನ ಸಾಧು ಜೀವನದಿಂದ ತರುಣ ರಾಮಾನುಜರು ಆಕರ್ಷಿತರಾದರು. ಇಷ್ಟರಲ್ಲಿ 'ಯಾಮುನಾಚಾರ್ಯ' ರೆಂಬ ವೈಷ್ಣವ ಪಂಥದ ಪಂಡಿತರು ತಮ್ಮ ಪಂಥದ ಪ್ರಚಾರ ಮಾಡುತ್ತ ಶ್ರೀರಂಗ ಕ್ಷೇತ್ರಕ್ಕೆ ಬಂದಿದ್ದರು.

ಅವರು ತರುಣ ರಾಮಾನುಜರೇ ತಮ್ಮ ಪಂಥದ ಮುಂದಾಳು ಎಂದು ನಿರ್ಣಯಿಸಿ ಅವರನ್ನು ಕರೆಕಳುಹಿಸಿದರು. ಗುರುವಿನ ಕೊನೆಯ ದರ್ಶನವೇನೋ ಶಿಷ್ಯ ರಾಮಾನುಜರಿಗೆ ಆಗಲಿಲ್ಲ. ಆದರೆ ಅವರು ಸಂನ್ಯಾಸವನ್ನು ಸ್ವಿಕರಿಸಿ ವೈಷ್ಣವ ಮತವನ್ನು ಮುಂದೆ ತರಲು ತಮ್ಮ ಜೀವನವನ್ನೇ ಮುಡುಪಿಟ್ಟರು. ರಾಮಾನುಜರಿಂದ ಮುಂದೆ ಬಂದ ವೈಷ್ಣವ ಮತಕ್ಕೆ 'ಶ್ರೀ ವೈಷ್ಣವ ಮತ' ವೆಂದೂ 'ವಿಶಿಷ್ಟಾದ್ವೈತ' ಮತವೆಂದೂ ಹೆಸರು ಬಿದ್ದಿದೆ. ಜೀವವು ಮುಕ್ತಿಯನ್ನು ಪಡೆವನವರಿಗೂ ದೇವರಿಂದ ಭಿನ್ನವೆಂದೂ ಭಕ್ತಿಯೇ ಮುಕ್ತಿಗೆ ಸಾಧನವೆಂದೂ ಕೊನೆಯಲ್ಲಿವಿಷ್ಣುವಿನಲ್ಲಿ ಜೀವವು ಒಂದಾಗುವದೆಂದೂ ಹೇಳುವ ಮತವೇ ವಿಶಿಷ್ಟದ್ವೈತ ಮತವು. ಈ ಹೊಸ ಮತದ ಬೋಧಕರೆಂದು ರಾಮಾನುಜಾಚಾರ್ಯರು ಕೀರ್ತಿಪಡೆದರು.

ಆದರೆ ಆಚಾರ್ಯರಿಗೆ ತಮಿಳು ನಾಡಿನಲ್ಲಿ ರಾಜಾಶ್ರಯ ದೊರೆಯಲಿಲ್ಲ; ಅಲ್ಲಿಯ ಚೋಳ ರಾಜರು ಶೈವರಾಗಿದ್ದರು. ಈ ಚೋಳರ ಪ್ರತಿಸ್ಪರ್ಧಿಗಳಾದ ದಕ್ಷಿಣ ಕರ್ನಾಟಕದ ಹೊಯ್ಸಳರು ರಾಮಾನುಜಾಚಾರ್ಯರ ಹೊಸ ಮತಕ್ಕೆ ಆಕರ್ಷಿತರಾಗಿ ರಾಜಾಶ್ರಯವಿತ್ತರು. ಅಂದಿನ ಹೊಯ್ಸಳ ರಾಜ ಬಿಟ್ಟಿದೇವನು ತನ್ನ ಜೈನ ಮತವನ್ನು ತೊರೆದು ಶ್ರೀವೈಷ್ಣವ ಮತವನ್ನು ಸ್ವೀಕರಿಸಿ 'ವಿಷ್ಣುವರ್ಧನ' ಎಂಬ ಹೊಸ ಹೆಸರನ್ನು ತಳೆದನು; ಹಾಗೂ ಈ ಮತದ ಮೇಲ್ಮೆಗಾಗಿ ಬೇಲೂರಿನಲ್ಲಿ ಚೆನ್ನಕೇಶವ ದೇವಾಲಯವನ್ನು ಕಟ್ಟಿಸಿದನು.

## ಆಚಾರ್ಯರ ಹಿರಿಮೆ

ಶ್ರೀ ರಾಮಾನುಜರ ಶಿಷ್ಯರು ಈಗ ದಕ್ಷಿಣ ಭಾರತದಲ್ಲಿ ಮೈಸೂರು ಮದ್ರಾಸ ರಾಜ್ಯಗಳಲ್ಲಿ ಹೆಚ್ಚು. ಮೇಲ್ಕೋಟೆಯು ಶ್ರೀವೈಷ್ಣವರಿಗೆ ಪುಣ್ಯಕ್ಷೇತ್ರವಾಗಿದ್ದು ಮೈಸೂರರಾಜ್ಯದಲ್ಲಿ ಇದೆ. ಅಲ್ಲಿ ಆದಿನಾರಾಯಣಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ವಿಷ್ಣುವಿನ ಕೈಂಕರ್ಯಕ್ಕೆ ಒಂದು ಯೋಜನೆ ಮಾಡಿದರು. ಈ ಕ್ಷೇತ್ರದಲ್ಲಿ ಹರಿಜನರಿಗೆ ವರ್ಷದಲ್ಲಿ ಒಂದು ದಿನ ದೇವರ ದರ್ಶನದ ಸೌಕರ್ಯವನ್ನು ರಾಮಾನುಜಾಚಾರ್ಯರು ಒದಗಿಸಿಕೊಟ್ಟರು. ಈ ಹಿರಿಯರಿಂದಲೆ ಉತ್ತರ ಭಾರತದಲ್ಲಿ ರಮಾನಂದನೆಂಬವನು ಪ್ರೇರಣೆಗೊಂಡು ವಿಷ್ಣುಭಕ್ತಿಯನ್ನು ಮುಂದಕ್ಕೆ ತಂದನು. ಆಚಾರ್ಯರು ತಮ್ಮ ಮತದ ಪ್ರಸಾರಕ್ಕಾಗಿ ಅಖಿಲ ಭಾರತದಲ್ಲಿ ಪ್ರವಾಸ ಕೈಕೊಂಡರು. ದಿಲ್ಲಿಯ ಸುಲ್ತಾನನ ಅರಮನೆಯಲ್ಲಿದ್ದ ಲಕ್ಷ್ಮೀವಿಗ್ರಹವನ್ನು ತಂದರೆಂದೂ ಸುಲ್ತಾನನ ಮಗಳು ಮೇಲ್ಕೋಟೆಗೆ ಬಂದು ಆದಿನಾರಾಯಣನಲ್ಲಿ ಐಕ್ಯವಾದಳೆಂದೂ ಕಥೆಯಿದೆ. ಅವಳ ಹೆಸರೇ 'ಬೀಬೀ ನಾಚ್ಚಿಯಾರ್'.

ಆಚಾರ್ಯರು 1137ರಲ್ಲಿ ನೂರಿಪ್ಪತ್ತು ವರ್ಷದವರಾಗಿ ತಮ್ಮ ದೇವರಲ್ಲಿ ಒಂದಾದರು. ಮೇಲ್ಕೋಟೆ ಶ್ರೀರಂಗ ಕ್ಷೇತ್ರಗಳೂ ಆಚಾರ್ಯರ ಅನೇಕ ಗ್ರಂಥಗಳೂ ಅವರ ಹೆಸರನ್ನು ಅಜರಾಮರವನ್ನಾಗಿ ಮಾಡಿವೆ.

### ಅಭ್ಯಸನಗಳು

1. ಶ್ರೀ ರಾಮಾನುಜರ ಪೂರ್ವಾಶ್ರಮದ ಬಗ್ಗೆ 10 ಸಾಲು ಬರೆಯಿರಿ.
2. ಶ್ರೀವೈಷ್ಣವ ಮತ, ಆಳ್ವಾರರು, ಮೇಲ್ಕೋಟೆ, ಬೀಬೀ ನಾಚ್ಚಿಯಾರ್ ಇವುಗಳ ಬಗ್ಗೆ ಟಿಪ್ಪಣಿ ಬರೆಯಿರಿ.
3. ಹರಿಜನರನ್ನು ಅವರು ಹೇಗೆ ಮುಂದಕ್ಕೆ ತಂದರು ?

## 11. ಶ್ರೀ ಬಸವೇಶ್ವರರು

ಕರ್ನಾಟಕದಲ್ಲಿ ಲಿಂಗವಂತ ಅಥವಾ ವೀರಶೈವ ಮತದ ಜನರು ದೊಡ್ಡ ಪ್ರಮಾಣದಲ್ಲಿ ಇದ್ದಾರೆ. ಈ ಮತವನ್ನು ಮುಂದಕ್ಕೆ ತಂದವರು ಶ್ರೀ ಬಸವೇಶ್ವರರು. ಈ ಪುಣ್ಯಪುರುಷರು ಆಗಿಹೋಗಿ 800 ವರ್ಷಗಳಾದವು.

### ಹುಟ್ಟು ಮತ್ತು ಬಾಲ್ಯ

ವಿಜಾಪುರ ಜಿಲ್ಹೆಯಲ್ಲಿ 'ಬಸವನಬಾಗೇವಾಡಿ' ಎಂಬದೊಂದು ಊರಿದೆ. ಏಕೆಂದರೆ ಇದೇ ಊರಲ್ಲಿ ಬಸವೇಶ್ವರರು ಜನಿಸಿದರು ( 1132 ).



ಶ್ರೀ ಬಸವೇಶ್ವರರು

ತಂದೆ ಮಾದರಸ, ತಾಯಿ ಮಾದ ಲಾಂಬಿಕೆ. ಈ ದಂಪತಿಗಳು ಆರಾಧ್ಯ ಶೈವಬ್ರಾಹ್ಮಣರು. ಜಾತವೇದ ಮುನಿಗಳೆಂಬ ಸಾಧುಗಳು ಮಗು ' ಬಸವ 'ನಿಗೆ ' ಲಿಂಗದೀಕ್ಷೆ 'ಯನ್ನು ಇತ್ತರು. ಬಾಲಕನು ಎಂಟು ವರ್ಷ ದವನಾಗಲು ಮಾದರಸನು ಬ್ರಾಹ್ಮಣ ಕುಲಾಚಾರಕ್ಕೆ ಅನುಸರಿಸಿ ಉಪ ನಯನ ( ಮುಂಜಿ ) ಮಾಡುವದಕ್ಕೆ ಹವಣಿಸಿದನು. ' ಲಿಂಗದೀಕ್ಷೆ ' ತನಗೆ ಈ ಮೊದಲೇ ಆದುದರಿಂದ ಮುಂಜಿ ತನಗೆ ಬೇಡವೆಂದು ಬಾಲಕನು ಹಟತೊಟ್ಟನು. ತಾಯಿ ತಂದೆಗಳು ಇದು ಸರಿಯಲ್ಲವೆಂದರು.

### ತಂದೆಯ ಮನೆ ತೊರೆದುದು

ಅಂದೇ ರಾತ್ರಿ ಬಸವಣ್ಣನು ಮನೆಯಿಂದ ಹೊರಬಿದ್ದು ' ಸಂಗಮ ' ಕ್ಷೇತ್ರಕ್ಕೆ ಬಂದನು. ಅಲ್ಲಿ ಈಶ್ವರನ ಪೂಜೆಯಲ್ಲಿ ತನ್ಮಯನಾದನು. ಜಾತವೇದ ಮುನಿಗಳು ಉಪದೇಶ ಮಾಡಿದರು. ಕೆಲವು ವರುಷ ಕಳೆದವು. ಸೋದರಮಾವ ಬಲದೇವನೆಂಬವನು ಕಲ್ಯಾಣದಲ್ಲ ಆಳುತ್ತಿದ್ದ ಬಿಜ್ಜಳನ ಮಂತ್ರಿಯಾಗಿದ್ದನು. ಆತನು ತನ್ನ ಮಗಳಾದ ಗಂಗಾಂಬಿಕೆಯನ್ನು ಬಸ ವನಿಗೆ ಮದುವೆ ಮಾಡಿಕೊಟ್ಟನು. ಆಸ್ಥಾನದಲ್ಲಿ ಕರಣಿಕನ ಕೆಲಸ ಕೊಡಿಸಿದನು.

## ಕಲ್ಯಾಣದಲ್ಲಿ ಮಂತ್ರಿಯಾದುದು

ಕೆಲ ಕಾಲ ಕಳೆಯಲು ಮಂತ್ರಿ ಬಲದೇವನು ತೀರಿಕೊಂಡ ಬಳಿಕ ಪ್ರಮುಖ ಜನರ ಸಲಹೆಯಂತೆ ಬಸವಣ್ಣನನ್ನು ಬಿಜ್ಜಳನು ಮುಖ್ಯ ಮಂತ್ರಿಯಾಗಿ ಮಾಡಿಕೊಂಡ. ಅಂದಿನಿಂದ ಬಸವೇಶ್ವರರು ರಾಜಕಾರ್ಯ ಗಳನ್ನೆಲ್ಲ ಚೊಕ್ಕಟವಾಗಿ ಸಾಗಿಸುತ್ತಿದ್ದರು. ತಮ್ಮ ಮನೆಯಲ್ಲಿ ಶಿವಭಕ್ತ ರಾದ ಜಂಗಮರನ್ನು ಪೂಜಿಸುತ್ತಿದ್ದರು. ಸಿದ್ಧರಸನೆಂಬ ದಂಡನಾಯಕನು ತನ್ನ ಮಗಳಾದ ನೀಲಾಂಬಿಕೆಯನ್ನು ಬಸವೇಶ್ವರರಿಗೆ ಮದುವೆ ಮಾಡಿಕೊಟ್ಟನು.

## ವೀರಶೈವ ಮತವನ್ನು ಮುಂದಕ್ಕೆ ತಂದುದು

ಬಸವಣ್ಣನವರ ಭಕ್ತಿ ಎಂಟುದಿಕ್ಕಿಗೂ ಹಬ್ಬಿತು. ಬೇರೆ ಬೇರೆ ದಿಕ್ಕುಗಳಿಂದ ನೂರಾರು ಶಿವಶರಣರು ಕಲ್ಯಾಣಕ್ಕೆ ಬಂದರು. 'ಶಿವಾನುಭವ ಮಂಟಪ' ಎಂಬ ಹೊಸ ವಿಚಾರದ ಧಾರ್ಮಿಕ ಸಂಸ್ಥೆ ತಲೆ ಎತ್ತಿತು. ಅಲ್ಲಿ ವೀರಶೈವ ಮತದ ತತ್ವಗಳು ಚರ್ಚಿಸಲ್ಪಟ್ಟು ನಿರ್ಣಯ ಗೊಂಡವು. ಬಸವೇಶ್ವರರ ಕೀರ್ತಿಯನ್ನು ಕೇಳಿ ಕಲ್ಯಾಣಕ್ಕೆ ಬಂದವರಲ್ಲಿ ಬನವಾಸಿಯ ಅಲ್ಲಮಪ್ರಭು, ಸೊಲ್ಲಾಪುರದ ಸಿದ್ಧರಾಮ, ಮೈಸೂರಿನ ಅಕ್ಕಮಹಾದೇವಿ, ಸೌರಾಷ್ಟ್ರದ ಆದಯ್ಯ, ಕಾಶ್ಮೀರದ ಮಾರಯ್ಯ ಮೊದಲಾದವರು ಮುಖ್ಯರು. ಬಸವಣ್ಣನ ಸತಿಯರೂ ಸೋದರಳಿಯ ಚೆನ್ನಬಸವಣ್ಣನೂ ಇದ್ದರು. ಹೀಗೆ ಮುಂದಕ್ಕೆ ಬಂದ ವೀರಶೈವ ಮತವು ಶಿವಭಕ್ತರಲ್ಲಿ ಜಾತಿಭೇದವಿಲ್ಲವೆಂಬುದಾಗಿ ಸಾರಿತು, ಹಳೆಯ ವೈದಿಕ ಮತ್ತು ಜೈನ ಮತದವರಿಗೂ ಈ ಹೊಸ ಮತದವರಿಗೂ ವಾಗ್ವಾದ ನಡೆಯಿತು.

## ರಾಜ, ಮಂತ್ರಿ ಇವರಲ್ಲಿ ವಿರಸ

ಮಧುವಯ್ಯ ಮತ್ತು ಹರಳಯ್ಯ ಎಂಬ ಶಿವಭಕ್ತರ ಬೀಗತನದ ಪ್ರಕರಣ ರಾಜಧಾನಿಯಲ್ಲಿ ಬಿರುಗಾಳಿಯನ್ನು ಎಬ್ಬಿಸಿತು. ಜನ್ಮದಿಂದ ಮಧುವಯ್ಯನು ಬ್ರಾಹ್ಮಣ ಕುಲಕ್ಕೂ ಹರಳಯ್ಯನು ಮಾದಿಗ ಕುಲಕ್ಕೂ ಸೇರಿದ್ದರು. ಈ ಮಿಶ್ರವಿವಾಹದ ಪ್ರಸಂಗದಲ್ಲಿ ಸನಾತನಿಗಳು ಮತ್ತಷ್ಟು ಕೆರಳಿದರು; ಆ ಜನ ಬಿಜ್ಜಳನ ಎದುರು ಏನೇನೋ ಹೇಳಿದರು. ಅರಸನು ವಿಕಾರವಶನಾಗಿ ಈ ಶಿವಭಕ್ತರ ಕಣ್ಣುಗಳನ್ನು ಕೀಳಿಸಿದ. ಆಗ ರಾಜ, ಮಂತ್ರಿ ಇವರಲ್ಲಿ ವಿರಸವಾಯಿತು. ದುರ್ದೈವದಿಂದ ಶಿವಶರಣರಲ್ಲಿಯೂ

ಎರಡು ಬಣಗಳಾಗಿಬಿಟ್ಟವು. ಒಂದು ಬಣಕ್ಕೆ ಅಂಬಿಗರ ಚೌಡಯ್ಯನು ಮುಂದಾಳಾದನು. ಬಿಜ್ಜಳನ ಕೊಲೆಯಾಯಿತು. ಶಿವಾನುಭವ ಮಂಟಪ ದಲ್ಲಿ ದೇವನಿಲ್ಲವೆಂದು ಬಸವಣ್ಣನವರೂ ಅಲ್ಲಮಪ್ರಭುಗಳೂ ಕೊರಗಿದರು. ಶಿವಶರಣರೆಲ್ಲ ಚದರಿಹೋದರು.

### ಕೊನೆ

"ಸಾಕು ಮಾಡೈ ತಂದೆ ಲೋಕದಾಟವನಿನ್ನು" ಎಂದೆನ್ನುತ್ತ ಬಸವಣ್ಣನವರು ಕಲ್ಯಾಣ ಪಟ್ಟಣವನ್ನು ತೊರೆದು ಕೂಡಲಸಂಗಮ ಕ್ಷೇತ್ರಕ್ಕೆಬಂದರು. "ತೆರವುಗೊಡು ತಂದೆ, ಬಂದಿಹೆನು ಬಸವನು ನೊಂದ" ಎಂದು ದೇವರಲ್ಲಿ ಮೊರೆ ಇಟ್ಟರು. ಅಲ್ಲಿಯೇ ಕೂಡಲಸಂಗಮ ದೇವನಲ್ಲಿ ಐಕ್ಯರಾದರು.

### ಬಸವಣ್ಣನವರ ಬೋಧೆ

ಬಸವಣ್ಣನವರು ಶಿವಾಚಾರಕ್ಕೆ ಎಂದರೆ ಸದಾಚಾರಕ್ಕೆ ಹೆಚ್ಚಳವನ್ನು ಇತ್ತರು. ಜಾತಿ-ಭೇದದ ವಿಷಮತೆಯನ್ನು ಅಳಿಸಿದರು. [ಭಕ್ತಿಪಂಥದ ಸಮತೆಯನ್ನು ಬೆಳೆಸಿದರು. ಜೀವನೋಪಾಯಕ್ಕಾಗಿ ವೃತ್ತಿ (ಕಾಯಕ) ಯೊಂದನ್ನು ಭಕ್ತಿಯಿಂದ ಅನುಸರಿಸಲು ಬೋಧಿಸಿದರು. ಜನರ ಭಾಷೆಯಾದ ಕನ್ನಡದಲ್ಲಿಯೇ ಮತಪ್ರಚಾರ ಮಾಡಿದ್ದರಿಂದ ಸಾಹಿತ್ಯಕ್ಕೆ ಹೆಚ್ಚು ಉಪಕಾರವಾಯಿತು. ಶಿವಶರಣರ ಅನುಭವ ವಚನಗಳು ಇಂದೆಗೂ ಹೆಸರಾಗಿವೆ.

#### ಅಭ್ಯಸನಗಳು

1. ಲಿಂಗವಂತ ಮತಕ್ಕೆ ಬೇರೆ ಯಾವ ಹೆಸರಿದೆ?
2. ಟಿಪ್ಪಣಿ ಬರೆಯಿರಿ:—
   ಕಾಯಕ, ಲಿಂಗದೀಕ್ಷೆ, ಕೂಡಲಸಂಗಮದೇವ.
3. ಬಸವೇಶ್ವರರ ಕೆಳಗಿನ ಉಕ್ತಿಗಳನ್ನು ನೀವು ಓದುವ ಕೋಣೆಯಲ್ಲಿ ತೂಗ ಹಾಕುವಂತೆ ದೊಡ್ಡ ಅಕ್ಷರಗಳಲ್ಲಿ ಬರೆಯಿರಿ:—
   1. ದಯವಿಲ್ಲದ ಧರ್ಮವದಾವುದಯ್ಯ?
   2. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ.
   3. ಅಯ್ಯಾ ಎಂದಡೆ ಸ್ವರ್ಗ ಎಲವೊ ಎಂದಡೆ ನರಕ.

## 12. ವಿಷ್ಣುವರ್ಧನ

ಇಂದಿಗೆ 800 ವರ್ಷಗಳ ಹಿಂದೆ ಈಗಿನ ಮೈಸೂರ ರಾಜ್ಯದ ದಕ್ಷಿಣ ಭಾಗದಲ್ಲಿ ಹೊಯ್ಸಳರೆಂಬ ಅರಸುಮನೆತನದವರು ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಅವರಲ್ಲಿ 1106 ರಿಂದ 1141ರ ವರೆಗೆ ಆಳಿದ ವಿಷ್ಣುವರ್ಧನನು ಬಲು ಹೆಸರಾಗಿದ್ದಾನೆ.

### ಬಿಟ್ಟಿದೇವನು ವಿಷ್ಣುವರ್ಧನನಾದುದು

ಕನ್ನಡ ನಾಡಿನ ಉತ್ತರ ಭಾಗದಲ್ಲಿ ಕಲ್ಯಾಣದಲ್ಲಿ ಚಾಲುಕ್ಯರು ಚಕ್ರವರ್ತಿಗಳೆನಿಸಿದ್ದರು. ಹೊಯ್ಸಳರು ಆ ಚಾಲುಕ್ಯರಿಗೆ ಸ್ವಾಮಿನಿಷ್ಠರಾಗಿ ಮಹಾ ಮಂಡಲಾಧೀಶ್ವರರೆಂದು ತಮ್ಮ ಚಕ್ರವರ್ತಿಗಳಿಗೆ ನೆರವಾಗುತ್ತಿದ್ದರು. ಚಾಲುಕ್ಯರಿಗೂ ಚೋಳರಿಗೂ ಆಗ ಮೇಲಿಂದ ಮೇಲೆ ನಡೆಯುತ್ತಿದ್ದ ಕದನಗಳಲ್ಲಿ ಹೊಯ್ಸಳರು ಸ್ವಾಮಿನಿಷ್ಠೆಯಿಂದ ಕರ್ನಾಟಕದ ಚಕ್ರವರ್ತಿಗಳ ಬಲಗೈಯೆನಿಸಿ ಕಾದಾಡಿದರು. ದಕ್ಷಿಣದ ಗಂಗಮಂಡಲವೆಂಬ ನಾಡನ್ನು ಹೊಯ್ಸಳರಾಜರು ಚೋಳರಿಂದ ಬಿಡುಗಡೆಗೊಳಿಸಿ ಅಲ್ಲಿ ತಾವು ಸ್ವತಂತ್ರರಾಗಿ ಆಳಿದರು.

ಇಂಥವರಲ್ಲಿ ವಿಷ್ಣುವರ್ಧನನು ಅತಿ ಹೆಸರಾದನು. ಅವನ ಮೊದಲಿನ ಹೆಸರು ಬಿಟ್ಟಿದೇವ, ಅವನೂ ಅವನ ಸತಿ ಶಾಂತಲಾದೇವಿಯೂ ಜೈನಮತದವರಾಗಿದ್ದರು. ಶ್ರೀ ರಾಮಾನುಜಾಚಾರ್ಯರ ಹೊಸ ವೈಷ್ಣವ ಮತಕ್ಕೆ ರಾಜನು ಮನಸೋತು ವೈಷ್ಣವನಾಗಿ ಬೇಲೂರ ಚೆನ್ನಕೇಶವ ದೇವಾಲಯದಂಥ ಗುಡಿಗಳನ್ನು ಕಟ್ಟಿಸಿದನು. ಜಕ್ಕಣ–ಡಕ್ಕಣರೆಂಬ ಶ್ರೇಷ್ಠಶಿಲ್ಪಿಗಳು ಅದನ್ನು ಕಟ್ಟಿದರು. ಆದರೆ ಸೋಜಿಗದ ಸಂಗತಿಯೆಂದರೆ ಅವನ ಪಟ್ಟದ ರಾಣಿ ಶಾಂತಲಾದೇವಿ ಆಯುಷ್ಯದ ಕೊನೆಯ ಕ್ಷಣದವರೆಗೂ ಜೈನಳಾಗಿಯೇ ಉಳಿದಳು; ಸತಿಪತಿಗಳ ದಾಂಪತ್ಯ ಪ್ರೇಮವು ಅಖಂಡವಾಗಿ ಉಳಿಯಿತು. ವೈಷ್ಣವ ಜೈನಮತಗಳೆರಡೂ ಕನ್ನಡ ನಾಡಿನಲ್ಲಿ ಏಳ್ಗೆ ಹೊಂದಿದವು.

### ದಿಗ್ವಿಜಯಗಳು

ಕ್ರಿ. ವ. 1106 ರಲ್ಲಿ ಪಟ್ಟಕ್ಕೆ ಬಂದ ಬಿಟ್ಟಿದೇವನು ದಕ್ಷಿಣದ ಗಂಗರನ್ನು ತನ್ನೊಳಗೆ ಕೂಡಿಸಿಕೊಂಡು ರಾಜ್ಯವನ್ನು ವಿಸ್ತರಿಸಿದನು. ಚೋಳ, ಚೇರ, ಪಾಂಡ್ಯರೊಡನೆ ಕಾದಾಡಿ ಸುತ್ತಲಿನ ಪ್ರದೇಶಗಳನ್ನು ತನ್ನ ಒಡೆ

ತನಕ್ಕೆ ಸೇರಿದನು. ‘ ವಿಕ್ರಮಗಂಗ ’ ‘ ತ್ರಿಭುವನ ಮಲ್ಲ ’ ಬಿರುದು ಧರಿಸಿದನು.

ಕಲ್ಯಾಣದಲ್ಲ ಚಾಲುಕ್ಯ ವಿಕ್ರಮ ಚಕ್ರವರ್ತಿ ಇರುವವರೆಗೂ ಮಹಾಮಂಡಲೇಶ್ವರನಾಗಿದ್ದು ಅವನ ಮರಣದ ತರುವಾಯ ಸ್ವತಂತ್ರನಾಗಿಯೇ ರಾಜ್ಯಭಾರ ಮಾಡಿದನು. ಬನವಸೆ-ಹಾನಗಲ್ಲು ನಾಡುಗಳನ್ನು ಸೇರಿಸಿಕೊಂಡನು. ಬಂಕಾಪುರವನ್ನು ಉತ್ತರದ ರಾಜಧಾನಿಯನ್ನಾಗಿ ಮಾಡಿ ಕೆಲ ಕಾಲ ಅಲ್ಲಿಂದಲೇ ಆಳಿದನು. 1141ರಲ್ಲಿ ಅದೇ ಊರಲ್ಲಿ ಸ್ವರ್ಗಸ್ಥನಾದನು,

ಮುಂದೆ ದಿಲ್ಲಿ ಸುಲ್ತಾನರು 14ನೆಯ ಶತಕದಲ್ಲಿ ದಕ್ಷಿಣದಲ್ಲಿ ಹೊಯ್ಸಳ ಮನೆತನವನ್ನು ಹಿಂದೆ ಸರಿಸಿದ ಬಳಿಕ ಹೊಯ್ಸಳ ರಾಜ್ಯದ ಹೊಟ್ಟೆಯೊಳಗಿಂದಲೆ ವಿಜಯನಗರ ಸಾಮ್ರಾಜ್ಯವು ಹುಟ್ಟಿಬಂದಿತು.

### ಅಭ್ಯಸನಗಳು

[ ಬಿಟ್ಟ ಸ್ಥಳ ತುಂಬಿರಿ. ]

1. ವಿಷ್ಣುವರ್ಧನನ ಮೊದಲಿನ ಹೆಸರು............ ಅವನ ಪಟ್ಟದರಾಣಿ................ಎಂಬಳು. ಸತಿ............ ಮತದ ಅಭಿಮಾನಿ, ಪತಿ............ ಮತದ ಅಭಿಮಾನಿ. ಆದರೂ ಸರಸ ಮಧುರ ದಾಂಪತ್ಯ ಪ್ರೇಮ ಅವರಲ್ಲಿತ್ತು.

2. ವಿಷ್ಣುವರ್ಧನನ ದಿಗ್ವಿಜಯವನ್ನು ಬಣ್ಣಿಸಿರಿ.

3. ಈ ರಾಜನು ಕಟ್ಟಿಸಿದ ದೇವಾಲಯವಾವುದು ? ಅದರ ಶಿಲ್ಪಿಗಳಾರು ?

## 13. ಶ್ರೀ ಮಧ್ವಾಚಾರ್ಯರು

### ಬಾಲ್ಯ ಮತ್ತು ವಿದ್ಯಾಭ್ಯಾಸ

ಮಧ್ವಾಚಾರ್ಯರು ಮಂಗಳೂರ ಜಿಲ್ಲೆಯ ಉಡುಪಿಯ ಹತ್ತಿರ ‘ಪಾಜಕ’ ವೆಂಬ ಕ್ಷೇತ್ರದಲ್ಲಿ ಜನಿಸಿದರು. ಇವರ ತಂದೆಯ ಹೆಸರು ಮಧ್ಯಗೇಹಭಟ್ಟ. ತಾಯಿಯ ಹೆಸರು ವೇದವತಿ. ಅವರು ಸ್ಮಾರ್ತ (ಭಾಗವತ ಸಂಪ್ರದಾಯದ ) ಬ್ರಾಹ್ಮಣರು. ಸತಿಪತಿಗಳಿಬ್ಬರೂ ದೈವಭಕ್ತರು, ಧರ್ಮನಿಷ್ಠರು, ಸದಾಚಾರಶೀಲರು. ಉಡುಪಿಯ ಅನಂತೇಶ್ವರನ ವರಪ್ರಸಾದದಿಂದ ಅವರಿಗೆ ಒಂದು ಗಂಡು ಮಗು ಜನಿಸಿತು ( 1199 ). ಅವರು ಮಗುವಿಗೆ ‘ ವಾಸುದೇವ ’ ನೆಂಬ ನಾಮಕರಣ ಮಾಡಿದರು.


ಶ್ರೀ ಮಧ್ವಾಚಾರ್ಯರು

ಚಿಕ್ಕ ವಯಸ್ಸಿನಲ್ಲಿಯೇ ವಾಸುದೇವನಿಗೆ ಅಕ್ಷರಾಭ್ಯಾಸ ಮಾಡಿಸಿದರು. ಮೊದಲಿನಿಂದಲೂ ವಾಸುದೇವನು ಬುದ್ಧಿವಂತ. ಬಲಶಾಲಿ, ತೇಜಸ್ವಿ. ಅವನ ಸ್ಮರಣಶಕ್ತಿಯು ಅಗಾಧವಿತ್ತು. ಆಟಪಾಟಗಳಲ್ಲೂ ಅವನಿಗೆ ತುಂಬಾ ಆಸಕ್ತಿ. ಉಪನಯನವಾದ ಕೂಡಲೇ ವಾಸುದೇವನು ಗುರುವಿನ ಬಳಿಯಲ್ಲಿ ಸಂಸ್ಕೃತ ಕಾವ್ಯ, ವೇದ, ವೇದಾಂಗ, ನ್ಯಾಯ ಶಾಸ್ತ್ರಗಳಲ್ಲಿ ಪಂಡಿತನಾದನು. ಅಭ್ಯಾಸದೊಂದಿಗೆ ಅವನು ಓಡುವದು, ಜಿಗಿಯುವದು, ಕುಸ್ತಿಆಡುವದು, ಈಜುವದು ಇವುಗಳಲ್ಲೂ ತೊಡಗುತ್ತಿದ್ದನು.

## ಸನ್ಯಾಸ ಸ್ವೀಕಾರ

ವಿದ್ಯಾಭ್ಯಾಸವು ಮುಗಿದ ಬಳಿಕ ವಾಸುದೇವನು ತಂದೆ ತಾಯಿಗಳ ಬಳಿಗೆ ಬಂದನು. ಅವನಿಗೆ 'ನಾನೇ ಬ್ರಹ್ಮನು, ಜಗತ್ತು ಸುಳ್ಳು' ಎಂಬ ಅದ್ವೈತ ಮತವು ಸರಿದೋರಲಿಲ್ಲ. ಸನ್ಯಾಸವನ್ನು ಸ್ವೀಕರಿಸಲು ನಿರ್ಧಾರ ಮಾಡಿದನು. ಆಗ ಅವನಿಗೆ ಉಡುಪಿಯಲ್ಲಿಯೇ ಅಚ್ಯುತಪ್ರೇಕ್ಷರೆಂಬ ಮಹಾ ವಿದ್ವಾಂಸರೂ ತಪಸ್ವಿಗಳೂ ಆದ ಯತಿಗಳು ಗುರುಗಳಾಗಿ ದೊರೆತರು. ವಾಸುದೇವನು ಅವರನ್ನು ಆಶ್ರಯಿಸಿ ಸೇವೆಯಲ್ಲಿ ನಿರತನಾದನು. ಅವರು ಅವನಿಗೆ ವೇದಾಂತವನ್ನು ತಿಳಿಸಿ ಹೇಳಿದರು; ಮತ್ತು ವಾಸುದೇವನ ಸನ್ಯಾಸದ ಒಲವನ್ನು ಕೂಡಲೇ ಈಡೇರಿಸಿದರು. ಅಚ್ಯುತಪ್ರೇಕ್ಷರೆ ಸನ್ಯಾಸ ದೀಕ್ಷೆಯನ್ನು ಕೊಟ್ಟರು ಮತ್ತು 'ಪೂರ್ಣಪ್ರಜ್ಞ'ರೆಂದು ಅವನಿಗೆ ನೂತನ ನಾಮಕರಣ ಮಾಡಿದರು. ಪೂರ್ಣಪ್ರಜ್ಞರು ಮುಂದೆ 'ಆನಂದ ತೀರ್ಥ'ರೆಂದು ಹೆಸರು ಪಡೆದರು. ಆದರೂ ಅವರನ್ನು ಮಧ್ವಾಚಾರ್ಯರೆಂಬ ಹೆಸರಿನಿಂದ ಕರೆಯುವದೇ ರೂಢಿಯಾಗಿದೆ. ಯತಿಗಳಾದ ಮೇಲೆ ಮಧ್ವಾಚಾರ್ಯರು 'ದ್ವೈತ' ಮತವನ್ನು ಪ್ರಚಾರ ಮಾಡಿದರು.

## ದ್ವೈತಮತದ ಮುಖ್ಯ ತತ್ವಗಳು

1. ಶ್ರೀಹರಿ (ವಿಷ್ಣು)ಯೇ ಪರಮಾತ್ಮನು, ಪರಬ್ರಹ್ಮನು,ಸರ್ವೋತ್ತಮನು. 2. ಜಗತ್ತು ಸತ್ಯವಾದುದು. 3. ಜೀವಾತ್ಮ ಪರಮಾತ್ಮರಲ್ಲಿ ಶಾಶ್ವತವಾದ ಭೇದವಿದೆ. 4. ಜೀವಾತ್ಮರೆಲ್ಲ ಪರಮಾತ್ಮನ ಸೇವಕರು. 5. ಹರಿಭಕ್ತಿಯೇ ಶ್ರೇಷ್ಠಭಕ್ತಿ. 6. ನಿರ್ಮಲ ಹರಿಭಕ್ತಿಯೇ ಮೋಕ್ಷಕ್ಕೆ ಸಾಧನ. ಸ್ವರೂಪಾನಂದಾನುಭವವೇ ಮುಕ್ತಿ. (ಶ್ರೀಹರಿಯ ಹಸ್ತಾಯುಧಗಳಾದ ಶಂಕ, ಚಕ್ರ, ಗದಾ, ಪದ್ಮಗಳನ್ನು ಮುದ್ರೆಗಳ ರೂಪದಲ್ಲಿ ಮೈಮೇಲೆ ಧರಿಸಬೇಕು. ವ್ರತ, ನಿಯಮ, ಉಪವಾಸ ಮುಂತಾದವನ್ನು ಪಾಲಿಸಬೇಕು. ಹರಿನಾಮ ಸ್ಮರಣೆ, ಹರಿಭಜನೆ, ಹರಿಕೀರ್ತನೆ ಇವೆಲ್ಲವೂ ಶ್ರೀ ಹರಿಯ ಸೇವೆ. )

## ಮತ ಪ್ರಚಾರ

ತಮ್ಮ ಮತ ಪ್ರಚಾರಕ್ಕಾಗಿ ಮಧ್ವಾಚಾರ್ಯರು ದಕ್ಷಿಣ ಭಾರತದಲ್ಲೂ ಉತ್ತರ ಭಾರತದಲ್ಲೂ ಸಂಚಾರ ಮಾಡಿದರು. ಅವರು ಸಂದರ್ಶಿಸಿದ ಮುಖ್ಯ ಕ್ಷೇತ್ರಗಳೆಂದರೆ ರಾಮೇಶ್ವರ, ಮಧುರೆ, ಶ್ರೀರಂಗ, ಕಾಶಿ, ಬದರಿ. ಅವರು ಸಂಸ್ಕೃತ ಭಾಷೆಯಲ್ಲಿ ದ್ವೈತ ಮತದ ಸಿದ್ಧಾಂತವನ್ನು ಪ್ರತಿಪಾದಿಸುವ 37 ಗ್ರಂಥಗಳನ್ನು ರಚಿಸಿದರು. ದ್ವಾದಶ ಸ್ತೋತ್ರವೆಂಬ ಗ್ರಂಥವು ಭಕ್ತಿಯಿಂದ ತುಂಬಿದೆ. ಮಧ್ವಾಚಾರ್ಯರು ಸ್ವತಃ ಸಂಗೀತ ಬಲ್ಲವರು. ಭಕ್ತಿಯಿಂದ ಮೈಮರೆತು ಹಾಡುತ್ತಿದ್ದರು. ಪಾಠ ಪ್ರವಚನಗಳಿಂದ ಅನೇಕ ಶಿಷ್ಯರನ್ನು ಪಡೆದರು. ಅನೇಕ ಅದ್ವೈತಪಂಡಿತರನ್ನು ವಾದದಲ್ಲಿ ಸೋಲಿಸಿ ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡರು. ಅವರಲ್ಲಿಯ ನಾಲ್ವರನ್ನು ತಮ್ಮ ಮತ ಪ್ರಸಾರಕ್ಕಾಗಿ ನೇಮಿಸಿದರು. ಆ ನಾಲ್ವರಲ್ಲಿ ಓರಿಸಾ ಪ್ರಾಂತದ ನರಹರಿ ತೀರ್ಥರೆಂಬವರು ಆಚಾರ್ಯರ ಮುಖ್ಯ ಶಿಷ್ಯರು. ಅವರಿಂದಲೇ ಇವರ ಮತವು ಬಂಗಾಲದಲ್ಲಿ ಪ್ರವೇಶ ಹೊಂದಿ ಅಲ್ಲಿ ಚೈತನ್ಯ ಪಂಥವೆಂಬ ವೈಷ್ಣವ ಭಕ್ತಿಪಂಥಕ್ಕೆ ಸ್ಫೂರ್ತಿ ಕೊಟ್ಟಿತು. ಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣ ಮೂರ್ತಿಯ ಪ್ರತಿಷ್ಠಾಪನೆ ಮಾಡಿದರು. ಆ ದೇವತೆಯ ಪೂಜೆಗಾಗಿ ಎಂಟು ಮಠಗಳನ್ನು ಕಟ್ಟಿದರು. ಉಡುಪಿಯು ಈಗಲೂ ಮಾಧ್ವರ ( ಮಧ್ವಾಚಾರ್ಯರ ಅನುಯಾಯಿಗಳ) ಪ್ರಸಿದ್ಧ ಪುಣ್ಯಕ್ಷೇತ್ರವಾಗಿದೆ.

### ಕೊನೆ ಮತ್ತು ಹಿರಿಮೆ

ಮಧ್ವಾಚಾರ್ಯರು ಮತ್ತೊಮ್ಮೆ ಬದರಿಗೆ ಹೋಗಿ ಬಂದು ಉಡುಪಿಯಲ್ಲಿ ತಮ್ಮ ಅವತಾರವನ್ನು ಸಮಾಪ್ತಗೊಳಿಸಿದರು.

ಮಧ್ವಾಚಾರ್ಯರ ಪ್ರಭಾವದಿಂದ ಕರ್ನಾಟಕದಲ್ಲಿ ವೈಷ್ಣವ ಭಕ್ತಿ-ಪಂಥಕ್ಕೆ ಕಳೆಯೇರಿತು. ಮುಂದೆ ವಿಜಯನಗರದ ಅರಸರ ಆಳಿಕೆಯಲ್ಲಿ 'ದಾಸಕೂಟ' ವೆಂಬ ವಿಷ್ಣು ಭಕ್ತರ ಸಂಸ್ಥೆಯು ತಲೆಯೆತ್ತಿತು.

#### ಅಭ್ಯಸನಗಳು

1. ಮಧ್ವಾಚಾರ್ಯರ ಭಾರತದ ಪ್ರವಾಸಗಳನ್ನು ಬಣ್ಣಿಸಿರಿ.
2. ದ್ವೈತಮತದ ಮುಖ್ಯತತ್ವಗಳನ್ನು ಹೇಳಿರಿ.
3. ಶ್ರೀ ಮದಾನಂದ ತೀರ್ಥರ 'ದ್ವಾದಶಸ್ತೋತ್ರ' ದೊಳಗಿನ ಕೆಳಗಿನ ಪ್ರಥಮ ಶ್ಲೋಕವನ್ನು ಪಾಠಮಾಡಿರಿ.

ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಂ |
ಇಂದಿರಾಪತಿಮಾದ್ಯಾದಿ ವರದೇಶ ವರಪ್ರದಂ ‖ 1 ‖

## 14. ಕೃಷ್ಣದೇವರಾಯ

### ದಿಗ್ವಿಜಯಗಳು

ವಿಜಯನಗರದ ಎಲ್ಲ ರಾಜ್ಯರಲ್ಲಿ ಕೃಷ್ಣದೇವರಾಯನೇ ಅತ್ಯಂತ್ಯ ಖ್ಯಾತಿವಂತನು. ಇವನ ದಿಗ್ವಿಜಯವು ಸುಪ್ರಸಿದ್ಧವಾಗಿದೆ. ಇವನ ಕಾಲಕ್ಕೆ ರಾಯರ ರಾಜ್ಯವಿಸ್ತಾರವು ಪರಮಾವಧಿಗೆ ಮುಟ್ಟಿತು. ಈತನು ಮಹಾಪರಾಕ್ರಮಿ; ಅಲ್ಲದೆ ವಿದ್ಯಾಭಿಮಾನಿ, ಕಲಾಪ್ರೇಮಿ. ಇವನು ದಕ್ಷಿಣಕ್ಕೆ ಸಾಗಿ, ಕೊಯಿಮುತ್ತೂರು, ಶ್ರೀರಂಗಪಟ್ಟಣ, ಶಿವಸಮುದ್ರ ಇವನ್ನು ಗೆದು, ಬೀಳುವಸ್ಥಿತಿಗೆ ಬಂದಿದ ಚೇರ, ಚೋಳ, ಪಾಂಡ್ಯ, ಮಲಯಾಳ ರಾಜ್ಯಗಳನ್ನು ಸೋಲಿಸಿ ಪೂರ್ವಕ್ಕೆ ಮುನ್ನುಗ್ಗಿದನು. ತಲಗು ಸೀಮೆಗಳಲ್ಲಿ ಮುಡುಕಿ ಈ ಶಾನ್ಯಕ್ಕೆ ಮುಂದುವರಿದನು. ಓಡಿಸಾ



ಕೃಷ್ಣದೇವರಾಯ

ಅಥವಾ ಉತ್ಕಲ ರಾಜ್ಯವನ್ನು ಗೆದ್ದು ಅವರ ರಾಜನ ಮಗಳನ್ನು ಮದುವೆಯಾದನು. ಉತ್ಕಲ ವಿಜಯದ ನೆನಪಿಗಾಗಿ 'ಗೆಲುವಿನ ಮನೆ' ಎಂಬ ಭವ್ಯ ಸಭಾಮಂದಿರವನ್ನು ಕಟ್ಟಿಸಿದನು. ರಾಯನ ಪರಾಕ್ರಮದ ಇನ್ನೊಂದು ಘಟನೆಯೆಂದರೆ 'ರಾಯಚೂರ ವಿಜಯ' 200 ವರುಷಗಳಿಂದ ಕೃಷ್ಣಾ-ತುಂಗಭದ್ರೆಗಳ ನಡುವಿನ ನಾಡಿನ ಒಡೆತನಕ್ಕಾಗಿ ದಕ್ಷಿಣದಲ್ಲಿಯ ಹಿಂದು-ಮುಸಲ್ಮಾನ ರಾಜ್ಯಗಳ ನಡುವೆ ಮೇಲಿಂದ ಮೇಲೆ ಕಾಳಗಗಳು ನಡೆದಿದ್ದವಷ್ಟೆ. ಹೀಗೆ ಕಲಹದ ಬೀಜವಾದ ಈ ಸೀಮೆಯನ್ನು ಕೊನೆಗೊಮ್ಮೆ ಶಾಶ್ವತವಾಗಿ ಕೈವಶಮಾಡಿಕೊಳ್ಳಲು ನಿರ್ಧರಿಸಿ ರಾಯನು ಹೊರಹೊರಟನು. ಎದುರಾದ ವಿಜಾಪುರದ ಇಬ್ರಾಹೀಮ ಆದಿಲಶಾಹನನ್ನು ಮತ್ತೆಂದೂ ಹೇಳದಂತೆ ಹೊಡೆದೋಡಿಸಿದನು. ವಿಜಾಪುರವನ್ನು ಹಾಳುಗೆಡವಿ ಮುದಗಲ್ಲು-ಕಲಬುರ್ಗಿಗಳನ್ನು ಹಿಡಿದುಕೊಂಡನು. ಇವನ ಕೀರ್ತಿ ಸಿಂಹಳದವರೆಗೂ ಹಬ್ಬಿತ್ತು. ಅಲ್ಲಿಯ ಅರಸುಮನೆತನದ ಒಳಜಗಳಗಳಲ್ಲಿ ಕೈಹಾಕಿ ಆ ನಾಡಿನಲ್ಲಿ ಶಾಂತತೆಯನ್ನುಂಟುಮಾಡಿದನು.

## ರಾಯನ ರಾಜ್ಯವೈಭವ

ಸಂಗಮ ವಂಶದವರಿಗೆ ಶ್ರೀವಿದ್ಯಾರಣ್ಯರು ಗುರುಗಳಾಗಿದ್ದಂತೆ ಕೃಷ್ಣದೇವರಾಯನಿಗೆ ಮಾಧ್ವಮತದ ಶ್ರೀ ವ್ಯಾಸಯೋಗಿಗಳು ಗುರುಗಳಾಗಿ ಬಹಳ ನೆರವಾದರು. ಈ ವ್ಯಾಸಯೋಗಿಗಳ ಶಿಷ್ಯರೇ ಕರ್ನಾಟಕದ ಪ್ರಸಿದ್ಧ ಹರಿಭಕ್ತರಾದ ಪುರಂದರದಾಸರು ಮತ್ತು ಕನಕದಾಸರು. ತಮಿಳ ನಾಡಿನ ವೈಷ್ಣವ ಗುರುಗಳಾದ ವೆಂಕಟತಾತ್ಯಾರ್ಯರಿಗೂ ಗುಜರಾತದ ವೈಷ್ಣವ ಪಂಥದ ಸ್ಥಾಪಕರಾದ ಶ್ರೀ ವಲ್ಲಭಾಚಾರ್ಯರಿಗೂ ಕೃಷ್ಣದೇವರಾಯನ ಆಸ್ಥಾನದಲ್ಲಿ ರಾಜಮರ್ಯಾದೆ ದೊರೆಯಿತು. ಬಂಗಾಲದ ಚೈತನ್ಯ ಪ್ರಭುಗಳೂ ಈ ಕಾಲಕ್ಕೆ ವಿಜಯನಗರಕ್ಕೆ ಬಂದಿದ್ದರು.

ಕೃಷ್ಣದೇವರಾಯನು 21 ವರುಷ ಆಳಿ ರಾಜ್ಯದಲ್ಲೆಲ್ಲ ಶಾಂತಿಸಮೃದ್ಧಿಗಳನ್ನು ಅತಿಶಯವಾಗಿ ಉಂಟುಮಾಡಿದನು. ಆದರೆ ಗೋವೆಯು ಮಾತ್ರ ಇವನ ಆಳಿಕೆಯಲ್ಲಿ ಪೋರ್ತುಗೀಜರ ಕೈವಶವಾಯಿತು. ಇವನ ಕಾಲದಲ್ಲಿ ಮೂರು ಪೋರ್ತುಗೀಜರ ಪ್ರವಾಸಿಗಳು ವಿಜಯನಗರವನ್ನು ಸಂದರ್ಶಿಸಿ ಅದರ ವೈಭವ ಬಣ್ಣಿಸಿದ್ದಾರೆ. ಅವರಲ್ಲಿ ಪಾಜನೆಂಬವನು ಪ್ರಸಿದ್ಧನು. ಧರ್ಮಬುದ್ಧಿಯುಳ್ಳವನೂ ಕಲಾಪ್ರೇಮಿಯೂ ಆದ ಈ ರಾಯನು ವಿಜಯ

ವಿಠ್ಠಲದೇವಾಲಯ, ಹಜಾರರಾಮ ದೇವಾಲಯ ಮೊದಲಾದ ಅನೇಕ ಸುಂದರ ದೇವಾಲಯಗಳನ್ನೂ ಕಾಲುವೆ ಆಣೆಕಟ್ಟುಗಳನ್ನೂ ಕಟ್ಟಿಸಿದನು.

**ರಾಯನ ವ್ಯಕ್ತಿತ್ವ; ದಿನಚರಿ**

ಕೃಷ್ಣದೇವರಾಯನು ಸ್ವತಃ ಪಂಡಿತನಿದ್ದು ಅನೇಕ ಭಾಷೆಗಳ ಕವಿಗಳಿಗೆ ಆಶ್ರಯವಿತ್ತನು. ಅಪ್ಪಯ್ಯ ದೀಕ್ಷಿತರೆಂಬ ಪಂಡಿತರೂ ತೆನ್ನಾಲಿ ರಾಮಕೃಷ್ಣನೆಂಬ ನಗೆಗಾರನೂ ರಾಯನ ಆಸ್ಥಾನದಲ್ಲಿದ್ದರು. ಪೆದ್ದಣನೆಂಬ ತೆಲಗು ಕವಿ, ಕುಮಾರವ್ಯಾಸನೆಂಬ ಕನ್ನಡ ಕವಿ ರಾಯನ ಕಾಲದಲ್ಲಿ ಹೆಸರಾದವರು. ರಾಯನಿಗೆ 'ಕನ್ನಡ ರಾಜ್ಯರಮಾರಮಣ' ಎಂಬ ಬಿರುದು ಇತ್ತು. ರಾಯನ ನಿಲವು ಎತ್ತರವಾದುದು. ಹುರಿಕಟ್ಟಾದ ಮೈಕಟ್ಟು. ಕಾಣಲು ಗಂಭೀರವಾಗಿದ್ದ. ದಿನಾಲು ತೀರ ನಸುಕಿನಲ್ಲಿ ಎದ್ದು ಗರಡೀ ಸಾಧನ ಮಾಡುತ್ತಿದ್ದನು. ಕುದುರೆಯನ್ನೇರಿ ದೂರದ ವರೆಗೆ ಸವಾರಿ ಮಾಡಿ ಬರುತ್ತಿದ್ದ. ಆ ಬಳಿಕ ಸ್ನಾನ, ದೇವರ ಪೂಜೆ; ಮುಂದೆ ಓಲಗದಲ್ಲಿ ರಾಜ್ಯದ ಕೆಲಸಗಳನ್ನು ನೋಡುತ್ತಿದ್ದನು. ಇವನು ನುರಿತ ಸೇನಾಪತಿಯೂ ಮುತ್ಸದ್ದಿಯೂ ಆಗಿದ್ದನು. ಮುಸಲ್ಮಾನ ಪ್ರಜೆಗಳನ್ನು ಸೈನ್ಯಗಳಲ್ಲಿ ತೆಗೆದುಕೊಂಡನು. ಅವರು ರಾಜನಿಗೆ ಮುಜುರೆ ಮಾಡುವಾಗ ರಾಜನ ಎದುರು ಕುರಾನದ ಪ್ರತಿ ಇರುತ್ತಿತ್ತು. ಒಟ್ಟಿನಲ್ಲಿ ಆ ಕಾಲವಲ್ಲಿ ಅಪ್ರತಿಮ ರಾಜನಾಗಿದ್ದನು. 1509 ಕ್ಕೆ ಪಟ್ಟಕ್ಕೆ ಬಂದ ಈತ 1530 ರಲ್ಲಿ ದಿವಂಗತನಾದ.

ಅಭ್ಯಸನಗಳು

1. ಕೃಷ್ಣದೇವರಾಯನ ಎರಡು ದೊಡ್ಡ ವಿಜಯಗಳು ಯಾವವು?
2. ರಾಯನ ಆಸ್ಥಾನದಲ್ಲಿಯ ಜಾಣರ ಹೆಸರು ಹೇಳಿರಿ.
3. ಕೃಷ್ಣದೇವರಾಯನು ನೀವೇ ಎಂದು ತಿಳಿದು ನಿಮ್ಮ ಒಂದು ದಿನದ ದಿನಚರಿ ಬರೆಯಿರಿ.

## 15. ಗುರು ನಾನಕರು

15ನೆಯ ಶತಕದಲ್ಲಿ ಉತ್ತರ ಭಾರತದಲ್ಲಿ ಮುಸಲ್ಮಾನರ ರಾಜ್ಯಗಳು ಬಹಳ ಇದ್ದವು. ಹಿಂದುಗಳ ಗುಡಿಗುಂಡಾರಗಳು ಸುರಕ್ಷಿತವಾಗಿ ಉಳಿಯುತ್ತಿದ್ದಿಲ್ಲ. ಇಂಥ ಕಾಲದಲ್ಲಿ ಹಿಂದೂ ಮುಸಲ್ಮಾನರು ಪ್ರೇಮದಿಂದ ಒಬ್ಬರನ್ನೊಬ್ಬರು ಅರಿತುಕೊಳ್ಳಬೇಕೆಂದು ಉಪದೇಶ ಮಾಡಿದ ಸಾಧುಗಳೇ ಗುರು ನಾನಕರು.

## ಬಾಲ್ಯ


ಗುರು ನಾನಕರು

ನಾನಕರು ಕ್ರಿ. ಶ. 1469 ರಲ್ಲಿ ಪಂಜಾಬ ಪ್ರಾಂತದ ತಲಂಕಡಿ ಎಂಬ ಊರಲ್ಲಿ ಹುಟ್ಟಿದರು. ಶಾಲೆಯಲ್ಲಿ ಬಾಲಕ ನಾನಕನ ಚಿಕಿತ್ಸಕ ಬುದ್ಧಿಯನ್ನು ಕಂಡು ಗುರುಗಳು ಬೆರಗಾದರು. ಸ್ವಂತ ಕವನಗಳನ್ನು ಬಾಲ ನಾನಕನು ಅಂದು ತೋರಿಸುತ್ತಿದ್ದನು. ವಿದ್ಯಾಭ್ಯಾಸಕ್ಕಿಂತ ದೇವರ ನಾಮಸ್ಮರಣೆಯ ಕಡೆಗೆ ಆತನ ಮನಸ್ಸು ಎಳೆಯುತ್ತಿತ್ತು. ಆಡಂಬರವು ಅವನಿಗೆ ಸೇರುತ್ತಿದ್ದಿಲ್ಲ.

## ಮಗನ ಬಗ್ಗೆ ತಾಯಿ ತಂದೆಗಳಿಗೆ ಬೇಸರ

ಮಗನಿಗೆ ವ್ಯಾಪಾರ ಮಾಡಲೆಂದು ಹಣಕೊಟ್ಟು ಪರ ಊರಿಗೆ ಅವರ ತಂದೆ ಒಮ್ಮೆ ಕಳಿಸಿದರು. ಆ ಹಣವೆಲ್ಲ ದಾನ ಧರ್ಮದಲ್ಲಿ ವೆಚ್ಚವಾಯಿತು. ವ್ಯಾಪಾರ ಅಲ್ಲಿಗೇ ನಿಂತಿತು ಸಿಟ್ಟಿಗೆದ್ದು ತಂದೆ ದನಕಾಯಲು ಕಳಿಸಿದನು. ನಾನಕರು ಅಡವಿಯಲ್ಲಿ ದೇವರ ಧ್ಯಾನ ಮಾಡುತ್ತ ಸಂಜೆಯ ಮುಂದೆ ದನ ಅಟ್ಟಿಕೊಂಡು ಮನೆಗೆ ಬರುತ್ತಿದ್ದರು. ಇಂಥ ಮಗನ ಬಗ್ಗೆ ತಾಯಿತಂದೆ ಬಹಳೇ ಬೇಸತ್ತರು. ಕಟ್ಟಕಡೆಗೆ ನಾನಕರು ಸುಲ್ತಾನಪುರಕ್ಕೆ ಅಕ್ಕನ ಬಳಿಗೆ ಹೋದರು. ಅಲ್ಲಿ ಅವರು ಕೆಲವು ದಿವಸ ಸರಕಾರೀ ನವಕರಿ ಮಾಡಿದರು.

## ಮನೆ ಬಿಟ್ಟು ಹೊರಟುದು

ಹದಿನೆಂಟು ವರ್ಷ ತುಂಬಲು ನಾನಕರಿಗೆ ಲಗ್ನವಾಯ್ತು. ಎರಡು ಗಂಡುಮಕ್ಕಳೂ ಆದವು. ಅವರ ಭಾವಿಕ ಸ್ವಭಾವದಲ್ಲಿ ಮಾತ್ರ ಅಂತರವಾಗಲಿಲ್ಲ. ಬರಬರುತ್ತ ಅವರನ್ನು ವೈರಾಗ್ಯವು ಹೆಚ್ಚು ಹೆಚ್ಚು ಎಳೆಯಹತ್ತಿತು. ಹೀಗಿರಲು ಒಂದು ದಿನ ಬೆಳಗಿನಲ್ಲಿ ನದಿಯ ಕಡೆಗೆ ಸ್ನಾನಕ್ಕೆ ಹೋದಾಗ ಅವರಿಗೆ ಒಬ್ಬ ಸಾಧುವಿನ ದರ್ಶನವಾಯಿತು.

ಮುಂದೆ ಮೂರು ದಿವಸ ಅವರು ಯಾರಿಗೂ ಕಾಣಿಸಿಕೊಳ್ಳಲಿಲ್ಲ. ನಾಲ್ಕನೆಯ ದಿವಸ ಊರ ಹೊರಗೆ ಒಂದೆಡೆಗೆ ಕುಳಿತು ಬರಹೋಗುವ ಜನರಿಗೆ ಉಪದೇಶ ಮಾಡಹತ್ತಿದರು.

## ನಾನಕರ ಉಪದೇಶ ಮತ್ತು ತೀರ್ಥಯಾತ್ರೆ

" ದೇವರು ಒಬ್ಬನೇ. ಅವನು ಜಾತಿಭೇದವನ್ನು ಒಪ್ಪುವದಿಲ್ಲ. ಹಿಂದೂ ಮುಸಲ್ಮಾನರನ್ನು ಒಂದೇ ದೃಷ್ಟಿಯಿಂದ ನೋಡುತ್ತಾನೆ. ಮೂರ್ತಿಪೂಜೆ ಅವಶ್ಯವಿಲ್ಲ. ಹೃದಯವನ್ನು ಶುದ್ಧವಾಗಿಡಿರಿ. ದೇವರ ಭಜನೆಯನ್ನು ಮಾಡಿರಿ. ಇದರಿಂದ ಆತನು ಸಂತುಷ್ಟನಾಗಿ ದರ್ಶನ ಕೊಡುವನು. " ಎಂದು ಅವರು ಉಪದೇಶ ಮಾಡುತ್ತ ಸಂಚರಿಸತೊಡಗಿದರು.

ಹರಿದ್ವಾರ, ದಿಲ್ಲಿ, ಮಥುರಾ, ಗಯಾ, ಜಗನ್ನಾಥಪುರಿ ಮೊದಲಾದ ಕ್ಷೇತ್ರಗಳಲ್ಲಿ ಸಾಧು ಸಂತರ ಕೂಡ ಕೆಲಕಾಲ ಇದ್ದು ಬಂದರು. ಹೀಗೆ ಅವರು ನಾಲ್ಕು ಸಲ ತೀರ್ಥಯಾತ್ರೆ ಮಾಡಿದರು. ದಕ್ಷಿಣ ಭಾರತಕ್ಕೂ ಅವರು ಬಂದಿದ್ದರು. ಮುಸಲ್ಮಾನರ ಧರ್ಮಕ್ಷೇತ್ರಗಳಾದ ಮಕ್ಕಾ-ಮದೀನಾಗಳಿಗೆ ಸಹ ಹೋಗಿ ಬಂದರು.

## ಶಿಷ್ಯರು ಹೆಚ್ಚುತ್ತ ಹೋದುದು

ನಾನಕರು ಕರ್ತಾರಪುರದಲ್ಲಿಯೇ ಇದ್ದುಕೊಂಡು ರಾವೀ ನದಿಯ ದಂಡೆಯ ಮೇಲೆ ತಮ್ಮ ಪ್ರಚಾರದ ಕಾರ್ಯವನ್ನು ಪ್ರಾರಂಭಿಸಿದರು. ಯಾವ ಧರ್ಮವನ್ನೂ ಅವರು ದ್ವೇಷಿಸುತ್ತಿದ್ದಿಲ್ಲ. ಬರಬರುತ್ತ ಅವರಿಗೆ ಸಾವಿರಗಟ್ಲೆ ಶಿಷ್ಯರಾದರು. ಈ ಶಿಷ್ಯರಿಗೆ ಮುಂದೆ ಸೀಖರು ಎಂಬ ಹೆಸರು ಬಂತು. ನಾನಕರೇ ಸೀಖ ಧರ್ಮದ ಸ್ಥಾಪಕರು. ಅವರು ಕ್ರಿ. ಶ. 1538 ರಲ್ಲಿ ಸಮಾಧಿಸ್ಥರಾದರು ಅಸಂಖ್ಯ ಯಾತ್ರಿಕರು ಅವರ ಸಮಾಧಿ ದರ್ಶನಕ್ಕೆ ಬರುತ್ತಾರೆ. ಅವರ ವಚನಗಳುಳ್ಳ ಗ್ರಂಥಕ್ಕೆ ' ಗ್ರಂಥ ಸಾಹೇಬ ' ಎನ್ನುತ್ತಾರೆ.

## ಶೀಖರು ಯೋಧರಾದುದು

ಮುಂದೆ ಔರಂಗಜೇಬನ ಕಾಲಕ್ಕೆ ಆತ್ಮರಕ್ಷಣೆಗೆಂದು ಸೀಖರು ಯುದ್ಧ ಮಾಡಬೇಕಾಯಿತು. ಆಗ ಕಾಲಕ್ಕನುಸರಿಸಿ ಅವರ ಗುರುಗಳು ಕ್ಷಾತ್ರವೃತ್ತಿಯನ್ನು ಬೋಧಿಸಿದರು; ಕೃಪಾಣವೆಂಬ ಚಿಕ್ಕ ಆಯುಧವು ಅವರ ಧರ್ಮದ ಚಿಹ್ನವಾಯಿತು. ಬರಬರುತ್ತ ಸೈನಿಕವೃತ್ತಿಯನ್ನು

ಸೀಖರೆಲ್ಲರೂ ಉದ್ಯೋಗವನ್ನಾಗಿ ಕೈಕೊಂಡರು. ಈಗ ಭಾರತದ ದಲ್ಲಿ ಸೀಖರೆ ಹೆಚ್ಚಾಗಿರುವರು.

### ಅಭ್ಯಸನಗಳು

1. ನಾನಕರ ಉಪದೇಶವನ್ನು ವರ್ಣಿಸಿರಿ.
2. ನಾನಕರ ತೀರ್ಥಯಾತ್ರೆಯ ಬಗ್ಗೆ ನಿಮಗೇನು ಗೊತ್ತಿದೆ?
3. ಕೆಳಗಿನ ಶಬ್ದಗಳ ಬಗ್ಗೆ ಒಂದೊಂದು ವಾಕ್ಯವನ್ನು ಬರೆಯಿರಿ.
   ಕರ್ತಾರಪುರ, ಕೃಪಾಣ, ಗ್ರಂಥಸಾಹೇಬ.

## 16. ಅಕಬರ

ಸರಕಾರದ ಕಾಯಿದೆಯ ಎದುರು ಎಲ್ಲ ಜಾತಿಧರ್ಮದವರೂ ಸಮಾನರು; ಸರಕಾರದ ಅಧಿಕಾರದ ಸ್ಥಳಗಳನ್ನು ಎಲ್ಲ ಪ್ರಜೆಗಳು ತಮ್ಮ ಯೋಗ್ಯತೆಗೆ ತಕ್ಕಂತೆ ಪಡೆಯಬಲ್ಲರು; ಇಂಥ ಸಮಾನತೆಯಿಂದ ರಾಜ್ಯಕ್ಕೆ ಹಿತವಾಗುವದು. ಈ ದೃಷ್ಟಿಯನ್ನಿಟ್ಟುಕೊಂಡ ರಾಜನೊಬ್ಬನು ನಮ್ಮ ದೇಶದಲ್ಲಿ ನಾನೂರು ವರ್ಷಗಳ ಹಿಂದೆ ಆಳಿದನು. ಅವನೇ ಮೊಗಲ ವಂಶದ ಅಕಬರ ಬಾದಶಹನು.

### ಅಕಬರನ ಬಾಲ್ಯ

ಅಕಬರನು ಚಿಕ್ಕಂದಿನಲ್ಲಿ ಬಹಳ ಕಷ್ಟಪಡಬೇಕಾಯಿತು. ಅವನ ತಂದೆಯಾದ ಹುಮಾಯೂನನು ರಾಜ್ಯವನ್ನು ಕಳೆದುಕೊಂಡು ಅಲೆದಾಡಿದನು. ಒಬ್ಬ ರಜಪೂತ ರಾಜನ ಆಶ್ರಯದಲ್ಲಿ ಇದ್ದನು. ಅಕಬರನು ಹುಟ್ಟಿದಾಗ ಹುಮಾಯೂನನು ಸ್ವಲ್ಪ ಕಸ್ತೂರಿಯನ್ನು ಹಂಚಿ " ಈ ಕಸ್ತೂರಿಯಂತೆ ನನ್ನ ಮಗನ ಕೀರ್ತಿ ಹರಡಲಿ " ಎಂದು ಹರಸಿದನು.



ಅಕಬರ

ಅಕಬರನು ಪಟ್ಟಕ್ಕೆ ಬಂದಾಗ 14 ವರುಷದ ಹುಡುಗ. ಆಗ ಅವನ ರಾಜ್ಯವು ಪಂಜಾಬದ ಸ್ವಲ್ಪಭಾಗದಲ್ಲಿ ಮಾತ್ರ ಇತ್ತು. ತಂದೆಯ

ರಾಜ್ಯವನ್ನು ಪುನಃ ಗೆದ್ದುಕೊಳ್ಳಬೇಕಾಗಿತ್ತು. ಅವನಿಗೆ ಸುತ್ತಲೂ ಶತ್ರುಗಳೇ ತುಂಬಿದ್ದರು. ತಂದೆಯ ಸಮಾನರಾದ ಕೆಲ ಜನ ಸರದಾರರು ಅವನಿಗೆ ನೆರವಾದರು. ಅವನ ಶತ್ರುಗಳು ನಾಶವಾದರು. ರಾಜ್ಯಗಳು ವಶವಾದವು. ಕೊನೆಗೆ ಸಿಂಧ ಪ್ರಾಂತದಿಂದ ಬಂಗಾಲದ ವರೆಗೂ ಕಾಶ್ಮೀರದಿಂದ ಅಹಮ್ಮದನಗರದ ವರೆಗೂ ಇರುವ ವಿಶಾಲವಾದ ರಾಜ್ಯಕ್ಕೆ ಒಡೆಯನಾದನು.

## ರಜಪೂತರ ಸಂಬಂಧ

ಅಕಬರನ ರಾಜ್ಯವು ಭರದಿಂದ ಬೆಳೆಯಲಿಕ್ಕೆ ಅವನ ದೂರ ದೃಷ್ಟಿಯೇ ಕಾರಣ. ಆತನು ಉಳಿದ ಮುಸಲ್ಮಾನ ಅರಸರಂತೆ ಹಿಂದುಗಳನ್ನು ಕ್ರೂರತನದಿಂದ ನಡೆಸಿಕೊಳ್ಳಲಿಲ್ಲ. ಅವರ ಗುಡಿ-ಗುಂಡಾರ ಗಳಿಗೆ ಸರಕಾರದ ಆಶ್ರಯ ಸಿಕ್ಕಿತು. ಇದರಿಂದ ರಜಪೂತರಿಗೂ ಸಂತೋಷವಾಯಿತು; ಅದರಲ್ಲಿ ಅನೇಕ ರಾಜರು ತಮ್ಮ ಹೆಣ್ಣುಮಕ್ಕಳನ್ನು ಅಕಬರನಿಗೆ ಮದುವೆಮಾಡಿ ಕೊಟ್ಟರು. ಬಾದಶಹನ ಬೀಗರೆಂದು ಹೆಮ್ಮೆ ಪಡೆದರು. ಅಕಬರನ ರಾಜ್ಯವನ್ನು ಬೆಳೆಯಿಸುವದಕ್ಕಾಗಿ ಮನಮುಟ್ಟಿ ದುಡಿದರು. ಅಕಬರನಿಗೆ ರಜಪೂತ ರಾಣಿಯರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಮುಂದೆ ರಾಜರಾದರು.

## ದೀನೇ ಇಲಾಹಿ

ಅಕಬರನ ಆಯುಷ್ಯದ ಬಹುಭಾಗವು ಯುದ್ಧ ಮಾಡುವದರಲ್ಲಿಯೇ ಕಳೆಯಿತು. ಆದರೂ ಅವನು ಸಮಯ ಸಾಧಿಸಿಕೊಂಡು ಒಬ್ಬನೇ ಕುಳಿತು ದೇವರ ಬಗೆಗೂ ಧರ್ಮಗಳ ಬಗೆಗೂ ವಿಚಾರಿಸುತ್ತಿದ್ದನು. ಎಲ್ಲ ಧರ್ಮಗಳನ್ನು ತಿಳಿದುಕೊಳ್ಳಬೇಕೆಂದು ಇಚ್ಛಿಸಿದನು. ಎಲ್ಲರಿಗಾಗಿ ಒಂದು ಪ್ರಾರ್ಥನಾ ಮಂದಿರವನ್ನು ಕಟ್ಟಿಸಿದನು. ಹಿಂದು, ಮುಸಲ್ಮಾನ, ಕ್ರೈಸ್ತ, ಸೀಖ, ಪಾರಸಿ, ಜೈನ ಮೊದಲಾದ ಧರ್ಮಗಳ ಪಂಡಿತರನ್ನು ಕರೆಯಿಸಿದನು. ಧರ್ಮತತ್ವಗಳನ್ನು ತಿಳಿದುಕೊಂಡನು. ಎಲ್ಲ ಧರ್ಮಗಳಲ್ಲಿಯೂ ಸತ್ಯವಿದೆ ಯೆಂಬುದು ತಿಳಿದುಬಂತು. ಜೈನ ಧರ್ಮದ ಅಹಿಂಸೆಯು ಅವನ ಮೇಲೆ ಬಹಳ ಪರಿಣಾಮ ಮಾಡಿತು. ಮಾಂಸ ತಿನ್ನುವದನ್ನು ಬಿಟ್ಟುಬಿಟ್ಟನು. ಪಂಜರದಲ್ಲಿಯ ಹಕ್ಕಿಗಳನ್ನು ಹಾರಿಬಿಟ್ಟನು. ಪಾರಸಿ ಧರ್ಮದವರಂತೆ ಅಗ್ನಿ-ಸೂರ್ಯರ ಪೂಜೆಯನ್ನು ಮಾಡತೊಡಗಿದನು. ಹಿಂದುಗಳಂತೆ ವೇಷಭೂಷಣಗಳನ್ನು ಮಾಡತೊಡಗಿದನು. ಅವರ ಮೇಲಿನ ಜಿಝಿಯಾ

ಕರ, ಯಾತ್ರಾ ಕರ, ಸ್ನಾನದ ಕರ ಮುಂತಾದವುಗಳನ್ನು ತೆಗೆದು ಹಾಕಿದನು. ಹೀಗೆ ಎಲ್ಲ ಧರ್ಮಗಳ ಒಳ್ಳೆಯ ತತ್ವಗಳನ್ನು ಆರಿಸಿ, ಒಂದು ಹೊಸ ಧರ್ಮ ವನ್ನು ಆರಂಭಿಸಿದನು. ಅದರ ಹೆಸರು " ದಿನೇ ಇಲಾಹಿ ".

**ಅಕಬರನ ಘನತೆ**

ಅಕಬರನು ತನ್ನ ಕಾಲದ ಜಗತ್ತಿನ ಅರಸರಲ್ಲಿ ಶ್ರೇಷ್ಠನು. ಅವನು ಮಂತ್ರಿಯಾದ ತೋಡರಮಲ್ಲನು ಕಂದಾಯದಲ್ಲಿ ಸುಧಾರಣೆ ಮಾಡಿದನು. ಇದರಿಂದ ಜನರಿಗೆ ಭಾರವಾಗದೆ ರಾಜ್ಯದ ಆದಾಯ ಬೆಳೆಯಿತು. ಅನ್ಯಾಯದ ಕರವನ್ನು ತೆಗೆದುಹಾಕಿದನು. ಗುಡಿಯಲ್ಲಿಯೂ ಮಸೀದೆಗಳಲ್ಲಿಯೂ ಪಾಠ ಹೇಳುತ್ತಿದ್ದ ಶಿಕ್ಷಕರಿಗೆ ವರ್ಷಾಸನ ಹಾಕಿಕೊಟ್ಟನು. ಒಂದಕ್ಕೆ ನಮ್ಮ ದೇಶದಲ್ಲಿ ಗಂಡ ಸತ್ತ ಮೇಲೆ ಅವನ ಹೆಂಡತಿಯು ಗಂಡನೊಡನೆ ಚಿತೆ ಯೇರಬೇಕೆಂಬ ಪದ್ಧತಿ ಇತ್ತು. ಅದನ್ನು ನಿಲ್ಲಿಸಿ ಬಿಡಲು ಅಕಬರನು ಪ್ರಯತ್ನಿಸಿದನು. ಮುಸಲ್ಮಾನರಲ್ಲಿಯ ಕೆಲವು ದೋಷಗಳನ್ನು ತೆಗೆದು ಹಾಕಿದನು. ವ್ಯಾಪಾರದಲ್ಲಿ ಮೋಸವಾಗಬಾರದೆಂದು ಅಳತೆ ಕಲ್ಲುಗಳನ್ನು ಮಾಡಿ ಸರಿಯಾಗಿ ವ್ಯವಸ್ಥೆ ಮಾಡಿಸಿದನು. ರಾಜ್ಯದಲ್ಲಿ 15 ಸುಭೆಗಳನ್ನು ಮಾಡಿ ಸರಿಯಾಗಿ ವ್ಯವಸ್ಥೆ ಮಾಡಿಸಿದನು. ಅನೇಕ ಕಟ್ಟಡಗಳನ್ನು ಕಟ್ಟಿಸಿದನು. ಗಾಯಕರಿಗೂ ಚಿತ್ರಕಾರರಿಗೂ ವಿದ್ವಾಂಸರಿಗೂ ಆಶ್ರಯ ಕೊಟ್ಟನು. ಅವನ ದರಬಾರದಲ್ಲಿ ಒಂಬತ್ತು ಜನ ಪ್ರತಿಭಾವಂತರು ಇದ್ದರು. ಅವರಿಗೆ ನವರತ್ನಗಳೆಂದು ಕರೆಯುತ್ತಿದ್ದರು. ಅವರಲ್ಲಿ ಬೀರಬಲ್ಲನೆಂಬವನು ಅನೇಕ ಕತೆ ಗಳನ್ನು ಹೇಳಿ ಅಕಬರನನ್ನು ಸಂತೋಷಪಡಿಸುತ್ತಿದ್ದನು. ಅವನ ಕತೆಗಳು ಜನರನ್ನು ನಗಿಸದೆ ಬಿಡುವದಿಲ್ಲ. ಅವನ ಕತೆಗಳನ್ನು ನೀವು ಓದಿರದಿದ್ದರೆ ಓದಿ ಆನಂದ ಪಡೆಯಿರಿ.

**ಅಭ್ಯಸನಗಳು**

1. ಅಕಬರನಿಗೆ ರಾಜ್ಯವನ್ನು ಬೆಳೆಸಲು ಯಾರು ಸಹಾಯ ಮಾಡಿದರು. ?
2. ಅಕಬರನ ಹೊಸ ಧರ್ಮದ ಹೆಸರೇನು ?
3. ಅಕಬರನು ನಮಗೆ ಮಾದರಿಯ ಅರಸನು ಏಕೆ ?

## 17. ರಾಣಾ ಪ್ರತಾಪ

ಮೇವಾಡವೆಂಬುದು ರಜಪೂತ ರಾಜ್ಯವಾಗಿತ್ತು. ಅದರ ರಾಜರು ಶ್ರೀ ರಾಮಚಂದ್ರನಂತೆ ಸೂರ್ಯವಂಶದವರು. ಉಳಿದ ರಜಪೂತ ರಾಜರು ಅವರಿಗೆ ಗೌರವ ಕೊಡುತ್ತಿದ್ದರು. ಪ್ರತಾಪಸಿಂಹನು ಮೇವಾಡದ ಅರಸನು. ಮೇವಾಡದ ಅರಸರನ್ನು 'ರಾಣಾ' ಎಂದು ಕರೆಯುತ್ತಾರೆ.

### ಮೇವಾಡದ ಹೊಸ ರಾಜಧಾನಿ



ರಾಣಾ ಪ್ರತಾಪ

ಚಿತ್ತೋಡವು ಮೇವಾಡದ ರಾಜಧಾನಿ ಆಗಿತ್ತು. ಚಿತ್ತೋಡದ ಕೋಟೆಯು ಬಹಳ ಗಟ್ಟಿಮುಟ್ಟಾದ್ದರಿಂದ ಹೆಸರುವಾಸಿಯಾಗಿತ್ತು. ದಿಲ್ಲಿಯ ಅರಸನಾದ ಅಕಬರನು ಪ್ರತಾಪಸಿಂಹನ ತಂದೆಯಾದ ಉದಯಸಿಂಹನಿಂದ ಚಿತ್ತೋಡವನ್ನು ಗೆದ್ದುಕೊಂಡಿದ್ದನು. ಉದಯಸಿಂಹನು ಅರವಲಿ ಗುಡ್ಡುಗಾಡಿನಲ್ಲಿ ಉದಯಪುರವೆಂಬ ಹೊಸ ರಾಜಧಾನಿಯನ್ನು ಕಟ್ಟಿಕೊಂಡಿದ್ದನು. ಆತನ ತರುವಾಯ ಅದು ಪ್ರತಾಪನ ರಾಜಧಾನಿಯಾಯಿತು.

### ಮಾನಸಿಂಹನನ್ನು ಕೆಣಕಿದನು

ಮಾನಸಿಂಹನು ಅಕಬರನ ಸೇನಾಪತಿಯಾಗಿದ್ದನು. ಒಂದು ದಿನ ಅವನು ಪ್ರತಾಪಸಿಂಹನನ್ನು ಕಾಣಲು ಉದಯಪುರಕ್ಕೆ ಬಂದನು. ರಾಣಾ ಪ್ರತಾಪನೂ ಅವನ ಮಗನಾದ ಅಮರಸಿಂಹನೂ ಬಡತನದ ಸ್ಥಿತಿಯಲ್ಲಿಯೇ ಮಾನಸಿಂಹನ ಸ್ವಾಗತ ಮಾಡಿದರು; ಆದರೆ ಊಟದ ವೇಳೆಯಲ್ಲಿ ಪ್ರತಾಪಸಿಂಹನು ಬರಲಿಲ್ಲ. ಅಮರಸಿಂಹನು ಮಾನಸಿಂಹನಿಗೆ ಊಟಮಾಡಲು ಕೇಳಿಕೊಂಡನು. ಪ್ರತಾಪಸಿಂಹನಿಗೆ ಮೈಯಲ್ಲಿ ಸರಿಯಾಗಿಲ್ಲವೆಂದು ಕಾರಣ ಹೇಳಿದನು. ಮಾನಸಿಂಹನಿಗೆ ಕೆಡಕೆನಿಸಿತು. ಮಾನ

ಸಿಂಹನ ಮನೆತನದ ಹೆಣ್ಣುಮಕ್ಕಳನ್ನು ಅಕಬರನಿಗೂ, ಅವನ ಮಗ ಸಲೀಮನಿಗೂ ಕೊಟ್ಟಿದ್ದರು. ಈ ಕಾರಣದಿಂದಲೇ ಪ್ರತಾಪನು ತನ್ನೊಡನೆ ಊಟಮಾಡುವದಿಲ್ಲವೆಂಬುದು ಹೊಳೆಯಿತು. ಮಾತಿಗೆ ಮಾತು ಬೆಳೆದು ಮಾನಸಿಂಹನು ಸಿಟ್ಟಾಗಿ ಊಟಮಾಡದೇ ಹೊರಟನು. ಪ್ರತಾಪಸಿಂಹನ ಅಭಿಮಾನವನ್ನು ಮುರಿಯುವ ನಿಶ್ಚಯ ಮಾಡಿಕೊಂಡೇ ಹೋದನು.

## ಹಳದಿ ಘಟ್ಟದ ಯುದ್ಧ ಮತ್ತು ಆ ಬಳಿಕ

ಪ್ರತಾಪಸಿಂಹನ ಸೈನ್ಯ ಚಿಕ್ಕದು. ಅವನ ರಾಜ್ಯದ ಉತ್ಪನ್ನ ವಾದರೂ ಸಣ್ಣದು. ನೆರೆಹೊರೆಯ ರಜಪೂತರಾದರೂ ಅಕಬರನಿಗೆ ಹೆಣ್ಣು ಕೊಟ್ಟವರು, ಇಲ್ಲವೆ ಶರಣು ಬಂದವರು. ಅವರಿಗೆ ಪ್ರತಾಪನೊಬ್ಬನು ತನ್ನ ಕುಲದ ಗೌರವವನ್ನು ಕಾಯ್ದುಕೊಂಡಿದ್ದುದು ಸಹನವಾಗುತ್ತಿರಲಿಲ್ಲ. ಹೀಗೆ ಪ್ರತಾಪನಿಗೆ ಯಾರ ಸಹಾಯವೂ ಇರಲಿಲ್ಲ. ಗುಡ್ಡಗಾಡಿನಲ್ಲಿಯ ಭಿಲ್ಲರು ಹಾಗೂ ವಿಶ್ವಾಸದ ಕೆಲ ರಜಪೂತರು ಇವರಿಂದ ಕೂಡಿದ ಸೈನ್ಯವನ್ನು ಕಟ್ಟಿ ಪ್ರತಾಪನು ಶೌರ್ಯದಿಂದ ಅಕಬರನ ದೊಡ್ಡ ಸೈನ್ಯವನ್ನು ಎದುರಿಸಿದನು. ಈ ಯುದ್ಧವು ಹಳದೀ ಘಟ್ಟದಲ್ಲಿ ಆಯಿತು. ದುರ್ದೈವ ದಿಂದ ಪ್ರತಾಪನಿಗೆ ಅಪಜಯವಾಯಿತು.

ಈ ಯುದ್ಧದಲ್ಲಿ ಅಕಬರಿನಿಗೆ ಜಯವಾದರೂ, ಚಿತ್ತೂರು ಅವನ ವಶದಲ್ಲಿಯೇ ಇದ್ದರೂ, ಅದರಿಂದ ಅವನಿಗೆ ಏನೂ ಲಾಭವಾಗಲಿಲ್ಲ. ಪ್ರತಾಪನ ಆಜ್ಞೆಯಿಂದ ಚಿತ್ತೂರನ್ನು ಎಲ್ಲರೂ ಬಿಟ್ಟರು. ಚಿತ್ತೂರು ಹಾಳು ಬಿದ್ದಿತು.- ಗುಡ್ಡಗಳಲ್ಲಿ ಅಡಗಿಕೊಂಡ ರಜಪೂತರು ಮೊಗಲರ ಮೇಲೆ ದಾಳಿ ಮಾಡಿ ಸೋಲಿಸಿ ಬಿಡುತ್ತಿದ್ದರು. ಹೀಗೆ ಕೆಲವೇ ವರ್ಷಗಳಲ್ಲಿ ಪ್ರತಾಪನು ಎಷ್ಟೋ ಕೋಟೆಗಳನ್ನು ಪುನಃ ಗೆದ್ದುಕೊಂಡನು. ಚಿತ್ತೋಡವು ಮಾತ್ರ ಉಳಿಯಿತು.

## ಪ್ರತಾಪಸಿಂಹನ ಕಷ್ಟಗಳು

ಚಿತ್ತೋಡವನ್ನು ತೆಗೆದುಕೊಳ್ಳದೆ ಅವನಿಗೆ ಸಮಾಧಾನವಾಗುವಂತಿ ರಲಿಲ್ಲ. ಚಿತ್ತೋಡವು ವಶವಾಗುವವರೆಗೆ ಬಂಗಾರದ ತಾಟಿನಲ್ಲಿ ಊಟ ಮಾಡುವದಿಲ್ಲವೆಂದೂ ಮೆತ್ತನ್ನ ಗಾದಿಯ ಮೇಲೆ ಮಲಗಲಿಕ್ಕಿಲ್ಲವೆಂದೂ ಶಪಥಮಾಡಿ ಅದರಂತೆ ನಡೆದನು ಅಕಬರನಿಗೆ ಶರಣು ಹೋಗಿದ್ದರೆ ಆತನೂ ಮಾನಸಿಂಗನಂತೆ ದೊಡ್ಡ ಅಧಿಕಾರಿಯಾಗಿ ಮೆರೆಯಬಹುದಿತ್ತು. ಆದರೆ ಅವನಿಗೆ ಮೇವಾಡದ ಸ್ವಾತಂತ್ರ್ಯ ಹಾಗೂ ಮನೆತನದ

ಮರ್ಯಾದೆ ಇವೇ ಹೆಚ್ಚಿನವಾಗಿದ್ದವು. ಅವುಗಳನ್ನು ಕಾಪಾಡಿಕೊಳ್ಳಲು ಅಡವಿಯ ಪಾಲಾದನು. ಅವನಿಗೂ ಅವನ ಹೆಂಡಿರುಮಕ್ಕಳಿಗೂ ಎರಡು ಮೂರು ದಿನಗಳವರೆಗೆ ಉಪವಾಸವಿರುವ ಪ್ರಸಂಗಗಳು ಬರುತ್ತಿದ್ದವು.

### ಕೊನೆಯ ಗಳಿಗೆಯ ಕಸಿವಿಸಿ

ಪ್ರತಾಪಸಿಂಹನು ಈ ರೀತಿಯಾಗಿ ಸ್ವಾತಂತ್ರ್ಯಕ್ಕಾಗಿ ಕಷ್ಟಬಟ್ಟನು. ಅತಿ ಶ್ರಮದಿಂದ ಜ್ವರ ಬರಹತ್ತಿತು. ಚಿತ್ತೂರನ್ನು ಗೆದ್ದುಕೊಳ್ಳುವದಾಗಲಿಲ್ಲವೆಂಬ ಕೊರಗು ಜ್ವರಕ್ಕಿಂತ ಹೆಚ್ಚಾಗಿ ಅವನನ್ನು ಸುಡುತ್ತಿತ್ತು. ಹೀಗಾಗಿ ಅವನು ಕಸಿವಿಸಿಪಡಹತ್ತಿದನು. ಅವನ ಸರದಾರರೂ ಮಗನಾದ ಅಮರಸಿಂಹನೂ ಅವನ ಹಾಸಿಗೆಯ ಸುತ್ತ ನಿಂತರು. ಚಿತ್ತೂರನ್ನು ತೆಗೆದುಕೊಂಡೇ ತೀರುವದಾಗಿಯೂ, ಅವನ ಪ್ರತಿಜ್ಞೆಯನ್ನು ಪಾಲಿಸುವದಾಗಿಯೂ ಶಪಥ ಮಾಡಿದರು. ಇದರಿಂದ ಪ್ರತಾಪನಿಗೆ ಸ್ವಲ್ಪ ಸಮಾಧಾನದಿಂದ ಸಾಯಲು ಸಾಧ್ಯವಾಯಿತು.

### ಪ್ರತಾಪ ಸಿಂಹನ ಘನತೆ

ರಾಣಾ ಪ್ರತಾಪನು ವೀರನು, ಸಾಹಸಿಯು. ಯಾರ ಬೆಂಬಲವೂ ಇಲ್ಲದೆ ಅಕಬರನ ವಿಶಾಲ ಸೇನೆಯನ್ನು ಎದುರಿಸಿದನು. ಅವನು ಸೋತದ್ದರಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ಕುಲದ ಗೌರವ ಹಾಗು ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಅವನು ಮಾಡಿದ ತ್ಯಾಗವು ಅಪಾರವಾದುದು.

### ಅಭ್ಯಸನಗಳು

1. ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳ ತುಂಬಿರಿ.
   ಅ) ಮೇವಾಡದ ರಾಜರು ಶ್ರೀರಾಮನಂತೆ................ವಂಶದವರು.
   ಬ) ಮೊಗಲರಿಗೂ, ಪ್ರತಾಪನಿಗೂ .... ....ದಲ್ಲಿ ಯುದ್ಧವಾಯಿತು.
2. ಪ್ರತಾಪನ ಪ್ರತಿಜ್ಞೆಗಳು ಯಾವವು ?
3. ಪ್ರತಾಪನು ಮರಣ ಕಾಲದಲ್ಲಿ ಏಕೆ ಕಸಿವಿಸಿಬಟ್ಟನು ?

## 18. ಛತ್ರಪತಿ ಶಿವಾಜಿ

ವಿಜಯ ನಗರದ ರಾಜ್ಯವನ್ನು ನಾವು ಬಲ್ಲೆವು. ಹುಕ್ಕ ಬುಕ್ಕರು ಅದನ್ನು ಸ್ಥಾಪಿಸಿದರು. ಶ್ರೀ ವಿದ್ಯಾರಣ್ಯರು ಅವರ ಗುರುಗಳು; ವಿಜಯ ನಗರವು ಮಾಡಿದ ಸ್ವರಾಜ್ಯ ಸ್ಥಾಪನೆ ಸ್ವಧರ್ಮರಕ್ಷಣೆಗಳಂಥ ಕಾರ್ಯವೇ

17 ನೆಯ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ನಡೆಯಿತು. ಅದಕ್ಕೆ ಮುಂದಾದವನು ಶಿವಾಜಿ. ಅವನಿಗೆ ಸಲಹೆ ಕೊಟ್ಟ ಗುರುಗಳು ಸಮರ್ಥ ರಾಮದಾಸರು.

**ಶಿವಾಜಿಯ ಬಾಲ್ಯ ಮತ್ತು ತಾರುಣ್ಯ**



ಛತ್ರಪತಿ ಶಿವಾಜಿ

ಜೀಜಾಬಾಯಿಯು ಶಿವಾಜಿಯ ತಾಯಿಯು. ತನ್ನ ಮಗನು ಒಳ್ಳೆಯವನಾಗಬೇಕೆಂದು ಆಕೆಯ ಇಚ್ಛೆ. ಅದಕ್ಕಾಗಿ ಅವಳು ದಿನಾಲು ರಾಮಾಯಣ ಮಹಾಭಾರತಗಳ ಕತೆಗಳನ್ನು ಹೇಳುತ್ತಿದ್ದಳು. ದುಷ್ಟರನ್ನು ಸಂಹಾರ ಮಾಡುವ ಶಕ್ತಿ ತನ್ನಲ್ಲಿ ಬರಬೇಕು, ತಾನೂ ಅಭಿಮನ್ಯುವಿನಂತೆ ಶೂರನಾಗಬೇಕು ಎಂದು ಆ ಬಾಲ ಶಿವಾಜಿ ಹಂಬಲಿಸುತ್ತಿದ್ದನು. ಓದು ಬರೆಹದ ಕೂಡ ವ್ಯಾಯಾಮ ಮಾಡುವದನ್ನೂ ಕುಸ್ತಿಯಾಡುವದನ್ನೂ ಕುದುರೆ ಹತ್ತುವದನ್ನೂ ಮಾಡುತ್ತಿದ್ದ. ಪುಣೆಯ ಸುತ್ತಲಿನ ಮಾವಳೆ ಜನರು ಇವನಿಗೆ ಜೀವದ ಗೆಳೆಯರಾದರು.

ಶಿವಾಜಿಯ ತಂದೆಯ ಹೆಸರು ಶಹಾಜಿ. ಅವನು ವಿಜಾಪೂರದ ಸುಲ್ತಾನನ ಸರದಾರನು. ಒಮ್ಮೆ ಶಹಾಜಿಯು ಶಿವಾಜಿಯನ್ನು ವಿಜಾಪೂರದಲ್ಲಿಯ ಸುಲ್ತಾನನ ದರ್ಬಾರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸುಲ್ತಾನನಿಗೆ ಸಲಾಮು ಮಾಡಬೇಕಾಗುತ್ತಿತ್ತು. ಎಲ್ಲರೂ ಸಲಾಮು ಮಾಡಿದರು. ಶಿವಾಜಿಯು ಮಾಡಲಿಲ್ಲ. ಕೊನೆಗೆ ಶಹಾಜಿಯೇ ಸುಲ್ತಾನನನ್ನು ಸಮಾಧಾನಪಡಿಸಬೇಕಾಯಿತು.

ಶಿವಾಜಿಯ ಕಾಲಕ್ಕೆ ಕೋಟೆಗಳಿಗೆ ಮಹತ್ವವಿತ್ತು. ಅವು ಆಯಕಟ್ಟಿನ ಸ್ಥಳಗಳಲ್ಲಿರುತ್ತಿದ್ದವು. ವೈರಿಗಳನ್ನು ಸೋಲಿಸಲು ಅವುಗಳಿಂದ ಅನುಕೂಲವಾಗುತ್ತಿತ್ತು. ಶಿವಾಜಿಗೆ ಕೋಟೆಗಳು ಬೇಕಾಗಿದ್ದವು. ಅವನು

ಕೆಲವು ಕೋಟೆಗಳನ್ನು ಕಟ್ಟಿಸಿದ. ಇನ್ನು ಕೆಲವು ಕೋಟೆಗಳನ್ನು ಗೆದ್ದು ಕೊಂಡ. ಈ ಕೆಲಸಕ್ಕೆ ಸೈನ್ಯ ಬೇಕು. ಸೈನ್ಯದ ವೆಚ್ಚಕ್ಕೆ ಹಣ ಬೇಕು. ಹಣಕ್ಕಾಗಿ ಸುತ್ತಲಿನ ರಾಜ್ಯದಲ್ಲಿ ಅವನು ಸುಲಿಗೆಯನ್ನು ಪ್ರಾರಂಭಿಸಿದ. ಇದರಿಂದ ಅಲ್ಲಿಯ ಜನರು ಅವನ ಶತ್ರುಗಳಾದರು.

## ವಿಜಾಪುರದೊಡನೆ ಯುದ್ಧ

ವಿಜಾಪುರದ ಸುಲ್ತಾನರಿಗೆ ಶಿವಾಜಿಯು ಒಬ್ಬ ಶತ್ರು. ಸುಲ್ತಾನನ ರಾಜ್ಯದಲ್ಲಿ ಹಾವಳಿ ಬಹಳವಾಯಿತು. ಅದಕ್ಕಾಗಿ ಸುಲ್ತಾನನು ಶಹಾಜಿಯನ್ನೇ ಹಿಡಿದು ಸೆರೆಯಲ್ಲಿಟ್ಟ. ಆದರೆ ಶಿವಾಜಿಯು ಯುಕ್ತಿಯಿಂದ ಶಹಾಜಿಯನ್ನು ಬಿಡಿಸಿದನು. ಕೆಲವು ವರ್ಷಗಳಾದ ಮೇಲೆ ಮೊದಲಿನಂತೆ ಶಿವಾಜಿಯ ಹಾವಳಿ ನಡೆಯಿತು. ಆಗ ಸುಲ್ತಾನನು ತನ್ನ ಸೇನಾಪತಿ ಅಫಜಲ್‌ಖಾನನನ್ನು ಕಳಿಸಿದ. ಚತುರನಾದ ಶಿವಾಜಿಯು ಆತನನ್ನು ಇಲ್ಲದಂತೆ ಮಾಡಿದ.

## ಮೊಗಲರೊಡನೆ ಚಕಮಕಿ

ದಿಲ್ಲಿಯಲ್ಲಿ ಆಳುತ್ತಿದ್ದ ಮೊಗಲ ಬಾದಶಹನಾದ ಔರಂಗಜೇಬನು ಶಿವಾಜಿಗೆ ಎರಡನೆಯ ದೊಡ್ಡ ಶತ್ರು. ಅವನು ಶಿವಾಜಿಯನ್ನು ಮುರಿದು ಹಾಕಬೇಕೆಂದು ಶಾಇಸ್ತೆಖಾನನನ್ನು ಕಳಿಸಿದ. ಅವನ ಸೈನ್ಯವು ದೊಡ್ಡದು. ಆದರೂ ಶಿವಾಜಿ ಅವನ ಕಣ್ಣಿಗೆ ಇಂಗು ಹಚ್ಚಿ ಅವನನ್ನು ಸೋಲಿಸಿದ. ಈ ಸಂಗತಿಯಿಂದ ಔರಂಗಜೇಬನಿಗೆ ಅವಮಾನವಾಯಿತು. ಇದರ ಸೇಡನ್ನು ತೀರಿಸಿಕೊಳ್ಳಲು ಅವನು ಜಯಸಿಂಹನೆಂಬ ಸರದಾರನನ್ನು ಕಳಿಸಿದನು. ಜಯಸಿಂಹನನ್ನು ಎದುರಿಸುವದು ಶಿವಾಜಿಗೆ ಕಷ್ಟದ ಕೆಲಸವಾಯಿತು. ಆದ್ದರಿಂದ ಅವನು ಒಪ್ಪಂದ ಮಾಡಿಕೊಂಡನು. ಅನೇಕ ಕೋಟೆಗಳನ್ನು ಮೊಗಲರಿಗೆ ಒಪ್ಪಿಸಿದನು. ಜಯಸಿಂಹನು ಶಿವಾಜಿಯ ಮಿತ್ರನಾದನು. ಔರಂಗಜೇಬನ ಭೆಟ್ಟಿಗೆ ಜಯಸಿಂಹನು ಶಿವಾಜಿಯನ್ನು ಕರೆದನು. ಶಿವಾಜಿಯು ಒಪ್ಪಿ ಬಾದಶಹನ ಭೆಟ್ಟಿಗೆ ನಡೆದನು. ಆದರೆ ಅಲ್ಲಿ ಅವನಿಗೆ ಮೋಸವಾಯ್ತು. ಶಿವಾಜಿಯು ಸ್ಥಾನಬದ್ಧನಾದನು.

ಆಗ ಶಿವಾಜಿಯು ಒಂದು ಹಂಚಿಕೆ ಹಾಕಿದನು. ತನಗೆ ಜಡ್ಡು ಆಗಿರುವದೆಂದು ಹೇಳಿದನು. ಕೆಲವು ದಿನಗಳಾದ ಮೇಲೆ ಆ ಜಡ್ಡು ಗುಣವಾಗಿರುವದೆಂದು ಹೇಳಿದನು. ಅದಕ್ಕಾಗಿ ಸಾಧು-ಸಂತರಿಗೂ ಫಕೀರರಿಗೂ ಮಿಠಾಯಿ ಬುಟ್ಟಿಗಳನ್ನು ಕಾಣಿಕೆಯೆಂದು ಕಳಿಸಹತ್ತಿದನು. ಕಾವಲು

ಜೇಸುನಾಥರು ಇನ್ನು ತಿಳಿಸಿದ್ದೇನೆಂದರೆ, ದೇವರು ಪಾಪಾತ್ಮರ ಸಲುವಾಗಿ ಎದುರು ನೋಡುತ್ತಾರೆ. ಮತ್ತು ಅವರು ತಮ್ಮ ಪಾಪಗಳಿಗಾಗಿ ದುಃಖಪಡುವದನ್ನು ಕಂಡು ಸಂತೋಷಿಸುತ್ತಾರೆ. ಜೇಸುನಾಥರು ಸುಂಕದವರೊಡನೆಯೂ ಪಾಪಾತ್ಮರೊಡನೆಯೂ ಹೋದದ್ದಕ್ಕಾಗಿ ಫರಿಜೇಯರು ಅವರ ಮೇಲೆ ಗುಣಗುಟ್ಟಿ ಈ ಮನುಷ್ಯನು ಪಾಪಾತ್ಮರ ಸಂಗಡ ಭುಂಜಿಸುತ್ತಾನೆಂದರು. ಆದರೆ ಜೇಸುನಾಥರು ಅವರಿಗೆ ತಿಳಿಸಿದ್ದೇನೆಂದರೆ "ಸೌಖ್ಯವಾಗಿರುವವರಿಗೆ ವೈದ್ಯನು ಅವಸರವಿಲ್ಲ. ಆದರೆ ವ್ಯಾಧಿಗ್ರಸ್ಥನಿಗೆ ಅವಸರವಾಗಿರುತ್ತಾನೆ. ನಾನು ಪುಣ್ಯಾತ್ಮರನ್ನು ಕರೆಯಲು ಬರಲಿಲ್ಲ. ಆದರೆ ಪಾಪಾತ್ಮರು ತಪಸ್ಸು ಮಾಡುವ ಹಾಗೆ ಹೇಳಲು ಬಂದೆನು" ಅಂದರು.

ಜೇಸುನಾಥರು ಫರಿಜೇಯರನ್ನು ನೋಡಿ, "ನಿಮ್ಮಲ್ಲಿ ಯಾವನೊಬ್ಬನಿಗೆ ನೂರು ಕುರಿಗಳಿದ್ದು ಅವುಗಳಲ್ಲಿ ಒಂದು ಕಳೆದು ಹೋದರೆ ಏನು ಮಾಡುವನು? ಉಳಿದ ತೊಂಭತ್ತೊಂಬತ್ತು ಕುರಿಗಳನ್ನು ಬಿಟ್ಟು ಕಳೆದು ಹೋದ ಕುರಿಯನ್ನು ಹುಡುಕಲು ಹೋಗುವನಲ್ಲವೋ? ಅದು ಸಿಕ್ಕಾಗ ಸಂತೋಷದಿಂದ ಅದನ್ನು ತನ್ನ ಭುಜಗಳಮೇಲೆ ಎತ್ತಿಕೊಂಡು ಬರುವನಲ್ಲವೋ? ಮನೆಗೆ ಬಂದು ತನ್ನ ಸ್ನೇಹಿತರನ್ನು ಕರೆದು ಎಲ್ಲರೂ ಸಂತೋಷಿಸಿರಿ ಯಾಕಂದರೆ ಕಳೆದು ಹೋದ ನನ್ನ ಕುರಿಯು ತಿರುಗಿ ಸಿಕ್ಕಿತೆಂದು ಹೇಳುವನು." ಅದಕ್ಕಾಗಿ ನಾನು ಸಹ ನಿಮಗೆ ನಿಶ್ಚಯವಾಗಿ ಹೇಳುತ್ತೇನೆ. ಇದೇ ಪ್ರಕಾರ ಮೋಕ್ಷದಲ್ಲಿ ಸಹ ತಪಸ್ಸು ಮಾಡಲು ಅವಸರವಿಲ್ಲದ ತೊಂಬತ್ತೊಂಬತ್ತು ಮಂದಿ ಪುಣ್ಯಾತ್ಮರಿಗಿಂತಲೂ, ಒಬ್ಬ ಪಾಪಾತ್ಮನು ತನ್ನ ಪಾಪಗಳಿಗಾಗಿ ದುಃಖಪಡುವದನ್ನು ಕಂಡು ಸಂತೋಷಿಸುವರು.

## ಇಂಗ್ಲಿಷರೊಡನೆ ಚಕಮಕಿ



ಟಿಪ್ಪುಸುಲ್ತಾನ

ಕ್ರಮಕ್ರಮವಾಗಿ ಆತನ ದಂಡು ಬೆಳೆಯಿತು. ಹಿಂದೂ ದೇಶದ ದಕ್ಷಿಣದ ಕೊನೆಯಲ್ಲಿ ತಿರುವಾಂಕೂರು ರಾಜ್ಯವಿರುವುದು; ಅದು ಒಂದು ಚಿಕ್ಕ ರಾಜ್ಯ. ಟಿಪ್ಪುವಿನ ಸೈನ್ಯವನ್ನು ಇದಿರಿಸುವಷ್ಟು ಬಲವುಳ್ಳ ಸೈನ್ಯವು ಆ ರಾಜನಲ್ಲಿ ಇರಲಿಲ್ಲ. ಆದುದರಿಂದ ಆ ರಾಜನು ಇಂಗ್ಲಿಷರ ಸಹಾಯವನ್ನು ಕೋರಿದನು. ಆಗ ಇಂಗ್ಲಿಷರ ಗವರ್ನರ ಆಗಿದ್ದವನು ಕಾರ್ನವಾಲೀಸ್. ಆತನು ಮರಾಠರ ಹಾಗೂ ನಿಜಾಮನ ನೆರವಿನಿಂದ ದೊಡ್ಡ ಸೈನ್ಯವನ್ನು ಸಿದ್ಧಪಡಿಸಿಕೊಂಡು ಕಲ್ಕತ್ತದಿಂದ ದಕ್ಷಿಣ ದೇಶಕ್ಕೆ ಬಂದನು. ಟಿಪ್ಪುವಿನ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಮುತ್ತಿದನು. ಆಗ ಟಿಪ್ಪು ಆಂಗ್ಲೇಯರೊಡನೆ ಒಪ್ಪಂದವನ್ನು ಮಾಡಿಕೊಂಡನು. ಆ ಒಪ್ಪಂದದ ಪ್ರಕಾರ ರಾಜ್ಯದ ಅರ್ಧ ಭಾಗವನ್ನು ಅವನು ಇಂಗ್ಲಿಷರಿಗೆ ಕೊಡಬೇಕಾಯಿತು (1792).

## ಟಿಪ್ಪುವಿನ ವೀರ ಮರಣ

ಅನಂತರ ಏಳುವರ್ಷಗಳ ಕಾಲ, ಟಿಪ್ಪು ಸುಮ್ಮನಿದ್ದನು. ಅವನಿಗೆ ಪುನಃ ಇಂಗ್ಲಿಷರನ್ನು ಎದುರಿಸಬೇಕೆಂಬ ಆಸೆ ಹುಟ್ಟಿತು. ಅವನು ಇಂಗ್ಲಿಷರ 'ಸಹಾಯಕ ಸೈನ್ಯ ಪದ್ಧತಿ' ಯನ್ನು ಒಪ್ಪಿಕೊಳ್ಳಲಿಲ್ಲ. ಅವರನ್ನು ಹಿಂದೂ ದೇಶದಿಂದ ಓಡಿಸಿಯೇ ಬಿಡಬೇಕೆಂದು ಬಯಸಿದನು. ಅದಕ್ಕಾಗಿ ಫ್ರೆಂಚರ ನೆರವಿನಿಂದ ತಕ್ಕ ಪ್ರಯತ್ನಗಳನ್ನು ಮಾಡಲಾರಂಭಿಸಿದನು. ಈ ವಿಷಯವು ಇಂಗ್ಲಿಷರಿಗೆ ತಿಳಿಯಿತು. ಆಗಿನ ಗವರ್ನರ್ ಜನರಲ್ಲನಾದ ವೆಲ್ಲೆಸ್ಲಿ ಮದ್ರಾಸಿಗೆ ಬಂದು ನಿಜಾಮನ ನೆರವಿನಿಂದ ಮೈಸೂರಿನ ಮೇಲೆ ಒಂದು ದಂಡನ್ನು ಕಳುಹಿದನು. ಇದನ್ನು ನೋಡಿ, ಟಿಪ್ಪು ಕೋಟೆ

ಯೊಳಗೆ ಸೇರಿಕೊಂಡನು. ಇಂಗ್ಲೀಷರು ಮತ್ತೊಂದು ಸಲ ಮುತ್ತಿಗೆ ಹಾಕಿದರು. ಸ್ವಲ್ಪ ದಿನಗಳಲ್ಲಿ ಆ ಕೋಟೆ ಬಿದ್ದುಹೋಯಿತು. ಟಿಪ್ಪು ಕೋಟೆಯ ಬಾಗಿಲಿನಲ್ಲಿ ಶೌರ್ಯದಿಂದ ಕಾದುತ್ತ ಮಡಿದನು. ಮೈಸೂರು ಪ್ರಾಂತವು ಇಂಗ್ಲಿಷರ ವಶವಾಯಿತು.

### ಮೈಸೂರಿನ ರಾಜ್ಯವ್ಯವಸ್ಥೆ

ಟೀಪುವಿನ ಅರ್ಧ ರಾಜ್ಯವು ಇಂಗ್ಲಿಷರಿಗೂ ಅರ್ಧ ರಾಜ್ಯವು ನಿಜಾಮನಿಗೂ ಸಲ್ಲತಕ್ಕದ್ದು; ಆದರೆ ವೆಲ್ಲಸ್ಲಿಯು ಮೈಸೂರಿನ ಮುಂಚಿನ ಅರಸರ ವಂಶಜನಾದ ಮುಮ್ಮಡಿ ಕೃಷ್ಣರಾಜ ಎಂಬ 5 ವರ್ಷದ ಹುಡುಗನನ್ನು ಮೈಸೂರಿನ ಅರಸನನ್ನು ಮಾಡಿದನು. ಮತ್ತು ಹೈದರ ಟೀಪು ಇವರು ಹೊಸದಾಗಿ ಆ ರಾಜ್ಯಕ್ಕೆ ಸೇರಿಸಿಕೊಂಡ ಸೀಮೆಗಳನ್ನಷ್ಟೇ ಇಂಗ್ಲಿಷ ನಿಜಾಮರಲ್ಲಿ ಹಂಚಿದನು. ಮೈಸೂರಿನ ಒಡೆಯರು ಸಹಾಯಕ ಸೈನ್ಯ ಪದ್ಧತಿಗೆ ಒಪ್ಪಿ ಇಂಗ್ಲಿಷರ ಆಧೀನರಾದರು. ಟೀಪುವಿನ ಮಕ್ಕಳು ವರ್ಷಾಸನವನ್ನು ಪಡೆದು ವೆಲ್ಲೂರಲ್ಲಿ ಇರಿಸಲ್ಪಟ್ಟರು.

### ಟಿಪ್ಪುವಿನ ಹಿರಿಮೆ

‘ ಇಲಿಯಾಗಿ ನೂರು ವರ್ಷ ಬಾಳುವುದಕ್ಕಿಂತ ಹುಲಿಯಾಗಿ ಮೂರೇ ವರ್ಷ ಇರಬೇಕು ’ ಎಂಬುದು ಟೀಪುವಿನ ವೀರವಚನ. ಅವನು ಶೃಂಗೇರಿಯ ಜಗದ್ಗುರುಗಳನ್ನು ಗೌರವದಿಂದ ಕಂಡನು. ‘ ಭಾರತದಿಂದ ತೊಲಗಿರಿ ’ ಎಂದು ಬ್ರಿಟಿಶರಿಗೆ ಮೊದಲು ಹೇಳಿದ ಕಡುಗಲಿಯೇ ಕರ್ನಾಟಕದ ಈ ಹುಲಿ.

ಅಭ್ಯಸನಗಳು

1. ಇಂಗ್ಲಿಷರೊಡನೆ ಟಿಪ್ಪುವು ಎಕೆ ಯುದ್ಧ ಹೂಡಿದನು ?
2. ಟೀಪುವಿನ ವೀರವಚನವನ್ನು ದೊಡ್ಡ ಅಕ್ಷರಗಳಲ್ಲಿ ಬರೆದು ಶಾಲೆಯಲ್ಲಿ ತೂಗಹಾಕಿರಿ.
3. ಟಿಪ್ಪುವಿನ ತರುವಾಯ ಮೈಸೂರ ರಾಜ್ಯದ ವ್ಯವಸ್ಥೆ ಏನಾಯ್ತು ?

## 20. ಕಿತ್ತೂರ ಚೆನ್ನಮ್ಮರಾಣಿ

ಕಳೆದ ಶತಕದ ಪೂರ್ವಾರ್ಧದಲ್ಲಿ ಅಭಿಮಾನಶೀಲಳಾದ ಕನ್ನಡ ರಾಣಿಯೊಬ್ಬಳನ್ನು ಇಂಗ್ಲಿಷರು ಚುಚ್ಚಿ ನೋಯಿಸಿದರು. ಆಕೆಯೇ ಚೆನ್ನಮ್ಮರಾಣಿ. ಆಕೆ ಇಂಗ್ಲಿಷರನ್ನು ಎದುರಿಸಿ ಕೆಚ್ಚಿನಿಂದ ಕಾದಿದಳು.

## ಕಿತ್ತೂರ ದೇಸಗತಿಯ ದತ್ತಕ ಪ್ರಕರಣ



ಕಿತ್ತೂರ ಚೆನ್ನಮ್ಮರಾಣಿ

ಧಾರವಾಡ—ಬೆಳಗಾಂವಿ ದಾರಿಯ ತುಸು ಪಕ್ಕದಲ್ಲಿ 150 ವರುಷಗಳ ಹಿಂದೆ ಅದು ಒಂದು ದೇಸಗತಿಯ ರಾಜಧಾನಿಯಾಗಿತ್ತು. ಪೇಶ್ವೆಯರ ತರುವಾಯ ಕಿತ್ತೂರ ದೇಸಗತಿ ಇಂಗ್ಲಿಷರ ಅಧಿನವಾಯಿತು. ಆಗು ಕಿತ್ತೂರಿನ ಒಡೆಯರಾಗಿದ್ದ ಮಲ್ಲಸರ್ಜ ದೇಸಾಯರಿಗೆ ಅವರ ದೇಸಗತಿಯನ್ನು ನಡಿಸಿ ಕೊಡುವೆವೆಂದು ಇಂಗ್ಲಿಷರು ಒಪ್ಪಿಕೊಂಡಿದ್ದರು.

ಮಲ್ಲಸರ್ಜ ದೇಸಾಯಿಗೆ ಇಬ್ಬರು ಹೆಂಡರಿದ್ದರು, ರುದ್ರವ್ವ ಮತ್ತು ಚೆನ್ನಪ್ಪ ಎಂದು. ಚೆನ್ನವ್ವನಿಗೆ ರಾಜ್ಯಕಾರಭಾರದ ಜ್ಞಾನ ಚೆನ್ನಾಗಿತ್ತು. ಆಡಳಿತದಲ್ಲಿ ಅವಳು ಗಂಡನಿಗೆ ನೆರವಾಗುತ್ತಿದ್ದಳು. ಮಲ್ಲಸರ್ಜನು ತೀರಿದ ಬಳಿಕ ರುದ್ರವ್ವನ ಮಗ ಶಿವಲಿಂಗರುದ್ರ ಸರ್ಜನು ದೇಸಾಯಿಯಾದನು. ಅವನಿಗೆ ರಾಜ್ಯಕಾರಭಾರದಲ್ಲಿ ಚೆನ್ನಮ್ಮ ಮಾರ್ಗದರ್ಶಕಳಾದಳು. ಕನ್ನಡ ವಲ್ಲದೆ ಮರಾಠಿ ಹಿಂದಿ ಭಾಷೆಗಳನ್ನೂ ಅವಳು ಅರಿತಿದ್ದಳು. ಶಿವಲಿಂಗ ಸರ್ಜನೂ ಚೆನ್ನಮ್ಮನೂ ಪ್ರಜೆಗಳಿಗೆ, ಹೆಚ್ಚಾಗಿ ಬಡವರಿಗೆ ಪ್ರಿಯರಾಗಿದ್ದರು. ಈ ತರುಣ ರಾಜನಿಗೆ ಜಡ್ಡಾಗಿ ಕ್ಷಯಕ್ಕೆ ಹಾಕಿತು. ತಾನು ಇನ್ನು ಬದುಕುವದಿಲ್ಲವೆಂದು ತಿಳಿದು ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಂಡನು. ಸವಾಯಿ ಮಲ್ಲ ಸರ್ಜ ಎಂದು ಅವನಿಗೆ ಹೆಸರಿಟ್ಟರು.

### ಇಂಗ್ಲಿಷರೊಡನೆ ಚಕಮಕಿ

ಚೆನ್ನಮ್ಮನಿಗೆ ಆಗದವರು ಕೆಲವರು ಈ ದತ್ತಕವ ಬಗ್ಗೆ ಕುಹಕತನ ನಡೆಸಿದರು. 'ಶಿವಲಿಂಗರುದ್ರ ಸರ್ಜನು ಸತ್ತ ಮೇಲೆ ದತ್ತಕವಾಗಿದೆ' ಎಂದು ಅವರು ಇಂಗ್ಲಿಷರಿಗೆ ಚುಚ್ಚಿಕೊಟ್ಟರು. ದೇಸಗತಿಯ ಆಡಳಿತ ಸಾಗಿಸಲು ಧಾರವಾಡದ ಕಲೆಕ್ಟರನು ಇಬ್ಬರು ಅಧಿಕಾರಿಗಳನ್ನು ಕಿತ್ತೂರಿಗೆ

ಕಳಿಸಿದನು. ಅವರು ಬಂದು ಸಿಂಹಾಸನ, ಬೊಕ್ಕಸ, ಶಸ್ತ್ರಾಗಾರ ಮೊದಲಾದವುಗಳಿಗೆ ಬೀಗ ಹಾಕಿದರು.

ಶೂರ ಚೆನ್ನಮ್ಮನಿಗೆ ಇದರಿಂದ ಅಪಮಾನವೆನಿಸಿತು. ಹೇಳಿಕೇಳಿ ಮಾಡಿದ್ದರೆ ಆಕೆ ಇಂಗ್ಲಿಷರೊಡನೆ ಒಡಂಬಡಿಕೆಗೆ ಬರಬಹುದಾಗಿತ್ತು. ಹೀಗೆ ಒಮ್ಮೆಲೆ ಯಾರಿಗೆ ಯಾರೋ ತಮ್ಮ ಮನೆ ಹೊಕ್ಕು ಕಾರಭಾರ ಮಾಡಿದ್ದು ಆಕೆಗೆ ಸಹಿಸಲಿಲ್ಲ. ಅಷ್ಟೊತ್ತಿಗೆ ದತ್ತಕ ವಿಧಾನವು ಸಕಾಲದಲ್ಲಿ ಆಗಿಲ್ಲವಾದ್ದರಿಂದ ರದ್ದಾಗಿದೆ ಎಂಬ ನಿರ್ಣಯವೂ ಕೈಸೇರಿತು. ಚೆನಮ್ಮ ಸಿಟ್ಟುಬೆಂಕಿಯಾದಳು. ಇಂಗಿಷ್ಲರು ಜಡಿದಿದ್ದ ಕೀಲಿಗಳನ್ನೆಲ್ಲ ಒಡೆದು ಬಿಸುಟಿದಳು.

ಈ ಸುದ್ದಿಯನ್ನು ಕೇಳಿ ಥ್ಯಾಕರೆ ಕಲೆಕ್ಟರನು ಚಿಕ್ಕದಂಡಿನೊಡನೆ ಕಿತ್ತೂರಿಗೆ ದಾಳಿ ತಂದನು. ರಾಣಿ ಕೋಟೆಯ ಬಾಗಿಲು ಮುಚ್ಚಿ ಭದ್ರ ಮಾಡಿದಳು. ತೋಫು ಹಚ್ಚಿ ಕೋಟೆ ಒಡೆಯಲು ಥ್ಯಾಕರೆಯ ಅಪ್ಪಣೆಯಾಯಿತು. ಆಗ ಚೆನ್ನಮ್ಮನು ಕತ್ತಿ ಹಿರಿದು ತನ್ನ ಸೈನಿಕರೊಡನೆ ಇಂಗ್ಲಿಷರ ದಂಡಿನ ಮೇಲೆ ಬಿದ್ದಳು. ಕಾಳಗದಲ್ಲಿ ಥ್ಯಾಕರೆಸಾಹೇಬನು ಮಡಿದನು; ಇಂಗ್ಲಿಷರು ಸೋತರು; ಕೆಲವು ಇಂಗ್ಲಿಷರನ್ನು ಸೆರೆಹಿಡಿದಳು. ಚೆನ್ನಮ್ಮನ ಹೃದಯ ಬಲು ದಯಾಳು ಹೃದಯ. ಅವಳು ಸೆರೆಹಿಡಿದ ಇಂಗ್ಲಿಷರಲ್ಲಿ ಚಿಕ್ಕಮಕ್ಕಳಿದ್ದವು. ಅವರಿಗೆ ತಿಂಡಿ ತಿನಿಸುಕೊಟ್ಟು ಅವರ ತಾಯಿ ತಂದೆಗಳ ಕಡೆಗೆ ಕಳಿಸಿದಳು.

## ಕೊನೆಗೆ ಇಂಗ್ಲಿಷರ ಗೆಲವು

ಇಂಗ್ಲಿಷರ ಸೋಲಿನ ಸುದ್ದಿ ಎಲ್ಲ ಕಡೆಗೆ ಹಬ್ಬಿತು. ಬೆಳಗಾವಿಯಲ್ಲಿದ್ದ ದಕ್ಷಿಣದ ಅಧಿಕಾರಿ ಚಾಪಲಿನ್ನನು ತನ್ನ ದಂಡಿನೊಡನೆ ಸಾಗಿಬಂದನು. ಕಿತ್ತೂರಿಗೆ ಮುತ್ತಿಗೆ ಬಿತ್ತು. ಈ ಸಲ ಇಂಗ್ಲಿಷರ ಸೇನೆ ದೊಡ್ಡದಿತ್ತು; ಸುಸಜ್ಜಿತವಿತ್ತು. ಆದರೆ ಚೆನ್ನಮ್ಮ ಅಂಜುವಳೆ? ಮೊದಲಿನಂತೆಯೆ ಕುದುರೆಯನ್ನೇರಿ ತನ್ನ ಸೈನಿಕರೊಂದಿಗೆ ಚಾಪಲಿನ್ನನ ಮೇಲೆ ದಾಳಿ ಮಾಡಿದಳು. ಆದರೆ ಆಯತ್ತ ವೇಳೆಯಲ್ಲಿ ಕೆಲ ಮನೆಮುರುಕರ ಫಿತೂರಿ ನಡೆಯಿತು. ರಾಣಿ ಕೆಲವು ಸಂಗಡಿಗರೊಡನೇ ಅಲ್ಲಿಂದ ಪಾರಾದಳು. ಇಂಗ್ಲಿಷರಿಗೆ ಗೆಲುವಾಯಿತು (1824). ತುಸು ದಿನಗಳಲ್ಲಿಯೆ ಕಿತ್ತೂರ ಕೋಟೆ ಹಾಳಾಯಿತು; ಊರು ಕೊಂಪೆಯಾಯಿತು. ರಾಣಿ ಪಾರಾಗಿ ಹೋಗಿ ಮಲಪ್ರಭಾ ನದಿಯಲ್ಲಿ ಪ್ರಾಣಕೊಟ್ಟಳು ಎಂದು ಅಲ್ಲಿಯ ಜನರು ಹೇಳುತ್ತಾರೆ. ಸಂಗೊಳಿಯಲ್ಲಿ ಆಕೆಯ ಸಮಾಧಿಯಿದೆ.

### ಅಖಿಲ ಭಾರತಕ್ಕೆ ಅಭಿಮಾನದ ಮಾತು

ಕಿತ್ತೂರು ಚೆನ್ನಮ್ಮನೆಂದರೆ ಕನ್ನಡ ನಾಡಿನ ಜನತೆಗೆ ತುಂಬ ಆದರ ವಿದೆ. ಚೆನ್ನಮ್ಮನ ಶೌರ್ಯವನ್ನು ವರ್ಣಿಸುವ ಎಷ್ಟೋ ಲಾವಣಿಗಳೂ ನಾಟಕ ಕವಿತೆಗಳೂ ಕನ್ನಡದಲ್ಲಿವೆ. ಅವಳ ಧೈರ್ಯ, ಆವಳ ಕರ್ತೃತ್ವಶಕ್ತಿ ಅಖಿಲ ಭಾರತಕ್ಕೇ ಅಭಿಮಾನದ ಮಾತು. 1857 ನೆಯ ಇಸವಿಯ ಪ್ರಸಿದ್ಧ ಸ್ವಾತಂತ್ರ್ಯ ಯುದ್ಧದ ಮೊದಲನೆಯ ಕಿಡಿ ಹಾರಿದ್ದು ಕಿತ್ತೂರಲ್ಲಿಯೇ ಎನ್ನಬೇಕು.

ಅಭ್ಯಸನಗಳು

1. ಚೆನ್ನಮ್ಮನು ತನ್ನ ಜನರಿಗೆ ಕೊಟ್ಟ ಸಂದೇಶವಾವುದು? ಆ ಬಗ್ಗೆ ಚಿಕ್ಕ ಭಾಷಣವನ್ನು ಮಾಡಿ ತೋರಿಸಿರಿ.
2. ಚೆನ್ನಮ್ಮನ ದಯಾಳು ಹೃದಯದ ಬಗ್ಗೆ ಒಂದು ಉದಾಹರಣೆ ಹೇಳಿರಿ.
3. ಚೆನ್ನಮ್ಮನ ಬಗ್ಗೆ ಹೇಳುವ ಪದ್ಯದಲ್ಲಿಯ ಕೆಳಗಿನ ಸಾಲುಗಳನ್ನು ಪಾಠಮಾಡಿರಿ.

   ' ಚಂಡಿಯೊ ಚೌಡಿಯೋ ಮಾರಿಯೊ ಮಸಣಿಯೊ ಖಂಡಿತ ಮಾನಿನಿ ಇವಳಲ್ಲಾ
   ಗಂಡುಗಲಿಗಳ ಮೀರಿ ರುಂಡವ ತರಿವಳು ಮಹಾಮಾಯಿಯಲ್ಲದೆ ಬ್ಯಾರಲ್ಲಾ '

## 21. ಝಾಂಸಿಯ ರಾಣಿ ಲಕ್ಷ್ಮೀಬಾಯಿ

ಈಗ್ಗೆ ನೂರು ವರುಷಗಳ ಹಿಂದೆ ಇಂಗ್ಲಿಷರಿಗೆ ಎದುರಾಗಿ ಕೆಲವು ಸ್ವಾಭಿಮಾನಿಗಳು ದೊಡ್ಡ ಹೋರಾಟ ಹೂಡಿದ್ದರು. ಅವರೊಳಗೆ ಝಾಂಸಿಯ ರಾಣಿ ಲಕ್ಷ್ಮಿಬಾಯಿ ಮಹತ್ವದ ವ್ಯಕ್ತಿ.

ಕೊನೆಯ ಪೇಶವೆ ಬ್ರಹ್ಮಾವರ್ತ (ಕಾನಪುರದ ಹತ್ತಿರ) ದಲ್ಲಿದ್ದಾಗ ಮೋರೋಪಂತ ತಾಂಬೆ ಆತನ ಕಾರಭಾರಿಯಾಗಿದ್ದರು. ಝಾಂಸಿ ಲಕ್ಷ್ಮೀಬಾಯಿ ಆ ತಾಂಬೆಯ ಮಗಳು. ಅವಳ ತವರುಮನೆಯ ಹೆಸರು ಮನೂ ಎಂದಿತ್ತು. ಮನೂ ಮತ್ತು ಪೇಶವೆಯ ದತ್ತಕ ಮಗ ನಾನಾ ಸಾಹೇಬ ಕೂಡಿ ಆಡುತ್ತಿದ್ದರು. ಆ ಜೊತೆಗಾರನೊಡನೆ ಆಕೆಯೂ



ಝಾಂಸಿಯ ರಾಣಿ ಲಕ್ಷ್ಮೀಬಾಯಿ

ಕುದುರೆ ಹತ್ತುವದು, ದಾಂಡಪಟ್ಟೆ ಆಡುವದು. ಕತ್ತಿ ತಿರುಹುವದು ಮೊದಲಾದವನ್ನು ಕಲಿತಳು.

ಝಾಂಸಿ ಮರಾಠಾರ ಒಂದು ಸಂಸ್ಥಾನವಾಗಿತ್ತು. ಅದರ ಒಡೆಯನಾದ ನೇವಾಳಕರ ಗಂಗಾಧರರಾಯನೊಡನೆ ಮನೂಳ ಮದುವೆಯಾಯಿತು.

## ದತ್ತಕವನ್ನು ಇಂಗ್ಲಿಷರು ಒಪ್ಪಲಿಲ್ಲ

ಗಂಗಾಧರರಾಯನು ಇಂಗ್ಲಿಷರ ಗೆಳೆಯನಾಗಿದ್ದನು. ಅವರ ಆಶ್ರಯದಲ್ಲಿಯೇ ಅವನು ರಾಜ್ಯವಾಳುತ್ತಿದ್ದನು. ಅವನ ಆಳಿಕೆಯಲ್ಲಿ ಸಂಸ್ಥಾನದಲ್ಲಿ ಶಾಂತತೆ ಇತ್ತು; ಒಕ್ಕಲಿಗರು ಸುಖವಾಗಿದ್ದರು. ಆದರೆ ಆತನು ಬೇಗನೆ ತೀರಿಕೊಂಡನು; ಹತ್ತೊಂಬತ್ತು ವರುಷದವಳಿರುವಾಗಲೇ ಲಕ್ಷ್ಮೀಬಾಯಿ ವಿಧವೆಯಾದಳು! ಸಾಯುವ ಮೊದಲು ಗಂಗಾಧರರಾಯನು ತನ್ನ ಮನೆತನದ ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಂಡಿದ್ದನು. ದಾಮೋದರ ಎಂದು ಅವನಿಗೆ ಹೆಸರಿಟ್ಟಿತ್ತು. ಗವರ್ನರ ಜನರಲ್ಲನು ಈ ದತ್ತಕವನ್ನು ಒಪ್ಪಲಿಲ್ಲ; 'ಇಂಗ್ಲಿಷರು ಕೊಟ್ಟ ಮಾತು ಮುರಿದರೆ'ಂದು ಲಕ್ಷ್ಮೀಬಾಯಿ ಸಿಟ್ಟಾದಳು. "ನನ್ನ ಝಾಂಸಿಯನ್ನು ನಾನು ಬಿಡುವದಿಲ್ಲ" ಎಂದು ಹೇಳಿದಳು. ಇಷ್ಟರಲ್ಲಿ 1857 ನೆಯ ಇಸವಿ ಬಂದಿತು. 9-10 ತಿಂಗಳು ರಾಣಿ ಆಡಳಿತ ನಡೆಸಿದಳು. ಗಂಡಸಿನ ವೇಷದಲ್ಲಿಯೂ ದರಬಾರಕ್ಕೆ ಹೋಗುತ್ತಿದ್ದಳು.

## ಕಾಳಗದ ಕಹಳೆ ಊದಿತು

ಇಂಗ್ಲಿಷರ ಪರವಾಗಿಯೇ ತಾನು ಆಳುತ್ತಿದ್ದೇನೆ ಎಂದು ಲಕ್ಷ್ಮೀಬಾಯಿ ಇಂಗ್ಲಿಷರಿಗೆ ಕಾಗದ ಬರೆದಳು. ಅದು ಅವರಿಗೆ ಮುಟ್ಟಲಿಲ್ಲ. ರಾಣಿ ಸ್ವತಂತ್ರ ಕಾರಭಾರ ನಡೆಸಿದ್ದಾಳೆಂದು ತಿಳಿದು ಸರ್ ಹ್ಯೂರೋಜ ಎಂಬ ಇಂಗ್ಲಿಷ ಸೇನಾಪತಿ ಝಾಂಸಿಯ ಮೇಲೆ ಏರಿ ಬಂದನು. ತಾನು ಇಷ್ಟು ನಿಷ್ಠೆಯಿಂದ ನಡೆದುಕೊಂಡರೂ ಇವರು ಹೀಗೆ ಮಾಡಬೇಕೆ? ಎಂದು ಲಕ್ಷ್ಮೀಬಾಯಿಯ ಸ್ವಾಭಿಮಾನ ಕೆರಳಿತು. ಯುದ್ಧ ಹೂಡಬೇಕೆಂದು ಆಕೆ ನಿಶ್ಚಯಿಸಿದಳು. ಇಂಗ್ಲಿಷರ ಕಡೆ ಶಿಕ್ಷಣ ಪಡೆದ ಸೈನ್ಯವಿತ್ತು; ಆಯುಧಗಳಿದ್ದವು; ದುರ್ಬೀನುಗಳಿದ್ದವು; ತೋಫುಗಳಿದ್ದವು; ಎಲ್ಲಾ ಇದ್ದವು. ರಾಣಿಯಲ್ಲಿ ಇದ್ದದ್ದು ಚಿಕ್ಕ ಸೈನ್ಯ, ಅವಳ ಸ್ವಾಭಿಮಾನ ಇಷ್ಟೆ. ಇಷ್ಟರಿಂದಲೇ ಆಕೆ ಹದಿನೈದು ದಿನ ಕಾದಾಡಿದಳು. ಆ ಮೇಲೆ

ಕಾಳಗವನ್ನು ಮುಂದುವರಿಸುವದು ಸಾಧ್ಯವಿಲ್ಲವೆಂದು ತೋರಿತು. ಆದರೂ ಲಕ್ಷ್ಮೀಬಾಯಿ ವೈರಿಗೆ ಶರಣೆನ್ನಲಿಲ್ಲ. ಅಲ್ಲಿಂದ ತಳ ಕಿತ್ತಿದಳು. ಗಂಡುಡಿಗೆ ಉಟ್ಟುಕೊಂಡಳು; ದತ್ತಕ ಮಗನನ್ನು ಬೆನ್ನಿಗೆ ಕಟ್ಟಿಕೊಂಡಳು; ರಾತ್ರಿಯ ಹೊತ್ತಿನಲ್ಲಿ ಕುದುರೆಯನ್ನೇರಿ ಹೊರಟಳು. ಇಂಗ್ಲಿಷರ ಮುತ್ತಿಗೆಯನ್ನು ಭೇದಿಸಿಕೊಂಡು ಅವಳ ಕುದುರೆ ಕಾಲ್ಪಿಯ ದಾರಿ ಹಿಡಿದು ಓಡಿತು. ಅವಳ ಜೊತೆಯಲ್ಲಿ ಮುನ್ನೂರರಷ್ಟು ಸೈನಿಕರಿದ್ದರು. ಅನ್ನ ನೀರಿನ ಪರಿವೆಯಿಲ್ಲದೆ ಕುದುರೆಯನ್ನು ಓಡಿಸಿದ್ದೇ ಓಡಿಸಿದ್ದು. ಇಪ್ಪತ್ತು ನಾಲ್ಕುಗಂಟೆಗಳಲ್ಲಿ ಒಂದುನೂರು ಎರಡು ಮೈಲು ಸಾಗಿ ಲಕ್ಷ್ಮೀಬಾಯಿ ಕಾಲ್ಪಿಯನ್ನು ತಲುಪಿದಳು. ಇಂಗ್ಲಿಷರಿಗೆ ಎದುರುಬಿದ್ದ ಪೇಶವೆಯ ದಂಡು ಅಲ್ಲಿತ್ತು. ಝಾಂಸಿಯ ರಾಣಿ ಅದನ್ನು ಕೂಡಿಕೊಂಡಳು.

## ವೀರರಾಣಿಯ ವೀರ ಮರಣ

ಲಕ್ಷ್ಮೀಬಾಯಿಯ ನೆರವಿನಿಂದ ಪೇಶವೆಯ ದಂಡಿಗೆ ಹುರುಪು ಬಂತು. ಗ್ವಾಲ್ಹೇರಕ್ಕೆ ದಾಳಿಯಿಟ್ಟು ಅದನ್ನು ಹಿಡಿಯಲಾಯಿತು. ಇಂಗ್ಲಿಷ ಸೇನೆ ಬಂದು ಗ್ವಾಲ್ಹೇರವನ್ನು ಮುತ್ತಿತು. ಪೂರ್ವದ ಕಡೆ ಲಕ್ಷ್ಮೀಬಾಯಿ ಕಾದುತ್ತಿದ್ದಳು. ಅಲ್ಲಿ ಸೋಲಾಗತೊಡಗಿತು. ಆದುದರಿಂದ, ತಮ್ಮ ಮುಖ್ಯ ಸೇನೆಯ ಕಡೆಗೆ ತೆರಳಿದರು. ಇಂಗ್ಲಿಷರ ವ್ಯೂಹವನ್ನು ಭೇದಿಸುತ್ತ ಬೆನ್ನಟ್ಟಿದವರನ್ನು ತುಂಡರಿಸುತ್ತ ಹೊರಟಳು. ಆಗ ಹಿಂದಿನಿಂದ ಒಬ್ಬ ಇಂಗ್ಲಿಷ ಸೈನಿಕನು ಅವಳ ತಲೆಗೆ ಹೊಡೆದನು. ‘ ನನ್ನ ಹೆಣವನ್ನು ಇಂಗ್ಲಿಷರಿಗೆ ಕೊಡಬೇಡಿರಿ. ’ ಎನ್ನುತ್ತ ರಾಣಿ ಉರುಳಿದಳು. ಅವಳ ಮೈಗಾವಲಿನವರು ಅವಳನ್ನು ಒಂದು ಗುಡಿಸಿಲಿಗೆ ಒಯ್ದರು. ಹತ್ತಿರದಲ್ಲಿದ್ದ ಹುಲ್ಲು ಬಣವೆಯಿಂದ ಚಿತೆಯನ್ನು ರಚಿಸಿ ಕೊನೆಯ ಸಂಸ್ಕಾರವನ್ನು ನೆರವೇರಿಸಿದರು.

## ರಾಣಿಯ ಘನತೆ

ಮರಣಸಮಯದಲ್ಲಿ ಲಕ್ಷ್ಮೀಬಾಯಿಗೆ ಇಪ್ಪತ್ತುಮೂರು ವರುಷ ಮಾತ್ರ. ಹಗೆಗೆ ಶರಣಾಗದೆ ಕೊನೆಯ ವರೆಗೆ ಹೋರಾಡಿದಳು. ಇದರಿಂದ ಆಕೆಯ ಹೆಸರು ಚಿರಕಾಲ ಉಳಿಯಿತು; ದೇಶದ ಕೀರ್ತಿ ಹೆಚ್ಚಿತು. ಆಕೆಯ ಕಥೆ ಭಾರತೀಯರಿಗೆ ಯಾವಾಗಲೂ ಹುರುಪುಗೊಡುತ್ತಿರುವದು.

ಸುಡುವುದರಾಗ್ನಿಯುಮೊಡಲಂ
ಮಿಡುಕುವಿನಂ ಕಡಿವ ಕಟ್ಟೆಱಂಪೆಗಳುಮದಾ[೧]-।
[೨]ವೆಡೆಯನುರಿಸುವುದೊ[೨] ನರಕದ
ಕಡುದುಃಖದೊಳಗಿದು ಸುಗಿದು ನಮೆದೆನಗೀಗಳ್ ॥೧೩॥

ವ॥ ಎಂದು [೩]ಧೈರ್ಯ್ಯಮನೆ[೩] ಮನದೊಳವಲಂಬಿಸಿ ಸಮಾಧಿವಡೆದೀಶಾನಕಲ್ಪದೊಳ್ ದಿವಾಕರಪ್ರಭಮೆಂಬ ವಿಮಾನದೊಳ್ ದಿವಾಕರಪ್ರಭನೆಂ[೪]ಬೊಂ ದೇವನಾದನಾಪ್ರೀತಿವರ್ದ್ಧನನುಮಾಭಟ್ಟಾರಕರ್ ದಯೆಗೆಯ್ದು ದೀಕ್ಷೆಯೆಂಬ ಕಲ್ಪಲತೆಯ ಫಲದಿನಮೃತಪದವಿಯಂ ಪಡೆದನಾತನ ಸೇನಾನಾಯಕಮಂತ್ರಿಪುಂಗವಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿನೊಳಾರ್ಯ್ಯರಾಗಿ ಜೀವಿತಾಂತ್ಯದೊಳೀಶಾನಕಲ್ಪದೊಳ್ ಸೇನಾನಾಯಕನಪ್ಪಾರ್ಯ್ಯಂ ಪ್ರಭಾಕರವಿಮಾನದೊಳ್ ಪ್ರಭಾಕರನೆಂಬೊಂ ದೇವನಾದೊಂ; ಮಂತ್ರಿಯಪ್ಪಾರ್ಯ್ಯಂ ಕಾಂಚನವಿಮಾನದೊಳ್[೫] ಕನಕಪ್ರಭನೆಂಬೊಂ ದೇವನಾದೊಂ[೫]; ಪುರೋಹಿತನಪ್ಪಾರ್ಯ್ಯಂ [೬]ರುಷಿತಾಖ್ಯ[೬]ವಿಮಾನದೊಳ್ ಪ್ರಭಂಜನನೆಂಬೊಂ ದೇವನಾದೊಂ; ಮುನ್ನ ಪೇೞ್ದ ಶಾರ್ದ್ದೂಲಚ[೭]ರನಪ್ಪ ದೇವಂ[೭] ಬೆರಸಂತು ನಾಲ್ವರ್ ದೇವರ್ ಲಲಿತಾಂಗದೇವನಾದಂದು ನಿನಗೆ ಪರಿವಾರದೇವರಾದರಾಲಲಿತಾಂಗದೇವನೈ ನೀನಿಲ್ಲಿ ಬಂದು ವಜ್ರಜಂಘನಾದೈ; ನಿನ್ನ ದೇವಿಯಪ್ಪಾಸ್ವಯಂಪ್ರಭೆಯುಮೀಗಳ್ [೮]ಶ್ರೀಮತಿಯಾದಳ್[೮]; ಶಾರ್ದ್ದೂಲಚರನಪ್ಪ ದಿವಾಕರಪ್ರಭದೇವಂ ಬಂದು ಮತಿಸಾಗರನೆಂಬಂಗಮಾತನಭಾರ್ಯ್ಯೆ ಶ್ರೀಮತಿಗಂ ತನೂಜನಾಗಿ ನಿನಗೆ ಮಂತ್ರಿ ಮತಿವರನಾದಂ; ಪ್ರಭಾಕರಾಮರಂ ಬಂದಪರಾಜಿತಂಗಮಾರ್ಜ್ಜವೆಗಂ ನಂದನನಾಗಿ ಸೇನಾನಾಯಕನಕಂಪನಾದಂ; ಕನಕಪ್ರಭದೇವಂ ಬಂದು ಶ್ರುತಕೀರ್ತ್ತಿಗಮನಂತಮತಿಗಂ ತನಯನಾಗಿ ಪುರೋಹಿತನಾನಂದನಾದಂ; ಪ್ರಭಂಜನಕಲ್ಪಜಂ ಧನದತ್ತಂಗಂ ಧನದತ್ತೆಗಂ ಪುತ್ರನಾಗಿ ನಿಜಶ್ರೇಷ್ಠಿ ಧನಮಿತ್ರನಾದಂ; ಅದು ಕಾರಣದಿಂ[೯]ದಿವರೊಳಪ್ಪ ಸ್ನೇಹಂ ಪಿರಿದಾದುದೀ[೯]ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವ-

೧-೧ (ಅ) ವಾ. ೨-೨ (ಅ) ವೆಡೆಯನುಱಿಸುವವೊ; (ಬ) ವೆಡೆಯನರಿಪುಉದೊ. ೩-೩ (ಅ,ಬ) ಧೈರ್ಯ್ಯಮಂ. ೪ (ಚ) ಬ. ೫-೫ (ಬ) ಕನಕಪ್ರಭನೆಂಬೊನಮರನಾದಂ; (ಚ) ಕನಕಪ್ರಭನೆಂಬ ದೇವನಾದಂ. ೬-೬ (ಅ) ಪ್ರಭಂಜನಾಖ್ಯ; (ಚ) ತುಷಿತಾಖ್ಯ; (ಪ್ರೊ. ಪು) ರುಷಿತಾಖ್ಯ-೮-೨೧೩. ೭-೭ (ಅ) ಶಾರ್ದೂಲಚರದಿವಾಕರಪ್ರಭದೇವಂ. ೮-೮ (ಅ) ಶ್ರೀಮತಿಯುಮಾಗಿ ಪುಟ್ಟಿದಳ್. ೯-೯ (ಅ,ಬ) ದಿವರೊಳತಿಪ್ರೀತಿಯಾದುದೀ.

ಉದುರಿತು. ತಾತ್ಯಾ ಟೋಪಿಯು ತನ್ನ ಅಜೇಯ ಸೈನ್ಯದೊಂದಿಗೆ ಹೊರಟು ಕಾನಪುರ, ಇಂದೂರ, ಲಖನೌ, ಗ್ವಾಲೀರಗಳ ಮೇಲೆ ದಾಳಿ ಇಟ್ಟು ಬ್ರಿಟಿಶ ಸೈನ್ಯವನ್ನು ಮೂಲೋತ್ಪಾಟನ ಮಾಡಿದನು. ಅವನು ಅರಾವಳಿ ಬೆಟ್ಟಗಳಲ್ಲಿ ಬ್ರಿಟಿಶ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ವಿಂಧ್ಯಾದ್ರಿಯಲ್ಲಿ ಅವರನ್ನು ಸೋಲಿಸಿ ನಡೆಬಡೆದನು. ಮಧ್ಯಭಾರತದ ಗಿರಿಕಂದರಗಳಲ್ಲಿ ಅವರನ್ನು ಸಿಕ್ಕಿಸಿಕೊಂಡು ಹಣ್ಣುಮಾಡಿ, ಮಣ್ಣು ಮುಕ್ಕಿಸಿದನು ಅವನನ್ನು ಹಿಡಿಯಲು ಬಂದ ಬ್ರಿಟಿಶ ಸೈನ್ಯಕ್ಕೆ ಅವನು ದಿಕ್ಕು ತಪ್ಪಿಸಿ ಅವರ ಕೈಯಿಂದ ತಪ್ಪಿಸಿಕೊಳ್ಳುತ್ತಿದ್ದನು. ದೇಶದಲ್ಲಿ ಮೂಲೆಯಿಂದ ಮೂಲೆಗೆ ಊರಿಂದ ಊರಿಗೆ ಅವನನ್ನು ಬೆನ್ನಟ್ಟಿ ಹೋದ ಬ್ರಿಟೀಶರು ಒಮ್ಮೆಯಾದರೂ ಅವನನ್ನು ಸೋಲಿಸಲು ಸಾಧ್ಯವಾಗಲಿಲ್ಲ.

ಕರ್ನಲ್ ಮಾಲಸನ್ನನು ತನ್ನ ದಂಗೆಯ ಚರಿತ್ರೆಯಲ್ಲಿ ತಾತ್ಯಾ ಟೋಪಿಯ ಬಗ್ಗೆ ಹೀಗೆ ಬರೆದಿದ್ದಾನೆ. " ತಾತ್ಯಾ ಟೋಪಿಯು ಅದ್ವಿತೀಯ ಕೊಟಯುದ್ಧ ಯೋಧನಾಗಿದ್ದನು. ಅವನನ್ನು ಹಿಡಿಯುವ ಸಲುವಾಗಿ ಬ್ರಿಗೇಡಿಯರ ಪಾರ್ಕನು 9 ದಿನಗಳಲ್ಲಿ 209 ಮೈಲುಗಳಷ್ಟು ಪ್ರಯಾಣ ಮಾಡಬೇಕಾಯಿತು. ಬ್ರಿಗೇಡಿಯರ ಸಾಮರ ಸೆಟ್ಟನು 230 ಮೈಲುಗಳಷ್ಟು 9 ದಿನಗಳಲ್ಲಿ ಕ್ರಮಿಸಬೇಕಾಯಿತು. ಕರ್ನಲ ಹೋಮನು ಮರುಭೂಮಿಯಲ್ಲಿ ಎರಡು ದಿನಗಳ ಅವಧಿಯಲ್ಲಿ 54 ಮೈಲುಗಳು ಸಾಗಬೇಕಾಯಿತು. ಬ್ರಿಗೇಡಿಯರ ಹೊನ್ನನನು ನಾಲ್ಕು ದಿನಗಳಲ್ಲಿ 144 ಮೈಲು ಅಟ್ಟಿಸಿಕೊಂಡು ಹೋಗಬೇಕಾಯಿತು. ಆದರೇನು ತಾತ್ಯಾ ಮಾತ್ರ ಅವರ ಕೈಗೆ ಸಿಕ್ಕಲಿಲ್ಲ. ಇನ್ನೇನು ಸಿಕ್ಕುವದರಲ್ಲಿ ಇದ್ದವನು ಹೇಗೋ ಅವರಿಂದ ತಪ್ಪಿಸಿಕೊಂಡು ಕಣ್ಮರೆಯಾಗುತ್ತಿದ್ದನು. ಅವನನ್ನು ಶತ್ರುಗಳ ಶಕ್ತಿಯಿಂದ ಹಿಡಿಯಲಾಗದೆ ಯುಕ್ತಿಯಿಂದ ಹಿಡಿಯಬೇಕಾಯಿತು. ಅವನು ತನ್ನ ನಂಬಿಕೆಯ ಮಿತ್ರನು ಮಾಡಿದ ದ್ರೋಹದಿಂದ ಶತ್ರುಗಳ ಕೈಗೆ ಸಿಕ್ಕಿಬಿದ್ದನು. "

**ಕೂಟಯೋಧ**

1857ರ ಸ್ವಾತಂತ್ರ ಸಮರದಲ್ಲಿ ಭಾಗವಹಿಸಿದ ನಾಯಕರಲ್ಲಿ ತಾತ್ಯಾ ಟೋಪಿಯು ಒಬ್ಬ ಅಸಾಧಾರಣ ವ್ಯಕ್ತಿಯೆಂಬ ಕಾರಣದಿಂದ ಅವನಿಗೆ ಇಷ್ಟು ಸನ್ಮಾನ ದೊರೆತಿಲ್ಲ. ಸಿಪಾಯಿ ದಂಗೆಯು ವಿಫಲವಾದ

ಮೇಲೂ ಅದನ್ನು ಅಡಗಿಸಲು ಬ್ರಿಟಿಶರು ಸಮರ್ಥರಾದ ಮೇಲೂ ತಾತ್ಯಾ ಟೋಪಿಯು ತನ್ನ ಹೋರಾಟವನ್ನು ನಿಲ್ಲಿಸಲಿಲ್ಲ. ಪ್ರತಿಭಟನೆಯನ್ನು ಕೊನೆಗಾಣಿಸಲಿಲ್ಲ. ಅವನ ಸೈನ್ಯಕ್ಕೆ ಸುಸಜ್ಜಿತ ಶಸ್ತ್ರಾಸ್ತ್ರಗಳು ಇರಲಿಲ್ಲ. ಅವನ ಬಳಿ ಕೊಡಲು ಏನೂ ಇರಲಿಲ್ಲ. ಆಹಾರವಿರಲಿಲ್ಲ. ಬಟ್ಟೆಗಳಿರಲಿಲ್ಲ, ಆದರೂ ಅವನನ್ನು ನೆಚ್ಚಿ ಹಿಂಬಾಲಿಸಿದ ಸೈನಿಕರು ಅವನೊಡನೆ ಕಡೆತನಕ ಇದ್ದರು. ಅವನು ತನ್ನ ಸೈನ್ಯಕ್ಕೆ ಬೇಕಾದ ಆಯುಧಗಳನ್ನು ಶತ್ರುಗಳಿಂದ ವಶಪಡಿಸಿಕೊಳ್ಳಬೇಕಾಗಿತ್ತು. ಜನತೆ ಅವನಿಗೆ ಬೆಂಬಲವಾಗಿದ್ದುದರಿಂದ ತಾತ್ಯಾಟೋಪಿಯು ತನ್ನೆಲ್ಲ ಕಷ್ಟನಷ್ಟಗಳನ್ನು ಧೈರ್ಯದಿಂದ ಎದುರಿಸಿದನು. ಅವನು ಪರಿಸ್ಥಿತಿಗೆ ಮಣಿಯಲಿಲ್ಲ. ಬ್ರಿಟಿಶರಿಗೆ ಶರಣು ಬರಲಿಲ್ಲ.

### ಮಿತ್ರದ್ರೋಹ

ಎಪ್ರಿಲ್ 7 ನೇ ದಿನಾಂಕ ತನ್ನ ಮಿತ್ರನಾದ ಮಾನಸಿಂಗನ ದ್ರೋಹವನ್ನರಿಯದೆ ತಾತ್ಯಾ ಟೋಪಿಯು ಮಲಗಿದ್ದಾಗ, ಮಧ್ಯರಾತ್ರಿಯಲ್ಲಿ ಬ್ರಿಟಿಶ ಸೈನಿಕರು ಬಂದು ಅವನ್ನು ಹಠಾತ್ತಾಗಿ ಮುತ್ತಿದರು. ತಾತ್ಯಾ ಟೋಪಿಯು ದ್ರೋಹಿಗಳ ಸಂಚಿನಿಂದಾಗಿ ಬ್ರಿಟಿಶರಿಗೆ ಸೆರೆಸಿಕ್ಕಿದನು; ಅವನನ್ನು ರಾಜದ್ರೋಹಿಯೆಂದು ಗಲ್ಲಿಗೇರಿಸಿದರು. ಆದರೆ ಭಾರತೀಯರ ಪಾಲಿಗೆ ಅವನು ಒಬ್ಬ ರಾಷ್ಟ್ರಪುರುಷನಾಗಿ ಮಾರ್ಪಟ್ಟಿರುವನು.

ಅಭ್ಯಸನಗಳು

1. ತರುಣ ತಾತ್ಯಾಟೋಪಿಯನ್ನು ಇಂಗ್ಲಿಷರ ಯಾವ ಅನ್ಯಾಯವು ಕೆರಳಿಸಿತು ?
2. ತಾತ್ಯಾನನ್ನು ಸೆರೆಹಿಡಿಯಲು ಬ್ರಿಟಿಷರು ಪಟ್ಟ ಕಷ್ಟಗಳ ಕಥೆ ಹೇಳಿರಿ.
3. ಯಾರ ದ್ರೋಹದ ಮೂಲಕ ತಾತ್ಯಾ ಇಂಗ್ಲಿಷರ ಕೈಗೆ ಸಿಕ್ಕನು ?

## 23. ರಾಮಕೃಷ್ಣ ಪರಮಹಂಸರು

ಬಂಗಾಲದಲ್ಲಿ ಕಾಮರಪುಕರ ಎಂಬ ಒಂದು ಹಳ್ಳಿಯಿದೆ. ಅಲ್ಲಿ ಕ್ಷುದಿರಾಮ ಮತ್ತು ಚಂದಾದೇವಿ ಎಂಬ ದಂಪತಿಗಳಿದ್ದರು. ಅವರಿಗೆ ಇಬ್ಬರು ಗಂಡು ಮಕ್ಕಳಾದರು. ಮೊದಲನೆಯವನಿಗೆ ರಾಮಕುಮಾರ ಎಂದೂ ಎರಡನೆಯವನಿಗೆ ಗದಾಧರ ಎಂದೂ ಹೆಸರಿಟ್ಟರು (ಕ್ರಿ. ಶ. 1836). ಮುಂದೆ 'ರಾಮಕೃಷ್ಣ ಪರಮಹಂಸ' ಎಂದು ಹೆಸರಾದವನು ಈ ಗದಾಧರನೇ.

## ನಾಟಕದಲ್ಲಿ ಶಿವದರ್ಶನ

ಬಾಲಗದಾಧರನ ಬುದ್ಧಿ ಬಲು ಚುರುಕು. ಏನು ಹೇಳಿದ್ದನ್ನು ಕೂಡಲೇ ಬಾಯಿಪಾಠ ಮಾಡುತ್ತಿದನು. ಸ್ವಲ್ಪ ಉಡಾಳತನವೂ ಅವನಲ್ಲಿತ್ತು. ಊರ ಧರ್ಮಶಾಲೆಯಲ್ಲಿ ಸಾಧು ಬೈರಾಗಿಗಳು ಇಳಿಯುತ್ತಿದ್ದರು. ಗದಾಧರನು ಅವರ ಸೇವೆ ಮಾಡುತ್ತಿದ್ದನು, ಅವರಿಗೆ ಕಟ್ಟಿಗೆ ತಂದು ಕೊಡುತ್ತಿದ್ದನು. ಅವರು ಇವನಿಗೆ ಹಾಡು-ಭಜನೆ ಕಲಿಸುತ್ತಿದ್ದರು ಇವನ ಕಂಠವೂ ಒಳ್ಳೇ ಮಧುರವಿತ್ತು. ಗಾಯನದಲ್ಲಿ ಮೈಮರೆತು ಆ ಪದ್ಯಗಳನ್ನು ಹಾಡುತ್ತಿದ್ದನು. ಬೈರಾಗಿಯಾಗಿಯೂ ಆಟವಾಡ ತ್ತಿದ್ದನು. ಒಮ್ಮೆ ಊರ ಜನರು ಒಂದು ನಾಟಕಮಾಡಿದರು ಅದರಲ್ಲಿ ಗದಾಧರನು ಶಂಕರನಾಗಿದ್ದನು. ಅವನು ಅದರಲ್ಲಿಯೇ ತನ್ಮಯನಾಗಿ ಮೈಮರೆತನು. ನಾಟಕ ನಿಂತಿತು. ಕೆಲ ಹೊತ್ತಿನ ಮೇಲೆ ಅವನಿಗೆ ಎಚ್ಚರವಾಗಿ 'ನನಗೆ ಶಿವನ ದರ್ಶನವಾಯಿತು' ಎಂದು ಹೇಳಿದನು. ಓದುಬರಹದಲ್ಲಿ ಅವನ ಲಕ್ಷ್ಯವೇ ಇರುತ್ತಿರಲಿಲ್ಲ.



ರಾಮಕೃಷ್ಣ ಪರಮಹಂಸರು

## ದೇವಿಯು ಪ್ರಸನ್ನಳಾದಳು

ಕಲಕತ್ತೆಯ ಬಳಿ ದೇವಿ ರಾಸಮಣಿ ಎಂಬ ಶ್ರೀಮಂತಳು ದಕ್ಷಿಣೇಶ್ವರ ಗುಡಿಯನ್ನು ಕಟ್ಟಿಸಿದಳು. ಅಲ್ಲಿಯ ಕಾಲೀ ದೇವತೆಯ ಪೂಜಾರಿಗಳೆಂದು ರಾಮಕುಮಾರ ಮತ್ತು ಗದಾಧರ ಈ ಅಣ್ಣತಮ್ಮಂದಿರು ಹೋದರು. ಅಪಾರ ಬಡತನದ ಚಿಂತೆ ದೂರಾಯಿತು. ಪೂಜೆಮಾಡುವವನು ಗದಾಧರನೇ. ಅಲ್ಲಿಯೇ ಅವನು ಭಕ್ತಿಭಾವದಿಂದ ದೇವಿಯ ಆರಾಧನೆ ಮಾಡಿದನು. ರಾಸಮಣಿಗೆ ಮತ್ತು ಆಕೆಯ ಅಳಿಯನಿಗೆ ಇವನ ವಿಷಯದಲ್ಲಿ ಭಕ್ತಿ ಉಂಟಾಯಿತು. ಗದಾಧರನಿಗೆ ದೇವಿ ಪ್ರಸನ್ನಳಾದಳು. ದೇವಿಯ ಪೂಜೆಯಲ್ಲಿ ಅವನು ತಲ್ಲೀನನಾಗುತ್ತಿದ್ದನು.

### ಪರಮಹಂಸನಾದುದು

22ನೆಯ ವಯಸ್ಸಿನಲ್ಲಿ ಗದಾಧರನ ಮದುವೆಯಾಯಿತು. ಆದರೆ ಸಂಸಾರಿಯಂತೆ ಅವನೇನು ಬಾಳುವೆ ಮಾಡಲಿಲ್ಲ. ಮುಂದೆ ಐದು ವರ್ಷಗಳ ತರುವಾಯ ಅವನು ಸನ್ಯಾಸ ತೆಗೆದುಕೊಂಡನು. ತೋತಾ ಪುರಿ ಎಂಬವರು ಆತನ ಗುರು. ಗದಾಧರನಿಗೆ 'ರಾಮಕೃಷ್ಣ ಪರಮಹಂಸ' ಎಂದು ಗುರು ಹೆಸರಿಟ್ಟರು. ಅವನ ಕಡೆ ಎಷ್ಟೋ ಭಕ್ತರು ಬಂದು ಉಪದೇಶ ಕೇಳುತ್ತಿದ್ದರು.

### ವಿಶ್ವಧರ್ಮದ ಸಂದೇಶ

ರಾಮಕೃಷ್ಣರು ಹೊಸದೊಂದು ಪಂಥವನ್ನು ಸ್ಥಾಪಿಸಲಿಲ್ಲ. ಯಾವ ಧರ್ಮವನ್ನೂ ಅವರು ಟೀಕಿಸುತ್ತಿರಲಿಲ್ಲ; ಹಳಿಯುತ್ತಿರಲಿಲ್ಲ. ಪ್ರಚಾರಕ್ಕಾಗಿ ಎಲ್ಲಿಗೂ ಹೋಗುತ್ತಿರಲಿಲ್ಲ, ಉಪನ್ಯಾಸ ಮಾಡುತ್ತ ತಿರುಗುತ್ತಿರಲಿಲ್ಲ. ಅವರು ಇದ್ದಲ್ಲಿ ದಕ್ಷಿಣೇಶ್ವರಕ್ಕೇ ಜನರು ಬರುತ್ತಿದ್ದರು. ಅವರ ಉಪದೇಶವನ್ನು ಕೇಳುತ್ತಿದ್ದರು. ಅವರ ದರ್ಶನದಿಂದ ಆ ಭಕ್ತರಿಗೆ ಆನಂದವಾಗುತ್ತಿತ್ತು, ಸಮಾಧಾನವಾಗುತ್ತಿತ್ತು. ದೊಡ್ಡ ದೊಡ್ಡ ತತ್ವಗಳನ್ನು ಕತೆಗಳ ಮೂಲಕ ಸುಲಭವಾಗಿ ತಿಳಿಸುತ್ತಿದ್ದರು.

"ಎಲ್ಲ ಧರ್ಮಗಳಲ್ಲಿಯೂ ಏಕತೆ ಇದೆ; ಭಕ್ತಿಯಿಂದ ಸೇವೆ ಮಾಡಿದರೆ ದೇವರ ದರ್ಶನವಾಗುತ್ತದೆ" ಎಂದು ರಾಮಕೃಷ್ಣರು ಹೇಳುತ್ತಿದ್ದರು; ಅವರು ಕೆಲದಿನ ಮುಸಲ್ಮಾನ ಧರ್ಮದಲ್ಲಿ ಹೇಳಿದಂತೆ ಪ್ರಾರ್ಥನೆ, ಕೆಲದಿನ ಕ್ರೈಸ್ತರಂತೆ ಸಾಧನೆ ಮಾಡಿದರು. ಈ ಅನುಭವದಿಂದ ಅವರು, "ಅನೇಕ ಧರ್ಮಗಳು ಇದ್ದರೇನಾಯಿತು? ಎಲ್ಲ ಹೊಳೆಗಳು ಒಂದೇ ಸಮುದ್ರಕ್ಕೆ ಕೂಡುವವಲ್ಲವೆ? ಹಾಗೆ ಎಲ್ಲ ಧರ್ಮಗಳೂ ಮನುಷ್ಯನನ್ನು ಕೊನೆಗೆ ಒಬ್ಬ ಈಶ್ವರನ ಕಡೆಗೇ ಒಯ್ಯುತ್ತವೆ" ಎಂದು ಬೋಧಿಸುತ್ತಿದ್ದರು.

ವಯಸ್ಸಿನ 50ನೆಯ ವರುಷದಲ್ಲಿ ರಾಮಕೃಷ್ಣರಿಗೆ ಕ್ಯಾನ್ಸರ್ ಬೇನೆ ಬಂದು ಔಷಧ ಆರೈಕೆ ನಡೆಯಿತು. ಆಗ ಅವರ ಶುಶ್ರೂಷೆ ಮಾಡಿದ ಶಿಷ್ಯರೊಳಗೆ ವಿವೇಕಾನಂದರು ಮುಖ್ಯರಾಗಿದ್ದರು. ಸಾಯುವ ಮೊದಲು ರಾಮಕೃಷ್ಣರು ತಮ್ಮ ಎಲ್ಲ ಶಕ್ತಿಯನ್ನು ವಿವೇಕಾನಂದರಿಗೆ ಕೊಟ್ಟರೆಂದು ಹೇಳಲಾಗುತ್ತದೆ. ರಾಮಕೃಷ್ಣರು ಸಮಾಧಿಸ್ಥರಾದರು (1886). ವಿಶ್ವಧರ್ಮದ, ಎಲ್ಲ ಧರ್ಮಗಳಲ್ಲಿಯ ಏಕತೆಯ ಸಂದೇಶವನ್ನು ದೇಶಬಾಂಧವರಿಗೆ ತಿಳಿಸಿ ಜಗನ್ಮಾತೆಯಲ್ಲಿ ಐಕ್ಯರಾದರು. ಇಂದಿಗೂ ಜಗತ್ತಿನ

ನಾನಾ ದೇಶಗಳಲ್ಲಿರುವ ಅವರ ಸನ್ಯಾಸಿ ಶಿಷ್ಯರು ಗುರುವಿನ ಹೆಸರಿನಿಂದ 'ರಾಮಕೃಷ್ಣಮಠ' ಗಳನ್ನು ನಡೆಸುತ್ತಿದ್ದಾರೆ. ಪರೋಪಕಾರದ ಕೆಲಸ ಗಳನ್ನು ಭಕ್ತಿಯಿಂದ ಮಾಡುತ್ತಾರೆ.

ಅಭ್ಯಸನಗಳು

1. ಗದಾಧರನ ತನ್ಮಯತೆಯನ್ನು ಕುರಿತು ಒಂದು ಉದಾಹರಣೆ ಹೇಳಿರಿ.
2. ರಾಮಕೃಷ್ಣರ ಪಟ್ಟಶಿಷ್ಯರು ಯಾರು ?
3. 'ಎಲ್ಲ ಧರ್ಮಗಳೂ ದೇವರ ಬಳಿಗೆ ಒಯ್ಯುತ್ತವೆ' ಎಂಬ ಮಾತನ್ನು ರಾಮಕೃಷ್ಣರು ಇನ್ನೊಂದು ಯಾವ ಮಾತಿಗೆ ಹೋಲಿಸಿದ್ದಾರೆ ?

## 24. ದಾದಾಭಾಯಿ ನವರೋಜಿ

ಭಾರತದ 'ಕಾಂಗ್ರೆಸ್' ಸಂಸ್ಥೆಯ ಸ್ಥಾಪಕರಲ್ಲಿ ಒಬ್ಬರು ದಾದಾಭಾಯಿ ನವರೋಜಿಯವರು ; ಇವರು ನಮ್ಮ ದೇಶದ ದೊಡ್ಡ ನಾಯಕರು.

ಸುರತ ಜಿಲ್ಹೆಯಲ್ಲಿ ನವಸಾರಿ ಎಂಬ ಊರಿದೆ. ಅಲ್ಲಿ ದಾದಾಭಾಯಿ ಹುಟ್ಟಿದರು ( 1825 ನೆಯ ಇಸವಿ. ) ಅವರ ತಂದೆ ಪಾರಸಿ ಸಮಾಜದ ಪುರೋಹಿತರು. ಅವರು ತೀರಿಕೊಂಡಾಗ ಮಗ ಸಣ್ಣವನಿದ್ದನು. ದಾದಾಭಾಯಿ ತಾಯಿಯ ಕೈಯಲ್ಲಿಯೆ ಬೆಳೆದನು; ಆಕೆಯ ನೇತೃತ್ವದಲ್ಲಿಯೆ ಪ್ರಾಥಮಿಕ ಶಿಕ್ಷಣ ಪಡೆದನು. ಮುಂದೆ ಅವನು ಪ್ರಯತ್ನಪಟ್ಟು ಮುಂಬಯಿಯ ಎಲ್ಫಿನ್‌ಸ್ಟನ್ ಸಂಸ್ಥೆಯಲ್ಲಿ ಸೇರಿ ಜಾಣನಾದನು. ಅವನ ಮೆಚ್ಚಿನ ವಿಷಯಗಳೆಂದರೆ ಗಣಿತ ಮತ್ತು ವಿಜ್ಞಾನ. ವ್ಯಾಯಾಮದಲ್ಲಿ ಮತ್ತು ಬೇರೆ ಆಟಗಳಲ್ಲಿ ಆತನಿಗೆ ಪ್ರೀತಿ ಬಹಳ.



ದಾದಾಭಾಯಿ ನವರೋಜಿ

### ಶಿಕ್ಷಕ ವೃತ್ತಿ

ಶಿಕ್ಷಣ ಮುಗಿಯಿತು. ಕೆಲಸ ಹುಡುಕಲು ಮೊದಲಾಯಿತು. ಎಲ್ಫಿನ್‌ಸ್ಟನ್ ಹೈಸ್ಕೂಲಿನಲ್ಲಿಯೇ ಶಿಕ್ಷಕನ ಕೆಲಸ ಅವರಿಗೆ ಸಿಕ್ಕಿತು. ಮುಂದೆ ಕೆಲ ಕಾಲದಲ್ಲಿಯೆ ಇದೇ ಸಂಸ್ಥೆಯ ಕಾಲೇಜಿನಲ್ಲಿ ದಾದಾಭಾಯಿ

ಪ್ರೊಫೆಸರ್ ಆಗಿ ಹತ್ತು ವರುಷವಿದ್ದರು. ಉಳಿದ ವೇಳೆಯನ್ನು ದೇಶಸೇವೆಯಲ್ಲಿ ಕಳೆಯುತ್ತಿದ್ದರು. ಆಗ ಸ್ತ್ರೀಶಿಕ್ಷಣದ ಅನುಕೂಲವಿರಲಿಲ್ಲ. ಆದುದರಿಂದ ಹುಡುಗಿಯರಿಗಾಗಿ ಒಂದು ಶಾಲೆ ತೆರೆದರು. ಗುಜರಾಥಿ ಭಾಷೆಯಲ್ಲಿ 'ರಾಸ್ತಾಗೋಪ್ತಾರ' ಎಂಬ ವೃತ್ತಪತ್ರಿಕೆ ಹೊರಡಿಸಿದರು. ಅವರ ಅಭ್ಯಾಸಪೂರ್ಣ ಲೇಖನಗಳು ಅದರಲ್ಲಿ ಬರುತ್ತಿದ್ದವು.

## ಇಂಗ್ಲಂಡದಲ್ಲಿ 'ಇಂಡಿಯಾ ಸೊಸಾಯಿಟಿ' ಯ ಸ್ಥಾಪನೆ

ಇತ್ತೀಚೆಗೆ ಅವರ ಲಕ್ಷ್ಯ ವ್ಯಾಪಾರದ ಕಡೆಗೆ ಹರಿದಿತ್ತು. ಮುಂಬಯಿಯ 'ಕಾಮಾ ಮತ್ತು ಕಂಪನಿ'ಯಲ್ಲಿ ಕೆಲಸ ಹಿಡಿದರು. ಆ ಕಂಪನಿಯವರು ತಮ್ಮ ಲಂಡನ್ನಿನ ಕಚೇರಿಗೆ ಅವರನ್ನು ಕಳಿಸಿದರು. ಅಲ್ಲಿ ಅವರು ವ್ಯಾಪಾರದ ಕೆಲಸದಲ್ಲಿ ತೊಡಗಿದ್ದರೂ ಅಲ್ಲಿಯ ಪತ್ರಿಕೆಗಳಲ್ಲಿ ಭಾರತದ ಆಸೆ ಆಕಾಂಕ್ಷೆಗಳನ್ನು ತಿಳಿಸುವದಕ್ಕಾಗಿ 'ಲಂಡನ್ ಸೊಸಾಯಿಟಿ' ಯನ್ನು ಸ್ಥಾಪಿಸಿದರು. ಕಲಿಯಲು ಹೋದ ಭಾರತೀಯ ವಿದ್ಯಾರ್ಥಿಗಳಿಗೆ ಅವರು ನೆರವು ನೀಡುತ್ತಿದ್ದರು. ಹದಿಮೂರು ವರುಷ ಅವರು ಲಂಡನ್ನಿನಲ್ಲಿದ್ದರು. ದಾದಾಭಾಯಿ ಭಾರತಕ್ಕೆ ಮರಳಿದಾಗ ಮುಂಬಯಿಯಲ್ಲಿ ಜನರು ಅತ್ಯಂತ ಗೌರವದಿಂದ ಅವರನ್ನು ಬರಮಾಡಿಕೊಂಡರು.

## ರಾಜಕೀಯ ಚಟುವಟಿಕೆಗಳು

ತಿರುಗಿ ಬಂದ ಮೇಲೆ ಅವರು ಈ ದೇಶದ ಜನರ ಸಾಂಪತ್ತಿಕ ಸ್ಥಿತಿಯ ಅಭ್ಯಾಸ ಮಾಡಿದರು. 'ಭಾರತೀಯ ಉತ್ಪನ್ನವು ವರುಷಕ್ಕೆ 20ರೂಪಾಯಿ ಮಾತ್ರವಿದೆ ; ಅದರಲ್ಲಿಯೆ ಮೂರು ರೂಪಾಯಿ ಕರ ಕೊಡಬೇಕು' ಎಂದು ಅವರು ಅನ್ನುತ್ತಿದ್ದರು. ಈ ವಿಷಯವಾಗಿ ಪತ್ರಿಕೆಯಲ್ಲಿ ಲೇಖನ ಬರೆದು ಸರಕಾರದ ಲಕ್ಷ್ಯವನ್ನು ಅತ್ತ ಎಳೆದರು. ದಾದಾಭಾಯಿ ಕೆಲಕಾಲ ಬಡೋದೆ ಸಂಸ್ಥಾನದ ದಿವಾಣರಾಗಿದ್ದರು. 1885 ನೆಯ ಇಸವಿಯಲ್ಲಿ ಮುಂಬಯಿ ಕೌನ್ಸಿಲಿನ ಸಭಾಸದರಾಗಿದರು. ಆ ವರುಷವೇ ಕಾಂಗ್ರೆಸ್ಸಿನ ಸ್ಥಾಪನೆಯಾಯಿತು. ಅದರ ಸಲುವಾಗಿ ದಾದಾಭಾಯಿ ಬಹಳ ಪ್ರಯತ್ನ ಮಾಡಿದರು. ಕಾಂಗ್ರೆಸ್ಸಿನ ಅಧ್ಯಕ್ಷಪದಕ್ಕೆ ಅವರ ಆಯ್ಕೆ ಮೂರುಸಲ ಆಗಿತ್ತು.

ದಾದಾಭಾಯಿ ಲಂಡನ್ನಿಗೆ ಮತ್ತೊಮ್ಮೆ ಹೋದರು. ಅಲ್ಲಿ ಅವರನ್ನು ಇಂಗ್ಲಿಷರು ಪಾರ್ಲಿಮೆಂಟಿಗೆ ಆರಿಸಿದರು. ಹಿಂದುಸ್ಥಾನದ ಕಷ್ಟಗಳನ್ನು ಅವರು ಆ ಸಭೆಯಲ್ಲಿ ಮಂಡಿಸುತ್ತಿದರು. ಅವರ ಭಾಷಣ

ಗಳಿಂದ ಭಾರತದ ಬಡತನದ ಅರಿವು ಅಲ್ಲಿಯ ಜನರಿಗಾಯಿತು. ಆದರೆ ಭಾರತದ ಕಲ್ಯಾಣಕ್ಕಾಗಿ ಆಗಿನ ಆಂಗ್ಲ ಮುತ್ಸದ್ದಿಗಳು ಏನೂ ಮಾಡಲಿಲ್ಲ. ದೇಶದಲ್ಲಿಯ ಜಾಗ್ರತಿಗೆ ನಿಜವಾದ ಉಕ್ಕು ಬಂದದ್ದು, ಲಾರ್ಡ ಕರ್ಝನ್ ಗವರ್ನರ್ ಜನರಲ್ ಆಗಿದ್ದಾಗ. ಆತನು ಬಂಗಾಲ ಪ್ರಾಂತವನ್ನು ಎರಡಾಗಿ ಒಡೆಯಬೇಕೆಂದು ನಿರ್ಧರಿಸಿದನು. ಜನರು ಅದನ್ನು ವಿರೋಧಿಸಿದರು. ಆ ಬಳಿಕ ಸೇರಿದ ಕಾಂಗ್ರೆಸ್ಸಿಗೆ ದಾದಾಭಾಯಿ ಅಧ್ಯಕ್ಷರಾಗಿದ್ದರು. “ ಭಾರತದ ಎಲ್ಲ ಕಷ್ಟಗಳಿಗೂ ಒಂದೇ ಉಪಾಯ-ಸ್ವರಾಜ್ಯ ಸಂಪಾದಿಸುವದು; ಅದಕ್ಕಾಗಿ ಎಲ್ಲರೂ ಒಕ್ಕಟ್ಟಾಗಿರಿ, ಗಟ್ಟಿಯಾಗಿರಿ” ಎಂದು ಅಧ್ಯಕ್ಷಭಾಷಣದಲ್ಲಿ ಸಾರಿದರು.

ದಾದಾಭಾಯಿ ನವರೋಜಿ ಎಂಬತ್ತು ವರುಷಗಳಾಗುವವರೆಗೂ ದೇಶಕ್ಕಾಗಿ ಸತತ ದುಡಿದರು, ಭಾರತ ಹಿತಕ್ಕಾಗಿ ದುಡಿದು ಮುಪ್ಪಾದ ಇವರು ‘ ಭಾರತದ ಪಿತಾಮಹ ’ ಎಂದು ಹೆಸರಾದರು.

### ಅಭ್ಯಸನಗಳು

1. ದಾದಾಭಾಯಿ ವಿದ್ಯಾರ್ಥಿಗಳಿದ್ದಾಗಿನ ಸಂಗತಿಗಳನ್ನು ಬರೆಯಿರಿ.
2. ಭಾರತದ ಸಲುವಾಗಿ ಇಂಗ್ಲಂಡಿನಲ್ಲಿ ಅವರು ಏನೇನು ಮಾಡಿದರು ?
3 ಭಾರತ ಕಷ್ಟ ಕಳೆಯಲು ಅವರು ಹೇಳಿದ ಉಪಾಯ ಯಾವದು ?

## 25. ಲೋಕಮಾನ್ಯ ಟಿಳಕ



ಲೋಕಮಾನ್ಯ ಟಿಳಕ

### ವಿದ್ಯಾಭ್ಯಾಸ

ಲೋಕಮಾನ್ಯ ಟಿಳಕರ ಹುಟ್ಟೂರು ಚಿಲಖಗಾಂವ; ಅದು ರತ್ನಾಗಿರಿ ಜಿಲ್ಹೆಯಲ್ಲಿದೆ. 1856 ನೇ ಇಸವಿಯಲ್ಲಿ ಅವರು ಹುಟ್ಟಿದರು. ‘ಸ್ವರಾಜ್ಯ ನನ್ನ ಜನ್ಮ ಸಿದ್ಧ ಹಕ್ಕು; ಅದನ್ನು ಪಡೆದೇ ತೀರುವೆನು ’ ಎಂಬ ಸಂಕಲ್ಪವನ್ನು ಸಾರಿ ಸಾರಿ ಜನರನ್ನು ಜಾಗ್ರತಗೊಳಿಸಿದ ಮಹಾಪುರುಷರು ಟಿಳಕರು.

ಟಿಳಕರ ತಂದೆ ಗಂಗಾಧರ ಪಂತರು ಮರಾಠಿ ಶಾಲೆಯ ಶಿಕ್ಷಕ

ರಾಗಿದ್ದರು. ಗಣಿತ, ಸಂಸ್ಕೃತ, ಇತಿಹಾಸ ಈ ವಿಷಯಗಳಲ್ಲಿ ಅವರದು ಎತ್ತಿದ ಕೈ; ಅವರ ಸಹವಾಸದಿಂದ ಟಿಳಕರಿಗೂ ಆ ವಿಷಯಗಳ ಸವಿ ಹತ್ತಿತು. ಹತ್ತುವರುಷದವರಿದ್ದಾಗಲೇ ಅವರು ಸಂಸ್ಕೃತ ಶ್ಲೋಕಗಳ ಅರ್ಥಮಾಡಲು ತೊಡಗಿದ್ದರು. ಮುಂದೆ ಇಂಗ್ಲಿಷ ಕಲಿಯಲು ಪುಣೆಗೆ ಬಂದರು. ಶಾಲೆ ಕಲಿಯುತ್ತಿದ್ದಾಗಲೇ ಹದಿನೈದು ವರುಷದ ವಯಸ್ಸಿನಲ್ಲಿ ಅವರ ಮದುವೆಯಾಯಿತು.

## ರಾಷ್ಟ್ರೀಯ ಶಿಕ್ಷಣಕ್ಕಾಗಿ ಶಾಲೆಯ ಸ್ಥಾಪನೆ

ಪುಣೆಯ ಡೆಕ್ಕನ ಕಾಲೇಜಿನಿಂದ ಟಿಳಕರು ಬಿ. ಎ. ಆದರು. ಅಲ್ಲಿಯೇ ಆಗರಕರ ಎಂಬವರ ಗುರುತು ಅವರಿಗಾಯಿತು. ಇತರ ವಿದ್ಯಾರ್ಥಿಗಳು ಸಾಹೇಬ್ ಠೀವಿಯಲ್ಲಿ ಮೆರೆಯುತ್ತಿದ್ದಾಗ, ಈ ಗೆಳೆಯರು ದೇಶಕ್ಕೆ ಸ್ವರಾಜ್ಯ ಹೇಗೆ ಸಿಕ್ಕೀತು ಎಂದು ವಿಚಾರ ಮಾಡುತ್ತಿದ್ದರು. ತರುಣರಲ್ಲಿ ರಾಷ್ಟ್ರಪ್ರೇಮ ಹುಟ್ಟಿಸಲು ಇಬ್ಬರೂ ಕೂಡಿ ಚಿಪಳೂಣಕರ ಎಂಬ ಹಿರಿಯರ ಸಹಕಾರದಿಂದ ಪುಣೆಯಲ್ಲಿ 'ನ್ಯೂ ಇಂಗ್ಲಿಷ್ ಸ್ಕೂಲ್' ತೆರೆದರು (1881). ಈ ಸಂಸ್ಥೆಯಿಂದಲೇ ಕೆಲಕಾಲದಲ್ಲಿ 'ಫರ್ಗ್ಯುಸನ್' ಕಾಲೇಜು. ಹೊರಟಿತು. ಅಲ್ಲಿ ಟಿಳಕರು ಗಣಿತ ಶಿಕ್ಷಕರಾದರು. ಇವರೆಲ್ಲರೂ ತೀರ ಕಡಿಮೆ ಸಂಬಳ ತಕ್ಕೊಳ್ಳುತ್ತಿದ್ದರು. ಸಂಸ್ಥೆಯ ಕಾರ್ಯಕರ್ತರಲ್ಲಿ ಮತಭೇದ ಹುಟ್ಟಿತೆಂದು ಟಿಳಕರು ಕಾಲೇಜು ಬಿಟ್ಟರು.

## 'ಕೇಸರೀ' ಪತ್ರಿಕೆಯ ಸಂಪಾದಕ

ಟಿಳಕರು ಕೆಲಸ ಬಿಟ್ಟದ್ದರಿಂದ ದೇಶಕ್ಕೆ ಒಳ್ಳೆಯದೇ ಆಯಿತು. ಅವರು 'ಕೇಸರೀ' ಪತ್ರಿಕೆಯ ಹೊಣೆ ಹೊತ್ತುಕೊಂಡರು. ಟಿಳಕರ ಬರವಣಿಗೆಯಿಂದ ಪತ್ರಿಕೆ ಹೆಚ್ಚು ಹೆಚ್ಚು ಜನಪ್ರಿಯವಾಯಿತು. ಆಂಗ್ಲ ಸರಕಾರದ ಅನ್ಯಾಯಗಳನ್ನು ದಿಟ್ಟತನದಿಂದ ಬಯಲಿಗೆ ಎಳೆಯುತ್ತಿತ್ತು. ಆಗಿನ ಕಾಲದಲ್ಲಿ ಪತ್ರಿಕೆಯಿಂದ ದುಡ್ಡು ಸಿಗುತ್ತಿರಲಿಲ್ಲ. ಹೊಟ್ಟೆ ಬಟ್ಟೆಗಾಗಿ ಟಿಳಕರು ಕಾಯದೆಯ ವರ್ಗ ನಡೆಸುತ್ತಿದ್ದರು. ಪುಣೆ ನಗರ ಸಭೆ, ಮುಂಬಯಿ ವಿಧಿಮಂಡಳ, ಕಾಂಗ್ರೆಸ್ ಮೊದಲಾದ ಸಾರ್ವಜನಿಕ ಸಂಸ್ಥೆಗಳಲ್ಲಿ ಮಹತ್ವದ ಪಾತ್ರವಹಿಸಿದರು. ಜನರಲ್ಲಿ ಒಕ್ಕಟ್ಟು ಹೆಚ್ಚಬೇಕು, ಸ್ವಾತಂತ್ರ್ಯದ ಹಂಬಲ ಹುಟ್ಟಬೇಕು. ಎಂದು ಟಿಳಕರು

ಗಣಪತಿಯ ಉತ್ಸವಕ್ಕೆ ಸಾರ್ವಜನಿಕ ಸ್ವರೂಪ ಕೊಟ್ಟರು. ಇದರಂತೆ ಶಿವಾಜಿಯ ಜಯಂತಿಯ ಉತ್ಸವವನ್ನೂ ಟಿಳಕರು ಆರಂಭಿಸಿದರು.

## ಬರವೂ ಪ್ಲೇಗೂ

ಆಗ ಮಹಾರಾಷ್ಟ್ರದಲ್ಲಿ ಬರ ಬಿದ್ದಿತು. ದೇಶಕ್ಕೆ ಒದಗಿದ ಇನ್ನೊಂದು ಸಂಕಟವೆಂದರೆ ಪ್ಲೇಗಿನ ಪಿಡುಗು. ನಮ್ಮ ದೇಶದ ಮೇಲೆ ಈ ಬೇನೆಯು ಮಾಡಿದ ಮೊಟ್ಟಮೊದಲಿನ ಆ ದಾಳಿ ಭಯಂಕರವಾಗಿತ್ತು. ಪ್ಲೇಗು ಹೊಕ್ಕ ಮನೆಯನ್ನು ತೊಳೆದು ಸ್ವಚ್ಛಮಾಡುವದಕ್ಕೆ, ರೋಗಿ ಇದ್ದಾನೋ ಇಲ್ಲವೋ ಶೋಧಿಸಲಿಕ್ಕೆ ಪುಣೆಯಲ್ಲಿ ಒಬ್ಬ ಅಧಿಕಾರಿಯನ್ನು ಸರಕಾರವು ನಿಯಮಿಸಿತ್ತು. ಆತನ ಹೆಸರು ರ್‍ಯಾಂಡ್. ಆತನ ಕ್ರೂರ ಆಡಳಿತದಿಂದ ಜನರಲ್ಲಿ ಅಸಂತೋಷ ಹೆಚ್ಚಿತು. ಕೊನೆಗೆ ರ್‍ಯಾಂಡ್ ಸಾಹೇಬನ ಕೊಲೆಯಾಯಿತು. ಸರಕಾರ ದಿಗಿಲುಗೊಂಡು ಪುಣೆಯಲ್ಲಿ ವಿಶೇಷ ಪೋಲೀಸರನ್ನು ಇಟ್ಟಿತು. ಆಗ ಟಿಳಕರು ಬರೆದ ಒಂದು ಉಗ್ರ ಅಗ್ರಲೇಖನಕ್ಕಾಗಿ ಅವರಿಗೆ ಒಂದೂವರೆ ವರುಷ ಶಿಕ್ಷೆಯಾಯ್ತು.

## 'ಸ್ವದೇಶಿ' ಚಳುವಳಿ ಮತ್ತು ಕರಿನೀರಿನ ಶಿಕ್ಷೆ

ಸೆರೆಮನೆ ವಾಸದಿಂದ ಟಿಳಕರು ಹಿಂಜರಿಯಲಿಲ್ಲ. ಬಿಡುಗಡೆಯಾಗಿ ಬಂದೊಡನೆ ಮತ್ತೆ ತಮ್ಮ ಕೆಲಸ ಆರಂಭಿಸಿದರು. 'ಸರಕಾರವನ್ನು ಕೇಳಿಕೊಳ್ಳುವದು, ಬೇಡಿಕೊಳ್ಳುವದು ಉಪಯೋಗವಿಲ್ಲ; ಇಂಗ್ಲಂಡದ ಒಡವೆಗಳಿಗೆ ಬಹಿಷ್ಕಾರ ಹಾಕಿ ಅವರನ್ನು ಮಣಿಸಬೇಕು' ಎಂದು ಈಗ ಟಿಳಕರು ಹೇಳಿದರು. ಅದೇ ಕಾಲದಲ್ಲಿ ಲಾರ್ಡ ಕರ್ಝನ್ ವಂಗ ಪ್ರಾಂತವನ್ನು ಭಂಗಮಾಡಿದ್ದನು. ಅದರಿಂದ ದೇಶದಲ್ಲಿ ಅಸಂತೋಷ ಉಂಟಾಗಿತ್ತು. 1906 ರಲ್ಲಿ ಕಾಂಗ್ರೆಸ್ ಅಧಿವೇಶನ ಕಲಕತ್ತೆಯಲ್ಲಿ ಕೂಡಿತು. ಟಿಳಕರ ನೇತೃತ್ವದಲ್ಲಿ ತರುಣ ಪಕ್ಷವು ಉಗ್ರ ಕಾರ್ಯಕ್ರಮ ಕೈಕೊಂಡಿತು. ಹರತಾಳ, ಕೂಲಿಕಾರರ ಸಂಪು; ಬಂಧನ, ಶಿಕ್ಷೆ ಎಲ್ಲೆಲ್ಲಿಯೂ ನಡೆದವು. ಟಿಳಕರಿಗೆ ರಾಜದ್ರೋಹದ ಆರೋಪ ಹೊರಿಸಿ ಆರು ವರುಷದ ಕರಿನೀರಿನ ಶಿಕ್ಷೆ ವಿಧಿಸಲಾಯಿತು. ಈಗ ಟಿಳಕರು ನಿಜವಾಗಿಯೂ 'ಲೋಕಮಾನ್ಯ' ರಾದರು.

ಬ್ರಹ್ಮದೇಶದ ಮಂಡಾಲೆಯ ಸೆರೆ ಮನೆಯಲ್ಲಿ ಟಿಳಕರನ್ನು ಇಟ್ಟಿತ್ತು. ಅಲ್ಲಿ ಅವರು ಶಾಸ್ತ್ರಗಳ ಅಭ್ಯಾಸವನ್ನು ಆರಂಭಿಸಿದರು. ಈ ಒಳಗಾಗಿ

ಆರ್ಯರು ಮೂಲತಃ ಎಲ್ಲಿರುವರು ಎಂಬುದನ್ನು ವಿವೇಚಿಸುವ ಗ್ರಂಥವನ್ನು ಅವರು ಬರೆದಿದ್ದರು; ಈಗ ಅವರು ಭಗವದ್ಗೀತೆಯ ಅರ್ಥವನ್ನು ವಿವರಿಸುವ 'ಗೀತಾರಹಸ್ಯ' ಎಂಬ ದೊಡ್ಡ ಹೊತ್ತಿಗೆ ಬರೆದರು. ಅವರು ಸೆರೆಮನೆಯಲ್ಲಿದ್ದಾಗಲೇ ಅವರ ಹೆಂಡತಿ ತೀರಿಕೊಂಡಳು.

## ದೇಶದಲ್ಲೆಲ್ಲ ಚಳುವಳಿ

ಟಿಳಕರು ಬಿಡುಗಡೆ ಹೊಂದಿ ಹೊರಗೆ ಬಂದಾಗ ಮೊದಲನೆಯ ಮಹಾಯುದ್ಧ ಸುರುವಾಗಿತ್ತು. 'ನಮ್ಮ ಕೊರತೆ-ತೊಂದರೆಗಳು ದೂರಾದರೆ ನಾವು ಸಹಾಯ ಮಾಡೇವು.' ಎಂದು ಅವರು ಹೇಳಿದರು. ಅವರಿಗೆ ಅರವತ್ತು ತುಂಬಿದಾಗ ಜನರು ತಮ್ಮ ಈ ನಾಯಕನನ್ನು ಅಭಿನಂದಿಸಿದರು. ಒಂದು ಲಕ್ಷ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಿದರು. ಲಖನೌವಲ್ಲಿ ಮುಸಲ್ಮಾನರೊಡನೆ ಟಿಳಕರು ಒಪ್ಪಂದ ಮಾಡಿಕೊಂಡರು. (1916). ಚಳುವಳಿ ನಿತ್ಯ ನಡೆಯುತ್ತಿರಬೇಕೆಂದು 'ಸ್ವರಾಜ್ಯ ಸಂಘ' ವೆಂಬ ಸಂಸ್ಥೆಯನ್ನು ಸ್ಥಾಪಿಸಿದರು. ಭಾಷಣ ಮಾಡುತ್ತ ಇಡೀ ದೇಶ ಸುತ್ತಿದರು. ಮುಂದೆ ಕಾಂಗ್ರೆಸ್ ಶಿಷ್ಟಮಂಡಳದ ನಾಯಕರಾಗಿ ಟಿಳಕರು ಲಂಡನ್ನಿಗೆ ಹೋಗಿ ಬಂದರು.

ಅನಂತರ ಅಮೃತಸರದಲ್ಲಿ ಕಾಂಗ್ರೆಸ್ ಅಧಿವೇಶನ (1919) ದ ಕಾರ್ಯಗಳೆಲ್ಲ ಟಿಳಕರಂದಂತೆ ನಡೆದವು. ಅಲ್ಲಿಂದ ಮರಳಿದ ಮೇಲೆ ಬೇನೆ ಬಿದ್ದರು. ಮತ್ತು ಅದರಲ್ಲಿಯೇ ಟಿಳಕರ ಜೀವನದ ಕೊನೆ ಆಯಿತು. ಅವರ ಅಂತ್ಯಕ್ರಿಯೆ ನಡೆದ ಚೌಪಾಟಿ ( ಮುಂಬಯಿ) ಯಲ್ಲಿ ಲೋಕಮಾನ್ಯರ ಭವ್ಯ ಮೂರ್ತಿ ಈಗ ನಿಂತಿದೆ.

### ಅಭ್ಯಸನಗಳು

1. ಲೋಕಮಾನ್ಯ ಟಿಳಕರಿಗೆ ಆಂಗ್ಲ ಸರಕಾರವು ಆರು ವರುಷ ಏಕೆ ಶಿಕ್ಷೆಯನ್ನು ಕೊಟ್ಟಿತು ?
2. ಕೆಳಗಿನ ಮಾತುಗಳ ಬಗ್ಗೆ ಎರಡು ಸಾಲು ಬರೆಯಿರಿ :
   ಕೇಸರೀ, ಗೀತಾರಹಸ್ಯ, ಸ್ವರಾಜ್ಯ ಸಂಘ.
3. ಕೆಳಗಿನ ಕಾರ್ಯಗಳನ್ನು ಟಿಳಕರು ಏಕೆ ಪ್ರಾರಂಭಿಸಿದರು ?
   ಶಾಲೆಯ ಸ್ಥಾಪನೆ, ಗಣಪತಿ ಉತ್ಸವ, ಸ್ವದೇಶಿ ಚಳವಳಿ.

## 26. ಮಹಾತ್ಮಾ ಗಾಂಧಿ

ಸ್ವರಾಜ್ಯ ಸಾಧನೆಗಾಗಿ ಗಾಂಧೀಜಿ ಒಂದು ಹೊಸ ಹಾದಿ ತೋರಿದರು. ಅದೇ ಶಾಂತತಾಯುಕ್ತ ಪ್ರತೀಕಾರದ ಮಾರ್ಗ. ಈ ದಾರಿಯಿಂದ ರಾಷ್ಟ್ರಕ್ಕೆ ಅವರು ಸ್ವಾತಂತ್ರ್ಯವನ್ನು ಗೆದ್ದುಕೊಟ್ಟರು.

### ಸಾದಾತನದ ಆಶ್ಚರ್ಯ


ಮಹಾತ್ಮಾ ಗಾಂಧಿ

ಕಾಠೇವಾಡದ ಪೋರಬಂದರ ಎಂಬಲ್ಲಿ ಮೋಹನದಾಸ ಕರಮಚಂದ ಗಾಂಧಿಯವರ ಜನನವಾಯಿತು. (1869 ಅಕ್ಟೋಬರ 2 ). ಮ್ಯಾಟ್ರಿಕ ಪರೀಕ್ಷೆ ದಾಟಿದ ಬಳಿಕ ಅವರು ಇಂಗ್ಲಂಡಿಗೆ ಹೋದರು. ಅಲ್ಲಿ ಬ್ಯಾರಿಸ್ಟರ ಪರೀಕ್ಷೆ ಕೊಟ್ಟು ಸ್ವದೇಶಕ್ಕೆ ಮರಳಿದರು. ತಾಯಿಗೆ ಮಾತು ಕೊಟ್ಟ ಮೇರೆಗೆ ಇಂಗ್ಲಡಿಂನಲ್ಲಿ ಅವರು ಮಾಂಸವನ್ನಾಗಲಿ ಹೆಂಡವನ್ನಾಗಲಿ ಮುಟ್ಟಲಿಲ್ಲ.

### ಆಫ್ರಿಕೆಯಲ್ಲಿ

ಆಫ್ರಿಕೆಯಲ್ಲಿ ಹಿಂದೀ ವ್ಯಾಪಾರಿಗಳು ಒಂದು ಖಟ್ಲೆ ನಡೆಸುವದಕ್ಕಾಗಿ ಗಾಂಧೀಜಿಯವರನ್ನು ಕರೆದರು. ಅದರಂತೆ ಅವರು ಅಲ್ಲಿಗೆ ಹೋಗಿ ಆ ಖಟ್ಲೆ ನಡೆಸಿವರು. ಅದರೊಂದಿಗೆ, ಆಫ್ರಿಕೆಯಲ್ಲಿದ್ದ ಎಲ್ಲ ಹಿಂದೀಯರಿಗೂ ಆಗುತ್ತಿದ್ದ ಅನ್ಯಾಯವನ್ನು ನಿವಾರಿಸಲು ಹೆಣಗಿದರು.

ಅಲ್ಲಿಯ ತೋಟಗಳಲ್ಲಿ ದುಡಿಯುವದಕ್ಕೆ ಯುರೋಪಿಯನ್ನರಿಗೆ ಆಳುಗಳ ಅಗತ್ಯವಿತ್ತು. ಅದಕ್ಕಾಗಿ ಹಿಂದುಸ್ತಾನದಿಂದ ಜನರನ್ನು ಕರೆದೊಯ್ದಿದ್ದರು. ಅವರನ್ನು ಮನುಷ್ಯರಂತೆ ನಡೆಸಿಕೊಳ್ಳಲು ಯುರೋಪಿಯನ್ನರು ಸಿದ್ಧರಿರಲಿಲ್ಲ. ಗಾಂಧಿಯವರನ್ನು ಕೂಡ ಅವರು ಉಗಿಬಂಡಿಯಲ್ಲಿ ಮೊದಲ ವರ್ಗದಲ್ಲಿ ಪ್ರವಾಸ ಮಾಡಗೊಡಲಿಲ್ಲ. ಹೀಗಿರುತ್ತಿರಲು, ಅಲ್ಲಿಯ ಸರಕಾರವು ಹೊಸದೊಂದು ಕಾಯದೆ ಮಾಡಿತು; ಪ್ರತಿಯೊಬ್ಬ

ಹಿಂದೀಯನೂ ತನ್ನ ಹೆಸರು ನೋಂದು ಮಾಡಿಸಬೇಕು, ಆ ಬಗ್ಗೆ ಪ್ರತಿ ವರ್ಷ ಕರ ಕೊಡಬೇಕು ಎಂದು ವಿಧಿಸಿತು. ಈ ಕಾಯದೆಯ ವಿರುದ್ಧ ಗಾಂಧೀಜಿ ಚಳವಳಿ ಹೂಡಿದರು.

**ಹೊಸ ಹಾದಿ**

ಅವರ ಚಳವಳಿಯ ದಾರಿ ಹೊಸದಾಗಿತ್ತು. ಅನ್ಯಾಯದ ಕಾಯದೆಯನ್ನು ಮುರಿಯಬೇಕು, ಆದರೆ ಪೋಲೀಸರನ್ನು ವಿರೋಧಿಸಲಾಗದು; ಅವರು ಹೊಡೆದರೂ ತಾಳಿಕೊಳ್ಳಬೇಕು; ಅದಕ್ಕಾಗಿ ಸ್ವಯಂಸೇವಕರು ಅಣಿಯಾಗಿ ಬಂದರು. ಸರಕಾರವು ಗಾಂಧೀಜಿಯನ್ನೂ ಸ್ವಯಂಸೇವಕರನ್ನೂ ಕೆಲಕೆಲಕಾಲ ಸೆರೆಯಲ್ಲಿಟ್ಟು ಬಿಡುಗಡೆ ಮಾಡಿತು. ಕೆಲವಿನಗಳಲ್ಲಿ ಆ ಕಪ್ಪು ಕಾಯದೆ ರದ್ದಾಯಿತು. ಹಿಂದೀ ಜನರ ಕಷ್ಟಗಳನ್ನು ಸಂಘಟಿತವಾಗಿ ನಿವಾರಿಸುವದಕ್ಕಾಗಿ 'ನಾತಾಳ ಹಿಂದೀ ಕಾಂಗ್ರೆಸ್ಸ'ನ್ನು ಅವರು ಸ್ಥಾಪಿಸಿದರು.

**ಚಂಪಾರಣ್ಯ ಸತ್ಯಾಗ್ರಹ**

ಬಿಹಾರದಲ್ಲಿ ಚಂಪಾರಣ್ಯವೆಂಬ ಜಿಲ್ಹೆಯಿದೆ. ಅಲ್ಲಿಯ ನೀಲಿ ತೋಟದ ಯುರೋಪಿಯನ್ ಒಡೆಯರು ಒಕ್ಕಲಿಗರನ್ನು ಪೀಡಿಸುತ್ತಿದ್ದರು. ಸರಕಾರವು ಒಡೆಯರ ಬೆನ್ನು ಕಟ್ಟುತ್ತಿತ್ತು. ಆ ಒಕ್ಕಲಿಗರ ರಕ್ಷಣೆಗಾಗಿ ಗಾಂಧೀಜಿ ಟೊಂಕ ಕಟ್ಟಿದರು. ಸತ್ಯಾಗ್ರಹವನ್ನು ಆರಂಭಿಸಿದರು. ಕೊನೆಯಲ್ಲಿ ಒಕ್ಕಲಿಗರೇ ಗೆದ್ದರು. ಅಂದಿನಿಂದ ಗಾಂಧೀಜಿ ರೈತರ ಕೈವಾರಿಯಾದರು.

**ಅಸಹಕಾರ ಚಳವಳಿ**

ಚಂಪಾರಣ್ಯ, ವಿಚಾರಣೆಯಿಲ್ಲದೆ ಸೆರೆಯಲ್ಲಿಡುವ ರೌಲೆಟ್ ಕಾಯಿದೆ, ಅಮೃತಸರದ ಗೋಳಿಬಾರು ಹೀಗೆ ಅನೇಕ ಅನ್ಯಾಯಗಳನ್ನು ಗಾಂಧೀಜಿ ನೋಡಿದರು. ಇವುಗಳನ್ನು ಹೋಗಲಾಡಿಸಲು ಅವರು ಉಪಾಯ ಹುಡುಕ ತೊಡಗಿದರು. ಈ ಸುಮಾರಿಗೆ ಟಿಳಕರು ತೀರಿಕೊಂಡರು. ಅಂದಿನಿಂದ ಗಾಂಧೀಜಿ ಭಾರತದ ಸ್ವಾತಂತ್ರ್ಯ ಚಳವಳಿಯ ಮಹಾ ನಾಯಕರಾದರು. ಅವರ ಯೋಜನೆಗೆ ಕಾಂಗ್ರೆಸ್ಸು ಒಪ್ಪಿಗೆಕೊಟ್ಟಿತು.

ಅವರು ಅಹಸಕಾರ ಯೋಜನೆಯ ಮುಖ್ಯ ವಿಧಾನಗಳು ಹೀಗಿದ್ದವು; ಸರಕಾರೀ ನೌಕರಿಗಳನ್ನು ಬಿಡುವದು, ಸರ್-ರಾವಸಾಹೇಬ ಮೊದಲಾದ

ಪದವಿಗಳನ್ನು ಬಿಡುವದು, ವಕೀಲಿ ಬಿಡವದು, ಕಾಯದೆ ಮಂಡಳಗಳ ಸದಸ್ಯತೆ ಬಿಡುವದು, ಸರಕಾರಿ ಶಾಲೆ ಕಾಲೇಜುಗಳನ್ನು ಬಿಡುವದು, ರಾಷ್ಟ್ರೀಯ ವಿದ್ಯಾಸಂಸ್ಥೆ ಸ್ಥಾಪಿಸುವುದು, ಕೊನೆಯಲ್ಲಿ ಶಕ್ಯವಾದರೆ ಸರಕಾರಕ್ಕೆ ತೆರಿಗೆ ಕೊಡದಿರುವದು.

ಈ ಯೋಜನೆಯಂತೆ ಚಳುವಳಿ ಆರಂಭವಾಯಿತು. ಜನರಲ್ಲಿ ಉತ್ಸಾಹ ಬಂತು. ಸಾವಿರಾರು ಕಾರ್ಯಕರ್ತರು ಸೆರೆಮನೆ ಸೇರಿದರು. ಮಹಾತ್ಮರಿಗೆ ಆರು ವರುಷ ಕಾರಾಗೃಹ ವಾಸದ ಶಿಕ್ಷೆಯಾಯಿತು.

## ಇತರ ಕಾರ್ಯಗಳು

ಮಹಾತ್ಮರು ಅಸಹಕಾರ ಯೋಜನೆಯೊಂದಿಗೆ ಕೆಲವು ವಿಧಾಯಕ ಕಾರ್ಯಕ್ರಮಗಳನ್ನು ತಯಾರಿಸಿದ್ದರು. ಚರಕದಿಂದ ನೂಲುವದು, ಖಾದಿಯನ್ನು ಧರಿಸುವದು, ರಾಷ್ಟ್ರಭಾಷೆಯಾದ ಹಿಂದಿಯನ್ನು ಪ್ರಚುರ ಪಡಿಸುವದು; ಅಸ್ಪೃಶ್ಯತೆಯನ್ನು ಕಳೆಯುವದು, ಗ್ರಾಮೋದ್ಯೋಗ ಗಳನ್ನು ಪ್ರೋತ್ಸಾಹಿಸುವದು ಮೊದಲಾದವು. ಈ ಕಾರ್ಯಕ್ರಮದ ಕಾರ್ಯಗಳಿಗಾಗಿ ಅನೇಕ ಕಾರ್ಯಕರ್ತರು ಗಾಂಧಿಯವರಿಗೆ ದೊರೆತರು.

ಗಾಂಧಿಯವರ ಪ್ರಕೃತಿ ಕೆಟ್ಟಿದ್ದರಿಂದ ಅವರ ಬಿಡುಗಡೆ ಬೇಗನೆ ಆಯಿತು. ಆಗ ದೇಶದಲ್ಲಿ ಅಲ್ಲಲ್ಲಿ ಹಿಂದು ಮುಸಲ್ಮಾನರ ದಂಗೆಗಳಾಗುತ್ತಿದ್ದವು. ಅವುಗಳನ್ನು ನಿಲ್ಲಿಸುವ ಸಲುವಾಗಿ ಮಹಾತ್ಮಾ ಗಾಂಧಿಯವರು ಇಪ್ಪತ್ತೊಂದು ದಿನ ಉಪವಾಸ ಮಾಡಿದರು.

## ದಾಂಡಿ ಯಾತ್ರೆ

ಇಂಗ್ಲಿಷ ರಾಜ್ಯದ ಬಗ್ಗೆ ದೇಶದಲ್ಲಿ ಅಸಂತೋಷ ಹೆಚ್ಚುತ್ತಲಿತ್ತು. ಲಾಹೋರ ಕಾಂಗ್ರೆಸ್ಸು 'ಪೂರ್ಣ ಸ್ವಾತಂತ್ರ್ಯ'ದ ಧ್ಯೇಯವನ್ನು ಘೋಷಿಸಿತು. ಸವಿನಯ ಕಾಯದೆ ಭಂಗದ ಚಳುವಳಿಯನ್ನು ಗಾಂಧೀಜಿ ಕೈಕೊಂಡರು. ಸಮುದ್ರದ ನೀರಿನಿಂದ ಉಪ್ಪು ಮಾಡಿಕೊಳ್ಳುವದಕ್ಕೂ ಸರಕಾರದ ಒಪ್ಪಿಗೆ ಇರಲಿಲ್ಲ; ಉಪ್ಪಿನ ಮೇಲೆ ಹೆಚ್ಚು ಕರ ಹೇರಲಾಗಿತ್ತು. ಈ ಕಾಯದೆಯನ್ನು ಗಾಂಧೀಜಿ ಮುರಿದರು. ಈ ಚಳುವಳಿಗೆ 'ಉಪ್ಪಿನ ಸತ್ಯಾಗ್ರಹ'ವೆಂದೆನ್ನುವರು. ಮುಂದೆ ಗಾಂಧಿ–ವ್ಹಾಯಿಸರಾಯರಲ್ಲಿ ಒಪ್ಪಂದವಾಗಿ ಎಲ್ಲ ಸತ್ಯಾಗ್ರಹಿ ಕೈದಿಗಳ ಬಿಡುಗಡೆಯಾಯಿತು.

## ಮತ್ತೆ ದಬ್ಬಾಳಿಕೆ

ಇಂಗ್ಲಂಡಿನಲ್ಲಿ ಬ್ರಿಟಿಶ ಮಂತ್ರಿಗಳು ಮತ್ತು ಭಾರತೀಯ ಮುಂದಾಳು ಗಳು ಕೂಡಿ, ಭಾರತಕ್ಕೆ ಸ್ವರಾಜ್ಯ ಕೊಡುವ ವಿಷಯವಾಗಿ ಚರ್ಚೆ ನಡೆಸಿದರು. ಆ ಸಭೆಗೆ ಗಾಂಧಿಜೀ ಹೋಗಿದ್ದರು. ಅದರಲ್ಲಿ ಸ್ವರಾಜ್ಯ ಸಿಗುವ ಆಸೆ ಗಾಂಧಿಯವರಿಗೆ ಕಾಣಲಿಲ್ಲ. ಭಾರತಕ್ಕೆ ಬರುತ್ತಲಿ ಅವರನ್ನು ಬಂಧಿಸಿ ಯರವಡಾ ಜೇಲಿನಲ್ಲಿ ಇಡಲಾಯಿತು.

## ಯರವಡಾ ಒಪ್ಪಂದ

ಬ್ರಿಟಿಶರ ಮುಖ್ಯ ಮಂತ್ರಿ ಭಾರತದ ಹೊಸಚುನಾವಣೆಯ ಯೋಜನೆಯನ್ನು ಘೋಷಿಸಿರಿದರು. ಅದರಲ್ಲಿ ಹರಿಜನರನ್ನು ಹಿಂದುಗಳಿಂದ ಬೇರ್ಪಡಿಸಿ ಅವರಿಗೆ ಪ್ರತ್ಯೇಕ ಮತದಾರ ಸಂಘ ಕೊಡಲಾಗಿತ್ತು. ಅದರಿಂದ ಗಾಂಧೀಜಿ ನೊಂದುಕೊಂಡರು. ಈ ನಿರ್ಣಯವು ಬದಲಾಗದೆ ತಾವು ಆಹಾರ ಸೇವಿಸುವದಿಲ್ಲವೆಂದು ಹೇಳಿ ಅವರು ಸೆರೆಮನೆಯಲ್ಲಿ ಆಮರಣ ಉಪವಾಸ ಕೈಕೊಂಡರು. ಸಂಯುಕ್ತ ಮತದಾರ ಸಂಘದ ಬಗ್ಗೆ ಮುಂದಾಳುಗಳಲ್ಲಿ ಒಪ್ಪಂದವಾಯಿತು; ಅದನ್ನು ಬ್ರಿಟಿಶ್ ಸರಕಾರವು ಒಪ್ಪಿತು. ಆಗ ಗಾಂಧೀಜಿ ಪಾರಣೆ ಮಾಡಿದರು.

## ಭಾರತವನ್ನು ಸ್ವತಂತ್ರಗೊಳಿಸಿದರು

ಎರಡನೆಯ ಮಹಾಯುದ್ಧ ಆರಂಭವಾಯಿತು (1939). ಯುದ್ಧಕ್ಕೆ ನಮ್ಮ ಬೆಂಬಲವಿಲ್ಲೆಂದು ಸಾರಿ ಗಾಂಧೀಜಿ ವೈಯಕ್ತಿಕ ಕಾಯದೆಭಂಗ ಮಾಡಿದರು. 1942ರಲ್ಲಿ ಇಂಗ್ಲಿಷರ ಪಕ್ಷಕ್ಕೆ ಮಹಾಯುದ್ಧದಲ್ಲಿ ಎಲ್ಲ ಕಡೆ ಸೋಲಾಗುತ್ತಿತ್ತು. ಆಗ ಕಾಂಗ್ರೆಸ್ಸಿನಲ್ಲಿ ' ಬ್ರಿಟಿಶರೇ ಇಲ್ಲಿಂದ ಹೊರಟು ಹೋಗಿರಿ. ಏನು ಬಂದದ್ದು ನಾವು ನೋಡಿಕೊಳ್ಳುತ್ತೇವೆ 'ಂಬ ಗಾಂಧೀಜಿಯ ಗೊತ್ತುವಳಿ ಪಾಸಾಯಿತು. ' ಚಲೇಜಾವ ' ಚಳವಳಿ ಇಡೀ ದೇಶದಲ್ಲಿ ಚಳುವಳಿಯ ಆರಂಭವಾಯಿತು. ರಾಷ್ಟ್ರದ ನಾಯಕರನ್ನು ಸರಕಾರವು ಸೆರೆಹಿಡಿದಿಟ್ಟಿತು. ಕಾಡ್ಗಿಚ್ಚು ಹೊತ್ತಿತು. ಯುದ್ಧ ನಿಂತ ಬಳಿಕ ಒಡಂಬಡಿಕೆಯ ಮಾತುಕತೆಗಳಿಗೆ ಮೊದಲಾಯಿತು. ಕಾಂಗ್ರೆಸ್ಸ ನಾಯಕರೂ ಸ್ವಯಂಸೇವಕರೂ ಬಿಡುಗಡೆ ಹೊಂದಿದರು. ಗವ್ಹರ್ನರ ಜನರಲ್ಲನು ಗಾಂಧೀಜಿ ಮತ್ತು ಇತರ ಮುಂದಾಳುಗಳೊಡನೆ ಚರ್ಚಿಸಿ ಒಂದು ನಿರ್ಣಯಕ್ಕೆ ಬಂದನು ಭಾರತವು 1947ನೆಯ ಅಗಸ್ಟ 15 ರಂದು ಸ್ವತಂತ್ರವಾಯಿತು.

## ಸರಳ ಜೀವನ

ಗಾಂಧೀಜಿಯ ಇರುವಿಕೆ ಸಾದಾ ಅಂದರೆ ತೀರ ಸಾದಾ. ಟೊಂಕ ಕ್ಕೊಂದು ಲಂಡಪಂಜೆ; ಮೈಮೇಲೊಂದು ಪಂಜೆ; ಅವು ಖಾದಿಯವು. ಬಡ ದೇಶದ ವೇಷ ಇದು. ಇಂಗ್ಲಂಡಿನ ಅರಸನ ಭೆಟ್ಟಿಗೆ ಹೋದರೂ ಇಷ್ಟರ ಮೇಲೆಯೇ ಹೋದರು. ಅವರ ನಡತೆ ಅನೇಕರಿಗೆ ಮಾದರಿ ಯಾಯಿತು. ಅವರ ಭಾಷೆಯೂ ತಿಳಿ; ಮಾತು ಚೊಕ್ಕ. ಅವರ ಪತ್ರಿಕೆಗಳು ಅನೇಕ ಭಾಷೆಗಳಲ್ಲಿ ಹೊರಡುತ್ತಿದ್ದವು. ಅಲ್ಲದೆ ತಮ್ಮ ಚರಿತ್ರವನ್ನು 'ಸತ್ಯ ಶೋಧನೆ' ಎಂಬ ಹೆಸರಿಟ್ಟು ಬರೆದಿದ್ದಾರೆ. ಅವರ ಪತ್ರವ್ಯವಹಾರದ ವ್ಯಾಪ ದೊಡ್ಡದು. ಅವರ ಗ್ರಂಥಗಳ ಕನ್ನಡ ಭಾಷಾಂತರಗಳೂ ಪ್ರಸಿದ್ಧವಾಗಿವೆ.

ಅವರು ಸವಿನಯ ಸತ್ಯಾಗ್ರಹದ ಹೊಸ ದಾರಿಯಿಂದ ನಮಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟರು. ಅಂತೆಯೇ ಅವರನ್ನು 'ರಾಷ್ಟ್ರಪಿತ' ಎಂದು ಕರೆಯುತ್ತೇವೆ. ಆದರೆ ಒಬ್ಬ ತಲೆತಿರುಕ ತರುಣನು ಈ ಮಹಾತ್ಮನನ್ನು ಗುಂಡಿಕ್ಕಿ ಕೊಂದನು (30-1-1948) ! ರಾಷ್ಟ್ರಪಿತ ನಮ್ಮನ್ನಗಲಿದನು.

### ಅಭ್ಯಸನಗಳು

1. ಗಾಂಧಿಜೀಯ ವಿಶೇಷ ಗುಣಗಳನ್ನು ತೋರಿಸುವ ಎರಡು ಸಂಗತಿಗಳನ್ನು ಬರೆಯಿರಿ.
2. ಅರ್ಥವನ್ನು ಸ್ಪಷ್ಟಗೊಳಿಸಿರಿ.
   ರಾಷ್ಟ್ರಪಿತ, ಹೊಸ ಮಾರ್ಗ, ಅಸಹಕಾರ, ರೌಲೆಟ್ ಕಾಯದೆ.
3. ಒಂದೊಂದರ ಬಗ್ಗೆ ಎರಡೆರಡು ವಾಕ್ಯ ಬರೆಯಿರಿ.
   ಸತ್ಯಾಗ್ರಹ, ಚಲೇಜಾವ, ಯರವಡಾ ಒಪ್ಪಂದ.

## 27. ಸರದಾರ ವಲ್ಲಭಭಾಯಿ ಪಟೇಲ

ಸ್ವರಾಜ್ಯ ಚಳವಳಿಯ ಇತಿಹಾಸದಲ್ಲಿ ಸರದಾರ ವಲ್ಲಭಭಾಯಿ ಯವರ ಹೆಸರು ಮಹತ್ವದ್ದಾಗಿದೆ. ಆ ಚಳವಳಿಯನ್ನು ಅವರು ಯಶಸ್ವಿ ಯಾಗಿ ಸಂಘಟಿಸಿದರು. ಸ್ವಾತಂತ್ರ್ಯವು ದೊರೆತ ಬಳಿಕ ಸುಮಾರು ಏಳುನೂರು ಸಂಸ್ಥಾನಗಳನ್ನು ರಕ್ತಪಾತವಿಲ್ಲದೆ ಭಾರತದಲ್ಲಿ ಸೇರಿಸಿ ಕೊಂಡರು. ಅದರಿಂದ ಭಾರತವು ಬಲಿಷ್ಠವಾಯಿತು.

## ಜನನ ಮತ್ತು ಶಿಕ್ಷಣ


ಸರದಾರ ವಲ್ಲಭಭಾಯಿ ಪಟೇಲ

ವಲ್ಲಭಭಾಯಿ ಗುಜರಾತದಲ್ಲಿಯ ಖೇಡಾ ಜಿಲ್ಹೆಯ ಕರಮಸದ ಎಂಬ ಊರಲ್ಲಿ ಜನಿಸಿದರು (1875). ಜವೇರಿಭಾಂಿ ಎಂದು ಇವರ ತಂದೆಯ ಹೆಸರು. ಅವರು ಸ್ವತಃ ಬೇಸಾಯ ಮಾಡುತ್ತಿದ್ದರು. ಎಷ್ಟೋ ಸಲ ಮಗ ವಲ್ಲಭಭಾಯಿಯನ್ನು ತಮ್ಮ ಜೊತೆಯಲ್ಲಿ ಕೆಲಸಕ್ಕೆ ಕರೆದೊಯ್ಯುತ್ತಿದ್ದರು. 1857 ನೆಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರು ಭಾಗ ವಹಿಸಿದ್ದರು. ಈ ಶೂರ ರೈತ ಮನೆತನದಲ್ಲಿ ವಲ್ಲಭಭಾಯಿಯವರ ಜನ್ಮವಾಯಿತು.

ಪ್ರಾಥಮಿಕ ಶಿಕ್ಷಣ ಮುಗಿದು, ಇಂಗ್ಲಿಷ ಕಲಿಯಲು ಅವರು ನಡಿಯಾದ ಮತ್ತು ಬಡೋದೆ ಗಳಿಗೆ ಹೋಗಬೇಕಾಯಿತು. ಬಡ ಮನೆತನ. ಆದ್ದರಿಂದ ಅವರಿಗೆ ಕಾಲೇಜದಲ್ಲಿ ಕಲಿಯುವದು ಸಾಧ್ಯವಾಗಲಿಲ್ಲ. ವಕೀಲಿ ಪರೀಕ್ಷೆಗೆ ಕುಳಿತು ತೇರ್ಗಡೆ ಹೊಂದಿದರು. ಮತ್ತು ಬೋರಸದಲ್ಲಿ ವಕೀಲಿಯನ್ನು ಆರಂಭಿಸಿದರು. ಫೌಜದಾರಿ ಖಟ್ಲೆ ನಡೆಸುವದು ಅವರ ಸ್ವಭಾವಕ್ಕೆ ಒಗ್ಗುತ್ತಿತ್ತು. ಅವರ ವಕೀಲಿ ಉದ್ಯೋಗ ಚೆನ್ನಾಗಿ ಸಾಗಿತು; ದುಡ್ಡೂ ಚೆನ್ನಾಗಿ ಬರತೊಡಗಿತು. ತಮ್ಮ ಅಣ್ಣ ವಿಠಲಭಾಯಿಯಂತೆ ಇಂಗ್ಲಂಡಿಗೆ ಹೋಗಿ ಬ್ಯಾರಿಸ್ಟರ್ ಆಗಿಬಂದರು. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ವಲ್ಲಭಭಾಯಿ ಪಾಸಾದರು. ಭಾರತಕ್ಕೆ ಬಂದೊಡನೆ ಅಹಮದಾಬಾದದಲ್ಲಿ ವಕೀಲಿ ಆರಂಭಿಸಿದರು.

## ಸಾರ್ವಜನಿಕ ಜೀವನಾರಂಭ

ಆಗ ವಲ್ಲಭಭಾಯಿಯವರ ನಡೆನುಡಿಯಲ್ಲಿ ಸಾಹೇಬ ಪದ್ಧತಿಯ ಠೀವಿಯಿತ್ತು. ತಮ್ಮ ಉದ್ಯೋಗದಲ್ಲಿ ಅವರು ಹೆಸರು ಗಳಿಸಿ ಹಣವನ್ನೂ ಗಳಿಸಿದರು. ಆ ಸುಮಾರಿನಲ್ಲಿಯೇ ಗಾಂಧೀಜಿ 'ಸಾಬರಮತಿ ಆಶ್ರಮ'

ಸ್ಥಾಪಿಸಿದ್ದರು. ಅದರ ಮೂಲಕ ಗಾಂಧೀ ವಲ್ಲಭಭಾಯಿಯವರಲ್ಲಿ ಪರಿಚಯ ಬೆಳೆಯಿತು. ಖೇಡಾ ಜಿಲ್ಹೆಯ ಒಕ್ಕಲಿಗರಿಗಾಗುತ್ತಿರುವ ಅನ್ಯಾಯವನ್ನು ದೂರಗೊಳಿಸುವಲ್ಲಿ ನೆರವಾದರು. ವಲ್ಲಭಭಾಯಿ ಸಾರ್ವಜನಿಕ ಕಾರ್ಯಗಳಲ್ಲಿ ಪ್ರವೇಶ ಮಾಡಿದರು. ಸರಕಾರವು ಒಕ್ಕಲಿಗರಿಗಾಗುತ್ತಿದ್ದ ಅನ್ಯಾಯವನ್ನು ದೂರ ಮಾಡಿತು. ಮುಂದೆ ಮ. ಗಾಂಧಿ ಹೂಡಿದ ಚಳುವಳಿಗಳಲ್ಲೆಲ್ಲ ತ್ಯಾಗಿಯಾದ ವಲ್ಲಭಭಾಯಿ ಇದ್ದೇ ಇರುತ್ತಿದರು. ಅಹಮದಾಬಾದ ನಗರ ಸಭೆಯ ಅಧ್ಯಕ್ಷರೂ ಕೆಲಕಾಲ ಇದ್ದರು.

ಗುಜರಾಥದಲ್ಲಿ ಹೊಳೆಗಳಿಗೆ ನೆರೆಬಂದು ಜನರು ಸಂಕಟಕ್ಕೆ ಈಡಾದರು. ಆಗ ವಲ್ಲಭಭಾಯಿ ಜನರ ಸಹಾಯಕ್ಕೆ ಧಾವಿಸಿದರು. ಊಟ, ಬಟ್ಟೆ, ಆಸರ ಎಲ್ಲವನ್ನು ಒದಗಿಸಲು ದುಡಿದರು. ಹಣ ಕೊಡಿಸುವ ಯೋಜನೆ ಮಾಡಿದರು. ಕೇವೊಂದು ಪ್ರಸಂಗದಲ್ಲಿ ಸಾಲಕೊಟ್ಟು ವಲ್ಲಭಭಾಯಿ ಒಕ್ಕಲಿಗರನ್ನು ಮತ್ತೆ ನೆಲೆಗೆ ನಿಲ್ಲಿಸಿದರು. ಊರನ್ನು ನಿರ್ಮಲವಾದ ಆರೋಗ್ಯಕರವಾದ ನಗರವನ್ನಾಗಿ ಮಾಡಿದರು.

### ಬಾಡೋರ್ಲಿಯ ಸರದಾರ

ಬಾಡೋರ್ಲಿ ಸತ್ಯಾಗ್ರಹದ ಸಮಯದಲ್ಲಿ ವಲ್ಲಭಬಾಯಿ ಮಾಡಿದ ಕಾರ್ಯ ಇದಕ್ಕಿಂತ ಹೆಚ್ಚಿನದು. ಬಾಡೋರ್ಲಿ ಸುರತ ಜಿಲ್ಹೆಯ ಒಂದು ತಾಲೂಕು. ಅಲ್ಲಿಯ ಭೂಮಿಯ ತೆರಿಗೆಯನ್ನು ಸರಕಾರವು ನೂರಕ್ಕೆ ಇಪ್ಪತ್ತೆರಡರಷ್ಟು ಹೆಚ್ಚಿಸಿತು; ಅಂದರೆ ಒಂದು ರೂಪಾಯಿ ಇದ್ದ ತೆರಿಗೆ ಸುಮಾರು ಒಂದೂಕಾಲೂ ರೂಪಾಯಿಗೆ ಏರಿತು. ಸರಕಾರಕ್ಕೆ ಹೇಳಿಕೊಳ್ಳುವದಾಯಿತು. ಯಾವ ಉಪಾಯವೂ ನಾಟಲಿಲ್ಲ. ಆಗ ವಲ್ಲಭಭಾಯಿ ಮುಂದಾಳಾಗಿ ಬಂದರು. ಹೋರಾಟಕ್ಕೆ ಆರಂಭವಾಯಿತು. ಸರಕಾರವು ದಬ್ಬಾಳಿಕೆ ಕೈಕೊಂಡಿತು. ಭೂಮಿಗಳನ್ನು ಹರಾಜಿಗಿಟ್ಟಿತು; ಆದರೆ ಗಿರಾಕಿಗಳೇ ಹುಟ್ಟದಾದರು. ಒಕ್ಕಲಿಗರು ತೆರಿಗೆ ಕೊಡಲಿಲ್ಲ. ಕೌನ್ಸಿಲಿನ ಪ್ರತಿನಿಧಿಗಳು ಮಧ್ಯಸ್ತಿಕೆ ಮಾಡಿದರು. ಕೊನೆಗೆ ರೈತರ ಬೇಡಿಕೆಗಳನ್ನೆಲ್ಲ ಸರಕಾರವು ಒಪ್ಪಿಕೊಂಡಿತು (1929).

ಅಲ್ಲಿಂದ ವಲ್ಲಭಭಾಯಿಯವರು ಅಖಿಲ ಭಾರತ ರಾಷ್ಟ್ರದ ಮುಂದಾಳುಗಳ ಸಾಲಿನಲ್ಲಿ ಬಂದರು. ಅವರ ಪಾಲಿಗೆ ದೊಡ್ಡ ದೊಡ್ಡ ಕೆಲಸಗಳು ಬರಹತ್ತಿದವು ಕರಾಚಿಯ ಕಾಂಗ್ರೆಸ್ಸಿಗೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಗಾಂಧಿಯವರ ಬಲಗೈ ಎಂದು ಜನರು ಅವರನ್ನು ಕರೆದರು.

**ಉಕ್ಕಿನ ಆಳು**

ಕಾಂಗ್ರೆಸ್ಸಿನ ಚುನಾವಣೆಗೆ ನಿಂತಾಗೆಲ್ಲ ಅದರ ಸಂಘಟನೆಯ ಕೆಲಸ ವಲ್ಲಭಭಾಯಿಯವರ ಕಡೆಗೆ ಇರುತ್ತಿತ್ತು; ಮತ್ತು ಅವರು ಕಾಂಗ್ರೆಸ್ಸಿಗೆ ಗೆಲವು ತಂದುಕೊಟ್ಟರು. ಸ್ವತಂತ್ರ ಭಾರತದ ಕೇಂದ್ರ ಮಂತ್ರಿ ಮಂಡಲದಲ್ಲಿ ಅವರು ಉಪಮುಖ್ಯ ಮಂತ್ರಿಗಳಾಗಿದ್ದರು. ಗೃಹಖಾತೆ ಮತ್ತು ಸಂಸ್ಥಾನ ಖಾತೆಗಳು ಅವರ ಕಡೆಗಿದ್ದವು. ಪಾಕಿಸ್ತಾನದ ಹೊರತು ಉಳಿದ ಭಾರತವನ್ನು ಅವರು ಒಂದು ಕಟ್ಟಿನಲ್ಲಿ ತಂದರು. ಎಲ್ಲ ಸಂಸ್ಥಾನಗಳನ್ನು ಒಕ್ಕೂಟದಲ್ಲಿ ಕೂಡಿಸಿಕೊಂಡರು. ಭಾರತದ ಸಂಘರಾಜ್ಯವು ಬಲಿಷ್ಠವಾಯಿತು. 15—12—1950 ಕ್ಕೆ ವೀರ ವಲ್ಲಭಭಾಯಿ ಮುಂಬಯಿಯಲ್ಲಿ ತೀರಿಕೊಂಡರು.

ಗಾಂಧೀಜಿಯ ತೀರ ಹತ್ತಿರದ ಹಲವು ಅನುಯಾಯಿಗಳಲ್ಲಿ ಸರದಾರ ವಲ್ಲಭಭಾಯಿ ಒಬ್ಬ ಪ್ರಮುಖ ವ್ಯಕ್ತಿ. ಯಾವ ಪ್ರಸಂಗದಲ್ಲಿಯೂ ಮಣಿಯದ ಉಕ್ಕಿನ ಆಳು.

ಅಭ್ಯಸನಗಳು

1. ಪಟೇಲರಲ್ಲಿದ್ದ ಒಂದೊಂದು ಗುಣದ ಬಗ್ಗೆ ಕತೆ ಸಂಗ್ರಹಿಸಿರಿ.
2. ಪ್ರತಿಯೊಂದರ ಬಗ್ಗೆ ಎರಡು ವಾಕ್ಯ ಬರೆಯಿರಿ.
   ಅ) ಬಾರ್ಡೋಲಿಯ ಸತ್ಯಾಗ್ರಹ. ಆ) ಗುಜರಾಥದ ನೆರೆಹಾವಳಿ.
3. ಮಂತ್ರಿಯಾಗಿ ವಲ್ಲಭಭಾಯಿ ಮಾಡಿದ ಮಹತ್ವದ ಕಾರ್ಯಗಳಾವವು ?

## 28. ಸರೋಜಿನಿ ನಾಯುಡು

20ನೆಯ ಶತಕದ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗ ವಹಿಸಿದ ವೀರ ಮಹಿಳೆಯರಲ್ಲಿ ಸರೋಜಿನಿ ನಾಯುಡು ಇವರ ಹೆಸರು ಅತಿ ದೊಡ್ಡದು. ಗಾಂಧೀಜಿಯವರ ಪಟ್ಟಶಿಷ್ಯರಲ್ಲಿ ಇವರೂ ಒಬ್ಬರು.

**ಮನೆತನದ ಪರಿಚಯ**

ಪ್ರಾಧ್ಯಾಪಕ ಅಘೋರನಾಥ ಚಟ್ಟೋಪಾಧ್ಯಾಯರೆಂಬ ಬಂಗಾಲಿ ಬ್ರಾಹ್ಮಣರು. ದಕ್ಷಿಣ ಹೈದ್ರಾಬಾದದಲ್ಲಿ ನೆಲೆಸಿದ್ದರು. ಅವರ ಮಗಳ ಮುದ್ದು ಜಾಣ ಕೋಗಿಲೆಯೇ ಸರೋಜಿನಿಯು. ಇವರು 16ನೆಯ ವರುಷವೆ ಮೆಟ್ರಿಕ್ ಪರೀಕ್ಷೆ ಮುಗಿಸಿ ಇಂಗ್ಲಂಡಿನಲ್ಲಿ 3 ವರುಷ ಉಚ್ಚ ಶಿಕ್ಷಣ ಪಡೆದರು. ಭಾರತಕ್ಕೆ ಮರಳಿದೊಡನೆ ಡಾ. ಗೋವಿಂದ ರಾಜಲು

ನಾಯುಡುರನ್ನು ಮದುವೆಯಾಗಿ ಸಮಾಜಸುಧಾರಕರೆನಿಸಿದರು. ಇಷ್ಟರಲ್ಲಿ 'ಕೋಗಿಲೆ'ಯ ಕಂಠವುಳ್ಳ ಸರೋಜಿನಿ ಇಂಗ್ಲಿಷಿನಲ್ಲಿಯೇ ಕವಿತೆ ಬರೆದು ಆ ಸಾಹಿತ್ಯದಲ್ಲಿ ಗಣ್ಯಸ್ಥಾನ ಪಡೆದು 'ಭಾರತ ಕೋಕಿಲೆ'ಯಾದರು. ಇವರ ದಾಂಪತ್ಯ ಜೀವನವು ಸಾಮರಸ್ಯದಿಂದ ಕೂಡಿ ಸುಖಮಯವಾಯಿತು. ಇಬ್ಬರು ಪುತ್ರರೂ ಇಬ್ಬರು ಪುತ್ರಿಯರೂ ಜನಿಸಿದರು.

## ಕವಿಯಿತ್ರಿಯ ರಾಷ್ಟ್ರಸೇವೆ



ಸರೋಜಿನಿ ನಾಯುಡು

ಸರೋಜಿನಿಯವರ ಪತಿ ತಮ್ಮ ಸತಿಯ ಸ್ವಭಾವ-ಸ್ವಧರ್ಮಗಳನ್ನರಿತು ಆಕೆಯ ರಾಷ್ಟ್ರಸೇವಾ ಕಾರ್ಯದಲ್ಲಿ ಅನುಕೂಲತೆ ಒದಗಿಸಿಕೊಟ್ಟರು. ಕ್ರಿ. ಶ. 1916ರಿಂದ ಸರೋಜಿನಿಯವರು ಸಾರ್ವಜನಿಕ ಕಾರ್ಯದಲ್ಲಿ ಧುಮುಕಿದರು. ಲಖನೌ ಕಾಂಗ್ರೆಸ್ಸಿನ ಕಾಲವದು. ಲೋಕಮಾನ್ಯ ಟಿಳಕರಿಗೆ ನೆರವಾಗಿ ಹಿಂದೂ ಮುಸ್ಲಿಂ ಐಕ್ಯ ಸಾಧಿಸಿ ಸ್ವರಾಜ್ಯ ಚಳುವಳಿಯ ನಾಂದಿ ಸ್ಥಾಪನೆ ಮಾಡಿದರು. ಬಳಿಕ ಮಹಾತ್ಮಾ ಗಾಂಧಿಜಿಯವರ ಸತ್ಯಾಗ್ರಹ ಚಳುವಳಿಯ ಎಲ್ಲ ಕಾರ್ಯಕ್ರಮಗಳಲ್ಲಿ ಮುಂದಾಳಾದರು. ಕಾಂಗ್ರೆಸ್ಸಿನ ಸ್ತ್ರೀಶಾಖೆಯ ಸಂಘಟನೆಗೆ ಇವರೇ ಸಲಹೆಗಾರರು. 1925ರಲ್ಲಿ ಕಾನಪುರ ಕಾಂಗ್ರೆಸ್ಸಿನ ಅಧ್ಯಕ್ಷಪದವು ಇವರಿಗೆ ದೊರೆಯಿತು. 1930ರ ಉಪ್ಪಿನ ಸತ್ಯಾಗ್ರಹದಲ್ಲಂತೂ ಚಂಡಿಚಾಮುಂಡಿಯ ಸ್ವರೂಪ ತಳೆದು ಬ್ರಿಟಿಶ ಸಾಮ್ರಾಜ್ಯವನ್ನು ಗದಗದ ನಡುಗಿಸಿದರು. 1942ರ ಚಲೇಜಾವ ಚಳುವಳಿಯಲ್ಲಿಯೂ ಧುಮುಕಿ ಸೆರೆಮನೆ ಕಂಡರು.

## ವಿದೇಶ ಪ್ರಯಾಣ

ಈ ನಡುವೆ 1919ರಲ್ಲಿ ಯುರೋಪಿನಲ್ಲಿ ಜಿನೇವಾನಗರದಲ್ಲಿ ನೆರೆದ ಅಂತರ್ರಾಷ್ಟ್ರೀಯ ಸ್ತ್ರೀ-ಮತಾಧಿಕಾರ ಪರಿಷತ್ತಿನಲ್ಲಿ ಭಾರತದ

ಪ್ರತಿನಿಧಿಯಾಗಿ ಭಾಗವಹಿಸಿದರು. ಕಾಂಗ್ರೆಸ್ ಸಂಸ್ಥೆಯ ಪರವಾಗಿ ದ. ಆಫ್ರಿಕೆಗೆ ಭೆಟ್ಟಿಯಿತ್ತು ಅಲ್ಲಿದ್ದ ಭಾರತೀಯರಿಗೆ ಹುರುಪು ಕೊಟ್ಟು ಅಲ್ಲಿಯ ಪರಿಸ್ಥಿತಿಯನ್ನು ಅರಿತುಕೊಂಡರು.

### ಸ್ವತಂತ್ರ ಭಾರತದಲ್ಲಿ

ಭಾರತೀಯರ ರಾಜಕೀಯ ಕನಸು ನನಸಾದೊಡನೆ ಪಂಡಿತ ಜವಾಹರಲಾಲರ ಮಂತ್ರಿಮಂಡಲದಲ್ಲಿ ಕೆಲ ಕಾಲ ಮಂತ್ರಿಗಳಾಗಿದ್ದರು. ಆ ಬಳಿಕ ಉತ್ತರ ಪ್ರದೇಶದ ರಾಜ್ಯಪಾಲೆಂದು ಕೆಲ ವರ್ಷ ಕೆಲಸ ಮಾಡಿ ದಕ್ಷ ಆಡಳಿತಗಾರ್ತಿಯೆಂದು ಹೆಸರು ಗಳಿಸಿದರು. 1949 ರ ಎಪ್ರಿಲ್ ತಿಂಗಳಲ್ಲಿ ಅವರು ನಮ್ಮಿಂದ ಅಗಲಿ ದಿವಂಗತರಾದರು.

### ಅಭ್ಯಸನಗಳು

1. ಸರೋಜಿನಿಯವರ ದಾಂಪತ್ಯ ಜೀವನದ ಬಗ್ಗೆ 10 ಸಾಲು ಬರೆಯಿರಿ.
2. ಕಾಂಗ್ರೆಸ್ಸಿನಲ್ಲಿ ಸರೋಜಿನಿಯವರ ಸ್ಥಾನ ಎಂತಹದು ?
3. 'ಭಾರತದ ಕೋಗಿಲೆ' ಎಂಬ ಬಿರುದು ಅವರಿಗೆ ಏಕೆ ಬಂತು ?

## 29. ಮೌಲಾನಾ ಅಜಾದ

ಮೌಲಾನಾ ಅಬ್ದುಲ್ ಕಲಂ ಅಜಾದರು ಭಾರತದ ರಾಷ್ಟ್ರೀಯ ಚಳುವಳಿಯಲ್ಲಿ ಅತಿ ದೊಡ್ಡ ತ್ಯಾಗ ಮಾಡಿದ್ದಾರೆ. ಕಾಂಗ್ರೆಸ್ಸಿನ ಚರಿತ್ರೆಯಲ್ಲಿ ಅವರಿಗೆ ವಿಶಿಷ್ಟ ಸ್ಥಾನವಿದೆ.

### ಬಾಲ್ಯ, ಶಿಕ್ಷಣ

ಅಜಾದರು 1889 ರಲ್ಲಿ ಮಕ್ಕಾದಲ್ಲಿ ಜನಿಸಿದರು; ಇವರು 9 ವರ್ಷದವರಿದ್ದಾಗ ಅವರ ತಂದೆ ಭಾರತಕ್ಕೆ ಬಂದರು. ಕಲಕತ್ತೆಯಲ್ಲಿ ನೆಲೆಸಿದರು ಅರಬ್ಬಿ ಭಾಷೆಯಲ್ಲಿ ಅಜಾದರು ದೊಡ್ಡ ಪಂಡಿತರು. ಇರಾಕ, ಇಜಿಪ್ತ, ಸಿರಿಯಾ, ತುರ್ಕಸ್ಥಾನ, ಫ್ರಾನ್ಸ ದೇಶದಲ್ಲಿ ಪ್ರವಾಸಗೈದು ಬಹುಭಾಷಾ ಪಂಡಿತರಾದರು.

### ಕಾಂಗ್ರೆಸ್ಸಿನಲ್ಲಿ ಪ್ರವೇಶ

ಕ್ರಿ. ಶ. 1912 ರಲ್ಲಿ ಅಜಾದರು ರಾಜಕೀಯ ಕ್ಷೇತ್ರಕ್ಕೆ ಇಳಿದರು. ಬ್ರಿಟಿಶರ ಭೇದನೀತಿಯಿಂದಾಗಿ ಬಹು ಜನ ಮುಸಲ್ಮಾನರು ಕಾಂಗ್ರೆಸ್ ಸಂಸ್ಥೆಯಿಂದ ದೂರ ಇರಹತ್ತಿದರು. ದೂರದರ್ಶಿಗಳಾದ ಇವರು ತಾವು ಸ್ವತಃ ಕಾಂಗ್ರೆಸ್ ಸೇರಿ ಮುಸಲ್ಮಾನ ಬಾಂಧವರಿಗೆ ಹಾಗೆ ಮಾಡಲು

ಹೇಳಿದರು. 'ಅಲ್ ಹಿಲಾಲ್' ಎಂಬ ಉರ್ದು ಪತ್ರಿಕೆ ಹೊರಡಿಸಿ ಮುಸಲ್ಮಾನ ಬಾಂಧವರಲ್ಲಿ ಹೆಚ್ಚಿನ ಜಾಗ್ರತಿ ಮಾಡಿದರು. ಅವರದು ವೀರ ಉಜ್ವಲ ಶೈಲಿ. 1914 ರಲ್ಲಿ 1ನೇ ಮಹಾಯುದ್ಧದ ಕಾಲ. ಆಗ ಬ್ರಿಟಿಶರ ವಿರುದ್ಧ ಇವರು ಬರೆದ ಉಗ್ರ ಲೇಖಗಳಿಗಾಗಿ ಸೆರೆಮನೆ ಕಂಡರು. ಪತ್ರಿಕೆ ನಿಲ್ಲಿಸಲ್ಪಟ್ಟಿತು. 1920 ರಲ್ಲಿ ಅವರ ಬಿಡುಗಡೆಯಾಯಿತು. ಕದಡಲೇ ಅವರು ಗಾಂಧೀಜಿಯವರ ಬೆಂಬಲಕ್ಕೆ ನಿಂತರು. ಬಾಳಿನ ಕೊನೆಯ ಉಸಿರಿನವರೆಗೂ ಅವರು ವೀರ ರಾಷ್ಟ್ರ ಭಕ್ತರಾಗಿ ಭಾರತದ ಶ್ರೇಷ್ಠ ಪುತ್ರರೆನಿಸಿದರು.



ಮೌಲಾನಾ ಅಜಾದ

1923 ರಲ್ಲಿ ಮೊದಲನೆಯ ಸಲ ಕಾಂಗ್ರೆಸ್ ಅಧ್ಯಕ್ಷರಾದರು. 1940 ಪುನಃ ಅಧ್ಯಕ್ಷರಾದರು. ಬ್ರಿಟಿಶರು ಭಾರತ ಬಿಟ್ಟು ತೊಲಗುವಾಗ ಕಾಂಗ್ರೆಸ್ಸಿನ ಅಧ್ಯಕ್ಷರು ಅವರೇ ಇದ್ದರು. 1946—47 ರಲ್ಲಿ ನಡುಗಾಲ ಸರಕಾರದಲ್ಲಿಯೂ ಅನಂತರ ಸ್ವತಂತ್ರ ಭಾರತದಲ್ಲಿ ಕೇಂದ್ರ ಸರಕಾರದ ಶಿಕ್ಷಣ ಮಂತ್ರಿಯಾಗಿಯೂ ಕೆಲಸ ಮಾಡಿದರು. ಈಗ ಎರಡು ವರ್ಷಗಳ ಹಿಂದೆ ಪೈಗಂಬರವಾಸಿಗಳಾದರು.

ದಿಲ್ಲಿಯ ಮೊಗಲ್ ಸಿಂಹಾಸನಕ್ಕೆ ಆಂಗ್ಲರು ಒಡೆಯರಾಗಿದ್ದರಷ್ಟೇ. 90 ವರುಷಗಳ ಬಳಿಕ ತಮ್ಮ ಒಡೆತನವನ್ನು ಬಿಟ್ಟು ಕೊಟ್ಟದ್ದು ಕಾಂಗ್ರೆಸ ಅಧ್ಯಕ್ಷ ರಾಷ್ಟ್ರೀಯ ಮುಸಲ್ಮಾನ ಅಜಾದರಿಗೆ. ಇದೊಂದು ದೈವಲೀಲೆಯೇ ಸರಿ.

### ಅಭ್ಯಸನಗಳು

1. ಅಜಾದರ ಜನ್ಮ ಸ್ಥಳ, ಶಿಕ್ಷಣದ ಬಗ್ಗೆ 10 ಸಾಲು ಬರೆಯಿರಿ.
2. ಅಜಾದರು ಗಾಂಧೀಜಿಗೆ ಎಂತು ಬೆಂಬಲವಿತ್ತರು ?
3. ದಿಲ್ಲಿಯಲ್ಲಿ ಅವರು ಯಾವ ಖಾತೆಯ ಮಂತ್ರಿಗಳಾಗಿದ್ದರು ?

## 30. ಸುಭಾಸಚಂದ್ರ ಬೋಸ

### ಶಿಕ್ಷಣ

ಕ್ರಿ. ಶ. 1897 ರಲ್ಲಿ ಬಾಲ ಸುಭಾಸನು ಬಂಗಾಲದಲ್ಲಿ ಜಾನಕೀ ನಾಥ ಬೋಸರ ಮಗನಾಗಿ ಹುಟ್ಟಿದನು. ಆತನ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣ ಒಳನಾಡಿನಲ್ಲಿ ನಡೆಯಿತು. ಉಚ್ಚ ಶಿಕ್ಷಣ ಕಲಕತ್ತೆಯ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ನಡೆಯಿತು. ಅಂದಿನಿಂದ ಕಲಕತ್ತೆಯೇ ಶೂರ ಸುಭಾಸರ ಜೀವನಕ್ಷೇತ್ರದ ಕೇಂದ್ರವಾಯಿತು. ಬಿ. ಎ. ಪರೀಕ್ಷೆ ಮೊದಲ ತರಗತಿಯಲ್ಲಿ ಪಾಸಾದ ತರುಣ ಸುಭಾಸನು ಐ. ಸಿ. ಎಸ್. ಪರೀಕ್ಷೆಗಾಗಿ ಇಂಗ್ಲಂಡಿಗೆ ತೆರಳಿದ. ಮೊದಲಿನಿಂದಲೂ ಸ್ವಾತಂತ್ರ್ಯಪ್ರಿಯನೂ, ಜನ ಸೇವಾನುರಾಗಿಯೂ ಆದ ಈತನು ಸರಕಾರಿ ಹುದ್ದೆ ತನಗಾಗಿ ಕಾದಿದ್ದರೂ ಐ. ಸಿ. ಎಸ್. ಪಾಸಾಗಿದ್ದರೂ 1920ರಲ್ಲಿ ಗಾಂಧಿಜಿಯವರ ಅಸಹಕಾರ ಚಳುವಳಿಯಲ್ಲಿ ಧುಮುಕಿದನು. ಆಗ ಬಂಗಾಲದ ನಾಯಕರಾದ ದೇಶಬಂಧು ಚಿತ್ತರಂಜನ ದಾಸರು ಗಾಂಧಿಜಿಯವರ ದೊಡ್ಡ ಬೆಂಬಲವಾಗಿ ಕಾರ್ಯ ಮಾಡಿದರು. ತರುಣ ಸುಭಾಸನು ಚಿತ್ತರಂಜನರ ಗರಡಿಯಲ್ಲಿ ತರಬೇತಿ ಹೊಂದಿದನು.

### ಕಾಂಗ್ರೆಸ್ ನಾಯಕ ಸುಭಾಸ



ಸುಭಾಸಚಂದ್ರ ಬೋಸ

ದೇಶಬಂಧು ಚಿತ್ತರಂಜನ ದಾಸರು 1925ರಲ್ಲಿ ಸ್ವರಾಜ್ಯ ಪಕ್ಷವನ್ನು ಕಾಂಗ್ರೆಸಿನಲ್ಲಿ ಸಂಘಟಿಸಿದರು. ಅವರ ದಕ್ಷ ಅನುಯಾಯಿಯಾಗಿ 'ಫಾರವರ್ಡ' ಪತ್ರಿಕೆಯನ್ನು ಸುಭಾಸರು ಹೊರಡಿಸಿದರು; ಆಂಗ್ಲ ಸರ್ಕಾರವು ಇವರ ಪತ್ರಿಕೆಯನ್ನು ಹತ್ತಿಕ್ಕಿತು. 'ನ್ಯೂ ಫಾರವರ್ಡ' 'ಲಿಬರ್ಟಿ' ಎಂಬ ಹೊಸ ಪತ್ರಿಕೆಗಳನ್ನು ಪ್ರಾರಂಭಿಸಿ ಸರಕಾರಕ್ಕೆ ಆಹ್ವಾನ ವಿತ್ತರು. ಇವರನ್ನು ಸರಕಾರವು ಬಂಧಿಸಿ

ವಿಚಾರಣೆ ನಡೆಸದೆ ಮಂಡಾಲೆಯಲ್ಲಿ ಇಟ್ಟಿತು. ಕ್ಷಯರೋಗದ ಬಾಧೆ ತೋರಲಾಗಿ ಇವರನ್ನು ಬಿಡುಗಡೆಮಾಡಿತು. 1928 ರಲ್ಲಿ ಸೈಮನ್ ಕಮಿಶನ್ನಿಗೆ ಜನತೆ ಬಹಿಷ್ಕಾರ ಹಾಕಿದಾಗ ಬಂಗಾಲದಲ್ಲಿ ಅವರನ್ನು ಯಾರೂ ಮಾತಾಡಿಸದಂತೆ ಸ್ವಯಂಸೇವಕರ ಸಂಘಟನೆಯನ್ನು ಸುಭಾಸರು ಮಾಡಿದರು.

1931 ರಲ್ಲಿ ಲಾಹೋರ ಕಾಂಗ್ರೆಸ್ಸಿನ ನಿರ್ಣಯಕ್ಕೆ ಅನುಸರಿಸಿ ದೇಶದ ತುಂಬೆಲ್ಲಾ ಜನೇವರಿ 26 ಕ್ಕೆ ಸ್ವಾತಂತ್ರ್ಯ ದಿನಾಚರಣೆಯು ಉತ್ಸಾಹದಿಂದ ನಡೆಯಿತು. ತರುಣ ಕ್ರಾಂತಿವೀರ ಭಗತಸಿಂಗನನ್ನು ಬ್ರಿಟಿಶ ಸರಕಾರವು ಗಲ್ಲಿಗೇರಿಸಿತು. ಆಗ ಮತ್ತೆ ಸುಭಾಸರು ತರುಣರ ನಾಯಕರಾಗಿ ನಾಡಿನಲ್ಲೆಲ್ಲ ಕ್ರಾಂತಿಯ ವಿಚಾರಗಳನ್ನು ಪಸರಿಸಿದರು. ಯುವಕ ಸಂಸ್ಥೆಗಳನ್ನು ಸಂಘಟಿಸಿದರು. ಮತ್ತೆ ಸೆರೆಮನೆ, ಮತ್ತೆ ಕ್ಷಯ ರೋಗ ಬಾಧೆ ಇದು ನಿತ್ಯ ಜೀವನಕ್ರಮವೆನಿಸಿತು. ಆರೋಗ್ಯ ಸುಧಾರಿಸ ಲೆಂದು 2-3 ಸಲ ಯುರೋಪಿಗೆ ಹೋಗಿಬಂದರು. ಒಮ್ಮೆ ಸರಕಾರವೇ ಅವರನ್ನು ಸ್ವಿತ್ಝರ್ಲಂಡಿಗೆ ಕಳಿಸಿತ್ತು.

1838-39 ಹರಿಪುರ ಮತ್ತು ತ್ರಿಪುರಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ತ್ರಿಪುರಿಯ ಅಧಿವೇಶನದ ಕಾಲಕ್ಕೆ ಮಾತ್ರ ಮಹಾತ್ಮರಿಗೂ ಸುಭಾಸರಿಗೂ ಭಿನ್ನ ಮತವಾಗಿ ಸುಭಾಸರು ಕಾಂಗ್ರೆಸ್ಸಿಗೆ ಎರವಾಗಬೇಕಾ ಯಿತು. ತೇಜಸ್ವಿಗಳಾದ ಅವರು ತಮ್ಮದೇ ಆದ ದಾರಿಯನ್ನು ತುಳಿದರು.

**ಅಝಾದ ಹಿಂದ ನಾಯಕ ಸುಭಾಸ**

1940ರಲ್ಲಿ ತಮ್ಮ ಮನೆಯಲ್ಲಿಯೇ ಸ್ಥಾನ ಬದ್ಧರಾದ ಸುಭಾಸರು ಒಮ್ಮಿಂದೊಮ್ಮೆ ಕಾಣೆಯಾದರು. ಆಗ 2ನೇ ಜಾಗತಿಕ ಯುದ್ಧ ನಡೆ ದಿತ್ತು. ಬ್ರಿಟಿಷರ ಹಗೆಗಳಾದ ಜರ್ಮನಿ ಜಪಾನ ದೇಶಗಳಿಗೆ ಗುಪ್ತ ವೇಷದಿಂದ ಅನೇಕ ಕಷ್ಟನಷ್ಟಗಳನ್ನು ಅನುಭವಿಸುತ್ತ ಪಾರಾಗಿ ಹೋದ

ವುರಾಣಕತೆಗಳಿಗಿಂತಲೂ ಅದ್ಭುತರಮ್ಯವಾಗಿದೆ. ಹಿಟ್ಲರನೊಡನೆ ಚರ್ಚಿಸಿ ಜಪಾನದೊಡನೆ ಸಂಧಾನ ನಡಿಸಿ 'ಅಝಾದ ಹಿಂದ ಸರಕಾರ' ವನ್ನು ಸ್ಥಾಪಿಸಿದರು. ಸುಭಾಸರಿಗೆ ವಿದೇಶಗಳಲ್ಲಿದ್ದ ಭಾರತೀಯರು ಲಕ್ಷ ಗಟ್ಲೆ ಹಣ ಕೊಟ್ಟರು. ಸುಭಾಸರು ಭಾರತಕ್ಕೆ ಬರುವವರಿದ್ದರು. ಸಿಂಗಾ ಪುರದ ಮೇಲೆ ಆಂಗ್ಲರ ದಾಳಿ ನಡೆದು ಅವರ ಸೈನ್ಯ ಸೆರೆಯಲ್ಲಿ ಸಿಕ್ಕಿತು. ವೀರ ಸುಭಾಸರು ಟೋಕಿಯೋಕ್ಕೆ ಮರಳುವಾಗ ವಿಮಾನ ಅಪಘಾತದ ಮೂಲಕ

ಒಮ್ಮಿಂದೊಮ್ಮೆ ಇಹಲೋಕದಿಂದ ಕಣ್ಮರೆಯಾದರು. ಭಾರತದ ಇಂದಿನ ಸ್ವಾತಂತ್ರ್ಯಕ್ಕೆ ಸುಭಾಸರ ತ್ಯಾಗಬಲಿದಾನಗಳೂ ಕಾರಣೀಭೂತವಾಗಿವೆ.

ಅಭ್ಯಸನಗಳು

1. ಐ. ಸಿ. ಎಸ್. ಪಾಸಾದ ಸುಭಾಸರು ಗಾಂಧಿ ಚಳುವಳಿಯಲ್ಲಿ ಏಕೆ ಧುಮುಕಿದರು ?
2. ಬಂಗಾಲದಲ್ಲಿ ಸುಭಾಸರ ರಾಜಕೀಯ ಗುರು ಯಾರು ?
3. 'ಅಝಾದ ಹಿಂದ ಸರಕಾರ'ವನ್ನು ಸುಭಾಸರು ಹೇಗೆ ಸ್ಥಾಪಿಸಿದರು?

## 31. ಜವಾಹರಲಾಲ ನೆಹರು

ತಾಯಿ ತಂದೆಗಳು ತೊಟ್ಟಿಲಲ್ಲಿ ಇಟ್ಟ ಹೆಸರಿಗೆ ತಕ್ಕಂತೆ ಹೆಸರಾಗುವವರು ತೀರ ವಿರಳ. ಜವಾಹರರು ಅದಕ್ಕೆ ಅಪವಾದ. ಜವಾಹರ ಅಂದರೆ ರತ್ನ. ಗಾಂಧೀಜಿ ಅಂದಂತೆ ಅವರು ನಿಜವಾಗಿಯೂ 'ಭಾರತ ರತ್ನ 'ವಿಶ್ವ ರತ್ನ'

ನೆಹರೂ ಕುಟುಂಬ


ಜವಾಹರಲಾಲ ನೆಹರು

ಜವಾಹರರು 14-11-1889 ಕ್ಕೆ ಅಲಹಾಬಾದದ ಆಗರ್ಭ ಶ್ರೀಮಂತ ನೆಹರೂ ಮನೆತನದಲ್ಲಿ ಹುಟ್ಟಿದರು. ತಂದೆ ಗಾಂಧೀಜಿಯ ಬಲಗೈಯಾಗಿದ್ದ ಮೋತಿಲಾಲ ನೆಹರೂ; ತಾಯಿ ಸ್ವರೂಪರಾಣಿ. ಇಂಗ್ಲಿಷ ಸಂಸ್ಕೃತಿಯಲ್ಲಿ ನೆಹರೂ ಕುಟುಂಬವೇ ಬೆಳೆದು ಬಂದಿದೆ. ಅದರಂತೆ ಜವಾಹರರೂ ಸರಿ 12 ವರ್ಷ ಮನೆಯಲ್ಲೇ ವಿದ್ಯಾಭ್ಯಾಸ ನಡೆದು 1905 ಕ್ಕೆ ಉಚ್ಚ ಶಿಕ್ಷಣಕ್ಕಾಗಿ ಇಂಗ್ಲಂಡಿಗೆ ಹೋಗಿ ಹ್ಯಾರೋ ಶಾಲೆ ಸೇರಿ ಮೆಟ್ರಿಕ್ ಆದರು. ಕೆಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಎಂ. ಎ. ಆದರು. ಬ್ಯಾರಿಸ್ಟರ್ ಪದವಿಯನ್ನೂ ಪಡೆದು ಭಾರತಕ್ಕೆ ಹಿಂತಿರುಗಿದರು

ತಂದೆಯೊಡನೆ ಅಲಹಾಬಾದದಲ್ಲಿ ವಕೀಲಿ ಆರಂಭಿಸಿದರು. ಕೆಲ ಕಾಲ ಅಲಹಾಬಾದ ನಗರಸಭೆಯ ಅಧ್ಯಕ್ಷರಾದರು. ಅಷ್ಟರಲ್ಲಿ ಲೋಕ ಮಾನ್ಯರ ಹೋಂ ರೂಲ್ ( ಸ್ವರಾಜ್ಯ ) ಚಳುವಳಿ ಮೊದಲಾಗಿತ್ತು. ಅದರಲ್ಲಿ ಸೇರಿ ಕಾರ್ಯ ಮಾಡಿದರು.

## ಗಾಂಧಿಜಿಯ ಮಾನಸಪುತ್ರ ನೆಹರು

ಮುಂದೆ 1921 ಕ್ಕೆ ಗಾಂಧಿಯುಗ ಬಂತು. ಗುರು ಗಾಂಧಿಯ ಅಡಿಯಲ್ಲಿ ಅಡಿಯಿಟ್ಟು ಜವಾಹರರು ಮುಂದವರಿದರು. ಇಡೀ ನೆಹರೂ ಕುಟುಂಬವೇ ಕಾಂಗ್ರೆಸ್ಸಿನ ಪ್ರಾಣಸ್ವರೂಪವಾಯಿತು. ಗಾಂಧಿಜಿಯ ಚರಿತ್ರೆಯಲ್ಲಿ ಬರುವ ಎಲ್ಲ ಚಳುವಳಿಗಳಲ್ಲಿ ತರುಣ ನೆಹರು ಭಾಗವಹಿಸಿ ಭಾರತದ ಕಣ್ಮಣಿಯಾದರು. ಸೆರೆಮನೆ ವಾಸವೋ ಎಷ್ಟೋ ಸಲ. ಸೆರೆಮನೆ ಸೇರಿ ಬಿಡುಗಡೆ ಹೊಂದಿದಾಗಲೆಲ್ಲ ಒಂದೊಂದು ಇತಿಹಾಸ ಗ್ರಂಥ ಹೊರ ಬರುತ್ತಿತ್ತು. 1919ರಷ್ಟರಲ್ಲಿಯೇ ಅ. ಭಾ. ಕಾಂಗ್ರೆಸ್ ಸಂಸ್ಥೆಯ ಕಾರ್ಯದರ್ಶಿಯಾಗಿದ್ದರು. ಮುಂದೆ ಅದೇ ವರ್ಷ ಡಿಸೆಂಬರದಲ್ಲಿ ಲಾಹೋರ ಅಧಿವೇಶನಕ್ಕೆ ಅಧ್ಯಕ್ಷರಾಗಿ ತಂದೆಯಿಂದ ಅಧಿಕಾರ ವಹಿಸಿ ಕೊಂಡರು. 1936—37ರಲ್ಲಿ ಮತ್ತೆ ಅಧ್ಯಕ್ಷರಾದರು. ಕಾಂಗ್ರೆಸ್ ಸಂಸ್ಥೆ ಭಾರತದ 9 ಪ್ರಾಂತಗಳಲ್ಲಿ ಮಂತ್ರಿಮಂಡಲ ಸ್ಥಾಪಿಸುವಷ್ಟು ಬಲಿಷ್ಠ ಸಂಸ್ಥೆಯನ್ನಾಗಿ ಮಾಡಿದರು. ಕೊನೆಯಲ್ಲಿ ಚಲೇಜಾವ ಚಳುವಳಿಯ ಫಲವಾಗಿ ಭಾರತವು ಸ್ವತಂತ್ರವಾದಾಗ ಪ್ರಥಮ ಮುಖ್ಯ ಪ್ರಧಾನರಾದರು.

## ಜಗತ್ತಿನ ಶಾಂತಿದೂತ

ಇಂದಿಗೂ ಆ ಸ್ಥಾನದಲ್ಲಿದ್ದು, ಭಾರತಕ್ಕೆ ಅಂತರ್‌ರಾಷ್ಟ್ರೀಯ ಮಹತ್ವವನ್ನು ತಂದು ಕೊಟ್ಟಿದ್ದಾರೆ. ಅವರ ‘ ಪಂಚಶೀಲ ’ ತತ್ವಗಳು ಜಗತ್ತಿಗೆ ಮಾರ್ಗದರ್ಶಕವಾಗಿವೆ.

ಅವರು ಒಳ್ಳೇ ಪ್ರಭಾವ ಶಾಲಿ ಲೇಖಕರು, ವಾಗ್ಮಿಗಳು, ಆತ್ಮ ಚರಿತ್ರೆ, ಭಾರತ ದರ್ಶನ, ಜಗಚ್ಚರಿತ್ರೆಯ ಚಿತ್ರಗಳು (ಮಗಳು ಇಂದಿರಾಗೆ ಬರೆದ ಓಲೆಗಳು), ಭಾಷಣ ಸಂಗ್ರಹ ಮೊದಲಾದ ಗ್ರಂಥಗಳು ಜಗತ್ತಿನ ಸಾಹಿತ್ಯದಲ್ಲಿ ಸ್ಥಾನ ಪಡೆದಿವೆ.

### ಅಭ್ಯಸನಗಳು

1. ನೆಹರೂ ಕುಟುಂಬದ ಪರಿಚಯುವನ್ನು 15 ಸಾಲುಗಳಲ್ಲಿ ಬರೆಯಿರಿ.
2. ಜವಾಹರರು ‘ತಂದೆಯಂತೆ ಮಗ’ ಎಂಬುದನ್ನು ಹೇಗೆ ಸಿದ್ಧಮಾಡಿ ಕೊಟ್ಟಿದ್ದಾರೆ?
3. ಜವಾಹರರು ಬರೆದ ಗ್ರಂಥಗಳು ಯಾವವು ?

## 32. ನಾಲ್ಮಡಿ ಕೃಷ್ಣರಾಜ ಒಡೆಯರು

" ಚಿನ್ನದ ನಾಡದು ಮೈಸೂರು | ಗಂಧದ ಗುಡಿಯದು ಮೈಸೂರು |
ವೀಣೆಯ ಬೆಡಗದು ಮೈಸೂರು | ನಾಲ್ಮಡಿ ಕೃಷ್ಣನ ಮೈಸೂರು "

ಎಂದು ಕವಿ ' ಶ್ರೀ ' ಯವರು ಹಾಡಿ ಹರಿಸಿದ್ದಾರೆ. ಈ ಹಾಡಿಗೆ ಸ್ಫೂರ್ತಿ ಕೊಟ್ಟ ದೊರೆಗಳೇ ನಾಲ್ಮಡಿ ಕೃಷ್ಣರಾಜ ಒಡೆಯರು.

### ಬಾಲ್ಯ ಮತ್ತು ಪಟ್ಟಾಭಿಷೇಕ

ತಂದೆ ಚಾಮರಾಜ ಒಡೆಯರು ದಿವಂಗತರಾದಾಗ ಈ ಕೃಷ್ಣರಾಜರು ಹತ್ತು ವರುಷದ ಹಸುಳರು. ಅವರ ತಾಯಿ ರಾಜ್ಯ ರಕ್ಷಕರಾಗಿ ಆಡಳಿತದ ಹೊಣೆ ಹೊತ್ತರು. 1902ರಲ್ಲಿ ಕೃಷ್ಣರಾಜರು " ಕರ್ನಾಟಕ ರತ್ನ ಸಿಂಹಾಸನಾಧೀಶ್ವರ "ರಾದರು.

### ಕೃಷ್ಣರಾಜರ ಆಡಳಿತ, ದಕ್ಷ ದಿವಾಣರ ನೇಮಣೂಕಿ

ಈ ಪ್ರಭುಗಳು ದಕ್ಷ ದಿವಾಣರನ್ನೇ ನೇಮಿಸಿಕೊಂಡದು ಅವರ ರಾಜ್ಯ ಕಾರ್ಯ ಚಾತುರ್ಯವನ್ನು ಸೂಚಿಸುತ್ತದೆ. ಧರ್ಮಿಷ್ಠರೂ ದಯಾಳುಗಳೂ ಆದ ಇವರ ರಾಜ್ಯವು ಗಾಂಧಿಜಿಯಿಂದ ' ರಾಮರಾಜ್ಯ 'ವೆಂದು ಹೊಗಳಿಸಿಕೊಂಡಿತು. ಪುಣ್ಯ ಸ್ಮರಣೀಯರಾದ ಶೇಷಾದ್ರಿ ಅಯ್ಯರ್ ಮಿರ್ಝಾ ಇಸ್ಮಾಯಿಲ್ ಮತ್ತು ಶತಾಯುಷಿಗಳಾಗಿ ನಮ್ಮ ಮಧ್ಯದಲ್ಲಿದ್ದ ವಿಶ್ವೇಶ್ವರಯ್ಯನವರು ದಿವಾಣರಾಗಿ ಮೈಸೂರನ್ನು 'ಮಾದರಿಯ ಮೈಸೂರ'ನ್ನಾಗಿ ಮಾಡಿದ್ದಾರೆ. ಇವರೆಲ್ಲರೂ ಇಂದಿನ ಮೈಸೂರಿನ ಜೀವ ಶಿಲ್ಪಿಗಳು

ಶೇಷಾದ್ರಿಯವರು ಮೈಸೂರು ಹೈಕೋರ್ಟನ್ನು ಸ್ಥಾಪಿಸಿದರು. ಕೋಲಾರದ ಚಿನ್ನದ ಗಣಿಗಳು ಈ ಕಾಲದಲ್ಲಿಯೇ ಆರಂಭವಾದವು.


ನಾಲ್ಮಡಿ ಕೃಷ್ಣರಾಜ ಒಡೆಯರು

ವ್ಯವಸಾಯ-ಆರೋಗ್ಯ—ಪ್ರಾಚ್ಯವಸ್ತು-ಮುಜರಾಯಿ-ಅಬ್ಕಾರಿ ಇಲಾಖೆಗಳು ಉದಯವಾಗಿ ಆಡಳಿತವನ್ನು ಮೇಲ್ಮಟ್ಟಕ್ಕೆ ತಂದವು. ರೇಲ್ವೆ ಮಾರ್ಗಗಳು ವಿಸ್ತಾರಗೊಂಡವು— ವಿಶ್ವೇಶ್ವರಯ್ಯನವರ ದಿವಾಣಗಿರಿಯಂತೂ ಚಿನ್ನದ ಅಕ್ಷರಗಳಿಂದ ಬರೆದಿಡಲು ಯೋಗ್ಯವಾಗಿದೆ. ಕನ್ನಂಬಾಡಿ, ಹೊಸ ವಿಶ್ವವಿದ್ಯಾಲಯ, ಒಂದೇ ಎರಡೇ ! ಹೆಚ್ಚಿನ ವಿವರಗಳನ್ನು ಅವರ ಪ್ರತ್ಯೇಕ ಚರಿತ್ರೆಯಲ್ಲಿ ಇದೇ ಪುಸ್ತಕದಲ್ಲಿ ಬೇರೆಡೆಗೆ ಓದುವಿರಿ— ಸರ್ ಮಿರ್ಝಾ ಇಸ್ಮಾಯಿಲರ ದಿವಾಣಗಿರಿಯ ಕಾಲಕ್ಕೆ ಉಕ್ಕು-ಸಕ್ಕರೆ-ಸಿಮೆಂಟ-ಬಟ್ಟೆ-ಗಂಧದೆಣ್ಣೆಗಳ ಕಾರಖಾನೆಗಳು ತಲೆಯೆತ್ತಿದವು. ನಗರಗಳು ಸುಂದರವಾದವು. ರಾಜ್ಯದ ಆದಾಯ ಹೆಚ್ಚಿತು.

ಹೀಗೆ ಕೃಷ್ಣರಾಜರ ಆಳಿಕೆಯು ಚರಿತ್ರೆಯಲ್ಲಿ ಘನತೆಯಿಂದ ಕೂಡಿದುದಾಗಿದೆ. ರಾಜರು ಅನೇಕ ಯಾತ್ರೆಗಳನ್ನು ಮಾಡಿ ಪುಣ್ಯಕ್ಷೇತ್ರಗಳಲ್ಲಿ ಅನಂತ ದಾನಧರ್ಮಗಳನ್ನು ಮಾಡಿದರು. ಇವರು ಕ್ರಿ. ವ. 1941 ರಲ್ಲಿ ದಿವಂಗತರಾದರು. ಅವರ ತರುವಾಯ ಶ್ರೀ ಜಯಚಾಮರಾಜರು ಒಡೆಯರಾದರು.

### ಅಭ್ಯಸನಗಳು

1. ಕೃಷ್ಣರಾಜರು ಎಂದು ಪಟ್ಟಕ್ಕೆ ಬಂದರು ? ಅವರ ಬಾಲ್ಯದಲ್ಲಿ ಯಾರು ಆಳಿದರು ?
2. ಕೃಷ್ಣರಾಜರು ನೇಮಿಸಿಕೊಂಡ ಮೂವರು ಮುಖ್ಯದಿವಾಣರು ಯಾರು ?
3. ಆಯಾ ದಿವಾಣರ ಕಾಲದ ಮುಖ್ಯ ಘಟನೆಗಳು ಯಾವವು ?

## 33. ಡೆಪ್ಯೂಟಿ ಚೆನ್ನಬಸವಪ್ಪನವರು

ಇಂದಿಗೆ ನೂರು ವರುಷಗಳ ಹಿಂದೆ ಈಗ ಮುಂಬಯಿ ಕರ್ನಾಟಕವೆಂದು ಕರೆಯಲ್ಪಡುವ ಪ್ರದೇಶಕ್ಕೆ 'ದಕ್ಷಿಣ ಮಹಾರಾಷ್ಟ್ರ' ಎಂಬ ಹೆಸರು ರೂಢಿಯಲ್ಲಿತ್ತು; ಆಗ ತಾನೆ ಪೇಶ್ವೆಯರಿಂದ ಈ ನಾಡು ಆಂಗ್ಲರ ಒಡೆತನಕ್ಕೆ ಸೇರಿತ್ತು. ಪೇಶ್ವೆ ರಾಜ್ಯದ ಪ್ರಭಾವದಿಂದ, ಇಲ್ಲಿಯ ಜನತೆ ಮನೆಯಲ್ಲಿ ಕನ್ನಡ ಮಾತನಾಡುತ್ತಿದ್ದರೂ ಶಾಲೆಯಲ್ಲಿ ಮರಾಠಿ ಕಲಿಯುತ್ತಿದ್ದರು. ಕಚೇರಿಯಲ್ಲಿ ಮರಾಠಿಯಲ್ಲೇ ವ್ಯವಹಾರ ಸಾಗುತ್ತಿತ್ತು. ಹೀಗಿತ್ತು ಅಂದಿನ ಪರಿಸ್ಥಿತಿ. ಇದನ್ನು ಬದಲಿಸಿ ಮತ್ತೆ ಕನ್ನಡಕ್ಕೆ ರಾಜಮರ್ಯಾದೆಯನ್ನು ಒದಗಿಸಿ ಕೊಟ್ಟವರೇ ಡೆಪ್ಯೂಟಿ ಚೆನ್ನಬಸವಪ್ಪನವರು.

## ಬಾಲ್ಯ ಮತ್ತು ಶಿಕ್ಷಣ



ಡೆಪ್ಯೂಟಿ ಚನ್ನಬಸವಪ್ಪನವರು

ಧಾರವಾಡದಲ್ಲಿ ಶ್ರೀ ಬಸವ ಲಿಂಗಪ್ಪನವರು ಮತ್ತು ತಿಪ್ಪವ್ವ ಎಂಬ ದಂಪತಿಗಳ ಹೊಟ್ಟೆಯಲ್ಲಿ 1-11-1833ಕ್ಕೆ ಬಾಲ ಚೆನ್ನ ಬಸವಪ್ಪನ ಜನನವಾಯಿತು. ಮಗು 6 ತಿಂಗಳದ್ದು ಇದ್ದಾಗ ತಂದೆ ತೀರಿದರು. ತಾಯಿ ಎಲ್ಲ ಎಡರುಗಳನ್ನು ಎದುರಿಸಿ ಮಗನನ್ನು ವಿದ್ಯಾವಂತನನ್ನಾಗಿ ಮಾಡಿದಳು. ಅಯ್ಯನವರ ಒಂದು ಮಠದ ಸಾಲೆಯಲ್ಲಿ ಕನ್ನಡ ವಿದ್ಯಾಭ್ಯಾಸ ಮುಗಿಯಿತು. ಆಗ ಮೆಕಾಲೆ ಸಾಹೇಬನ ಪ್ರಣ್ಯಾದಿಂದ ಇಂಗ್ಲಿಷ ವಿದ್ಯಾಭ್ಯಾಸ ಮುಂದಕ್ಕೆಬರತೊಡಗಿತ್ತು. ಇಂಗ್ಲಿಷ ಕಲಿಯುವದೆಂದರೆ ಆಗಿನಕಾಲದಲ್ಲಿ ಪುಣೆಗೆ ಹೋಗ ಬೇಕಾಗುತ್ತಿತ್ತು; ಬಾಲಕ ಚೆನ್ನ ಬಸವಪ್ಪನು ಸ್ವಾರ್ಥರ ಮಾಡಿ3-10-0 ಹಣ ತಾಯಿಯ ಪೆಟ್ಟಿಗೆಯೊಳಗಿಂದ ತೆಗೆದುಕೊಂಡು ನಡೆಯುತ್ತಲೇ ಪುಣೆಗೆ ಹೊರಟು ತಲುಪಿ ಕಷ್ಟಪಟ್ಟು ವಿದ್ಯೆ ಕಲಿತ. ಶ್ರೀ ಗೋವಿಂದರಾವ ಮೇಹಂದಳೇಕರ ಎಂಬವರು ಬಹಳ ನೆರವಾದರು.

1855ಕ್ಕೆ ಮೆಟ್ರಿಕ್ ಪಾಸಾಗಿ ಎಂಜನಿಯರಿಂಗ ಕಾಲೇಜಿನಲ್ಲಿ ಸೇರಿ ಮೇಲು ನಂಬರು ಪಡೆದು ಉತ್ತೀರ್ಣರಾದರು. ವಿಲಾಯಿತಿಗೆ ಕಳಿಸಲ್ಪಡುವ ವಿದ್ಯಾರ್ಥಿಗಳಲ್ಲಿ ಇವರ ಹೆಸರು ಬಂತು. ಆದರೆ ಸರಕಾರದ ಆ ವಿಚಾರ ಕಾರ್ಯಗತವಾಗದೇ ಅಲ್ಲಿಗೇ ನಿಂತಿತು.

## ಸರಕಾರಿ ನವಕರಿ ಮತ್ತು ಕನ್ನಡದ ಪುನರುಜ್ಜೀವನ

1856ರಲ್ಲಿ ಧಾರವಾಡದಲ್ಲಿ ಸ್ಥಾಪಿಸಲ್ಪಟ್ಟ ನಾರ್ಮಲ್ ಕ್ಲಾಸ ಎಂಬ ಹೆಸರಿನ ಸಂಸ್ಥೆಯ ಹೆಡ್ ಮಾಸ್ತರರೆಂದು ನೇಮಣೂಕಿಯಾಯಿತು. ಮುಂದೆ 1864ರಲ್ಲಿ ಬೆಳಗಾಂವಿಯ ಟ್ರೇನಿಂಗ ಸ್ಕೂಲಿನ ( ಈಗಿನ ಧಾರವಾಡ ಟ್ರೇನಿಂಗ ಕಾಲೇಜ ಮೂಲ ರೂಪದ ) ಪ್ರಥಮ ಪ್ರಿನ್ಸಿಪಾಲರಾದರು.

1866ರಲ್ಲಿ ಡೆಪ್ಯುಟಿ ಎಜ್ಯುಕೇಶನಲ್ ಇನ್ಸ್ಪೆಕ್ಟರರಾದರು. ಆಗ ಈ ವಿಭಾಗಕ್ಕೆ ರಸೆಲ್‌ರೆಂಬವರು ಇನ್ಸ್ಪೆಕ್ಟರರಿದ್ದರು. ಈ ಸಾಹೇಬರಿಗೆ ಇಲ್ಲಿಯ ವಸ್ತುಸ್ಥಿತಿಯನ್ನೆಲ್ಲ ತಿಳಿಸಿಹೇಳಿ ಈ ಭಾಗದಲ್ಲೆಲ್ಲ ಕನ್ನಡ ಶಾಲೆಗಳು ಪ್ರಾರಂಭವಾಗುವಂತೆ ಬಹು ಕಷ್ಟಪಟ್ಟರು. 1855–56 ನೆಯ ವರ್ಷದಲ್ಲಿ ಬೆಳಗಾಂವಿ, ವಿಜಾಪುರ, ಧಾರವಾಡ ಜಿಲ್ಹೆಗಳಲ್ಲಿ ಕನ್ನಡ ಶಾಲೆಗಳ ಸಂಖ್ಯೆ ಅನುಕ್ರಮವಾಗಿ 13,9,12 ಇತ್ತು. ಅದು ಚೆನ್ನಬಸವಪ್ಪ ನವರ ಮತ್ತು ರಸೆಲ್ಲರ ಸತತ ಪ್ರಯತ್ನದ ಮೂಲಕ 1888ರಲ್ಲಿ ಅನುಕ್ರಮ ವಾಗಿ 177,150,341 ಏರಿತು. ಧಾರವಾಡ ಜಿಲ್ಹೆ ಕಳಸವಿಟ್ಟಿತು; ಏಕೆಂದರೆ ಇದೇ ಜಿಲ್ಹೆಯಲ್ಲಿ ಚೆನ್ನಬಸವಪ್ಪನವರು ಡೆಪ್ಯೂಟಿಗಳಾಗಿದ್ದು ಪ್ರತಿ ಹಳ್ಳಿಗೂ ಹೋಗಿ ಜನರಲ್ಲಿ ಕನ್ನಡದ ಬಗೆಗೆ ಅಭಿರುಚಿ ಹುಟ್ಟಿಸಿದರು. ಮುಂದೆ ವೆಂಕಟ ರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತೂರಮರಿ ಮೊದಲಾದ ಲೇಖಕರಿಂದ ಪಠ್ಯಪುಸ್ತಕ ಬರೆಸಿದರು. ಕನ್ನಡ ಅಚ್ಚುಕೂಟದ ಮೊಳೆಗಳನ್ನು ತಯಾರಿಸಿ ಮುದ್ರಣಾಲಯಕ್ಕೆ ದಾರಿ ಮಾಡಿಕೊಟ್ಟರು. ಸಂನ್ಯಾಸಿಯ ಮದುವೆಗೆ ಜುಟ್ಟಜನಿವಾರ ಮೊದಲುಗೊಂಡು ಸಿದ್ಧತೆ ಯಾಯ್ತು. ಜನರಿಗೆಲ್ಲ ಕನ್ನಡದಲ್ಲಿ ಸಹಿ ಮಾಡಲು ತಿಳಿಹೇಳುವ ಚಳುವಳಿ ಹೂಡಿದರು. ನಿಘಂಟು ಬರೆಸಿದರು. ಕೊನೆಗೆ 4—1—81ಕ್ಕೆ ಕ್ಕೈಲಾಸವಾಸಿಗಳಾದರು.

### ಅಭ್ಯಸನಗಳು

1. ಮುಂಬಯಿ ಕರ್ನಾಟಕಕ್ಕೆ ' ದಕ್ಷಿಣ ಮಹಾರಾಷ್ಟ್ರ 'ಎಂಬಹೆಸರು ಏಕೆ ಇತ್ತು ?
2. ಡೆ ಚೆನ್ನಬಸವಪ್ಪನವರು ಕನ್ನಡ ಸಾಲೆ ಸ್ಥಾಪಿಸಲು ಹೇಗೆ ಕಷ್ಟಪಟ್ಟರು ?
3. ಅವರ ಕಾರ್ಯದ ಪರಿಣಾಮದ ಬಗ್ಗೆ ನಿಮಗೇನು ಗೊತ್ತಿದೆ ?

## 34. ಶ್ರೀ ವಿಶ್ವೇಶ್ವರಯ್ಯನವರು

### ವ್ಯಕ್ತಿತ್ವ

ತಾನು ನೆಟ್ಟ ಗಿಡಗಳ ಫಲ ತನಗೆ ಲಭಿಸದಿದ್ದರೂ ತನ್ನ ಮಕ್ಕಳಿಗೆ ಮರಿಮಕ್ಕಳಿಗೆ ಲಭಿಸುವದೆಂದು ದುಡಿದ ಮುದುಕನೊಬ್ಬನ ಕಥೆಯನ್ನು ನೀವು ಕೇಳುವಿರಿ. ಕೆಲವರು ಮಾತ್ರ ತಮ್ಮ ಜೀವಮಾನದಲ್ಲಿಯೇ ತಮ್ಮ ಶ್ರಮದ ಫಲವನ್ನು ಕಾಣುವರು. ತಾವು ಆರಂಭ ಮಾಡಿದ ಕೆಲಸಗಳು ಪರಿಣಾಮಕಾರಿಯಾಗಿ ದೇಶದ ಚಿತ್ರವನ್ನೇ ಬದಲಿಸಿದ ಕೀರ್ತಿಯು

ಶ್ರೀ ವಿಶ್ವೇಶ್ವರಯ್ಯನವರಿಗೆ ಸೇರಿದೆ. ನಾಡಿನಲ್ಲಿ ಅವರ ಹೆಸರು ತಿಳಿಯದವರಿಲ್ಲ. ಈಗ ಅವರ ವಯಸ್ಸು ನೂರಿನ ಅಂಚಿನಲ್ಲಿದೆ. ಆದರೂ ಅವರು ಸೋಲನ್ನು ಒಪ್ಪಿಲ್ಲ. ತೊಂಬತ್ತನೆಯ ವರ್ಷ ವರ್ಧಂತಿಯಲ್ಲಿ ಅವರು ನುಡಿದ ಮಾತು ಇಂದಿಗೂ ಸಲ್ಲುವುದು.



ವಿಶ್ವೇಶ್ವರಯ್ಯನವರು

"ನಾನು ಇನ್ನೂ ತಕ್ಕಷ್ಟು ಆರೋಗ್ಯವಾಗಿದ್ದೇನೆ ಮೈಕೈ ದೌರ್ಬಲ್ಯ ಬಹಳವೇನೂ ಬರಲಿಲ್ಲ. ಕನ್ನಡಕವಿಲ್ಲದೆ ಓದಬಲ್ಲೆ. ದಿನಾ ಕಷ್ಟವಿಲ್ಲದೆ ಎರಡು ನೂರು ಮೈಲು ನಡೆಯಬಲ್ಲೆ. ಬುದ್ಧಿ ಅರಳು-ಮರುಳಾಗಿಲ್ಲ. ಜೀವನವೆನ್ನುವದು ಒಂದು ಕಣಗಾಟ. ಆದರೆ ಅದರ ಎಡರುಗಳನ್ನು ದಾಟುವದಕ್ಕೆ ಮನುಷ್ಯನಿಗೆ ಶಕ್ತಿಯಿದೆ" ಈ ಶಕ್ತಿಯ ರಹಸ್ಯವೇನು ? ಕೆಲಸವನ್ನು ಎಡೆಬಿಡದೆ ಮಾಡುವದೇ ಅದು ಎಂದು ಈ ಮಹನೀಯರು ಹೇಳುತ್ತಾರೆ. ಈ ಕೆಲಸದಲ್ಲಿ ಕ್ರಮವಿರಬೇಕು. ಕೆಲಸವು ಜಾಣ್ಮೆಯಿಂದ ಕೂಡಿರಬೇಕು. ಕೊನೆಯದಾಗಿ ಕೆಲಸದ ಮುಖಾಂತರ ಲೋಕಕಲ್ಯಾಣವನ್ನು ಸಾಧಿಸಬೇಕು. ಇವು ವಿಶ್ವೇಶ್ವರಯ್ಯನವರ ಜೀವನ ಸೂತ್ರಗಳು. ಇವರ ಅಪೇಕ್ಷೆ ಕೇವಲ ಆರ್ಥಿಕ ಲಾಭ ಅಥವಾ ಅಧಿಕಾರ ಲಾಲಸೆಯಾಗಿರದೆ ಕೆಲಸ ಮಾಡಲು ಅವಕಾಶವನ್ನು ಬೇಡುವದೇ ಆಗಿದೆ. ಇಂದು ಮೈಸೂರು ಮಾದರಿಯ ನಾಡಾಗಿದೆ. ಸೌಂದರ್ಯದ ಬೀಡಾಗಿದೆ. ಅಭಿವೃದ್ಧಿಯ ತವರಾಗಿದೆ. ತನ್ನದೇ ಆದ ಸಂಸ್ಕೃತಿಯ ನೆಲೆಯಾಗಿದೆ, ಔದ್ಯೋಗಿಕ ಕೇಂದ್ರವಾಗಿದೆ. ಭಾರತ ಒಕ್ಕೂಟದಲ್ಲಿ ಹೊಳೆಯುವ ಮಣಿಯಾಗಿದೆ. ಈ ಸರ್ವತೋಮುಖ ಪ್ರಗತಿಯನ್ನು ಸಾಧಿಸಲು ವಿಶ್ವೇಶ್ವರಯ್ಯನವರು ಅನೇಕ ರೀತಿಯಲ್ಲಿ ಕಾರಣೀಭೂತರಾದರು. ಮೈಸೂರ ಭಾಗ್ಯಶಿಲ್ಪಿಗಳೇ ಅವರು.

## ಚರಿತ್ರೆಯ ಮುಖ್ಯ ಘಟನೆಗಳು

ಶ್ರೀ ವಿಶ್ವೇಶ್ವರಯ್ಯನವರು ಸಪ್ಟಂಬರ 15, 1861 ರಲ್ಲಿ ಜನಿಸಿದರು. 1881 ರಲ್ಲಿ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಮುಂದೆ ಮುಂಬಯಿ ವಿಶ್ವವಿದ್ಯಾಲಯದ ಎಂಜನಿಯರ್ ಡಿಗ್ರಿಯನ್ನು ಪಡೆದರು. ಮರುವರುಷವೇ ಮುಂಬೈ ಸರಕಾರದಲ್ಲಿ ಅಸಿಸ್ಟೆಂಟ ಎಂಜನಿಯರಾಗಿ ನೌಕರಿ ಸೇರಿದರು. ಆ ತರುವಾಯ ಒಂದೇ ಒಂದು ವರ್ಷದಲ್ಲಿ ಅಸಿಸ್ಟೆಂಟ ಎಂಜನಿಯರ್ ಶ್ರೇಣಿಯಲ್ಲಿ ಮೊದಲನೇ ಹಂತಕ್ಕೆ ಏರಿದರು. 1898 ರಲ್ಲಿ ವಿಶ್ವೇಶ್ವರಯ್ಯನವರು ಜಪಾನ ಪ್ರವಾಸವನ್ನು ಕೈಕೊಂಡರು. ಅಲ್ಲಿಂದ ಮರಳಿ ಬಂದಮೇಲೆ ತಮ್ಮ ಇಲಾಖೆಯಲ್ಲಿ ಎರಡು ಮೂರು ಯಶಸ್ವಿ ಪ್ರಯೋಗಗಳನ್ನು ಮಾಡಿ ಪ್ರಖ್ಯಾತ ರಾದರು. 1907 ರಲ್ಲಿ ಮುಂಬೈ ಸರಕಾರದಿಂದ ಬಿಡುಗಡೆ ಪಡೆದು ಪುನಃ ವಿದೇಶ ಪ್ರಯಾಣ ಮಾಡಿದರು. ಇಟಲಿ, ಇಂಗ್ಲಂಡ, ಅಮೇರಿಕದ ಸಂಯುಕ್ತ ರಾಷ್ಟ್ರಗಳು, ಕ್ಯಾನಡಾ, ಸ್ವೀಡನ್, ರಶಿಯಾ ದೇಶಗಳನ್ನು ಸುತ್ತಿಬಂದರು. ಕೆಲವು ತಿಂಗಳು ಹೈದರಾಬಾದ ಸರಕಾರದ ಸ್ಪೇಷಲ್ ಎಂಜನೀಯರ ಕೆಲಸವನ್ನು ಮಾಡಿ ನವೆಂಬರ 1909 ರಲ್ಲಿ ಸಂಸ್ಥಾನದ ಚೀಫ್ ಎಂಜನೀಯರರಾಗಿ ಮೈಸೂರನ್ನು ಪ್ರವೇಶಿಸಿದರು. ಅವರ ಉಜ್ವಲ ಜೀವನದ ಅತ್ಯುಜ್ವಲ ಪ್ರಕರಣವು ಇಲ್ಲಿಂದ ಆರಂಭವಾಯಿತು.

## ಮೈಸೂರಿನ ದಿವಾಣಗಿರಿ

1912ರಲ್ಲಿ ವಿಶ್ವೇಶ್ವರಯ್ಯನವರು ಮೈಸೂರು ದಿವಾನರ ಅಧಿಕಾರ ವನ್ನು ವಹಿಸಿದರು. ದಿವಾನರಾಗಿ ಅವರು ಅನೇಕ ಹೊಸ ಸಂಸ್ಥೆಗಳನ್ನು ಸ್ಥಾಪಿಸಿ ದೇಶದ ಸ್ವರೂಪವನ್ನೇ ಮಾರ್ಪಡಿಸಿದರು. 'ಬಡವರ ಗುಡಿ ಸಲು ಮಾಯವಾಗಿ ಅಚ್ಚುಕಟ್ಟಾದ ಮನೆಗಳು ತಯಾರಾಗಬೇಕು. ಪ್ರತಿ ಊರಿಗೂ ಪಾಠಶಾಲೆಗಳನ್ನು ಒದಗಿಸಬೇಕು' ಎಂಬುದು ಇವರ ಗುರಿ. ಹಳ್ಳಿಗಳ ಸುಧಾರಣೆಯು ವಿಶ್ವೇಶ್ವರಯ್ಯನವರ ಲಕ್ಷ್ಯವನ್ನು ಸೆಳೆ ಯಿತು. ಹಳ್ಳಿ ಚೊಕ್ಕಟವಾಗಿರಬೇಕು. ಒಕ್ಕಲಿಗರಿಗೆ ಸೌಕರ್ಯ ಗಳನ್ನು ಮಾಡಿಕೊಟ್ಟರು. ಬಿತ್ತಲು ಒಳ್ಳೇ ಬೀಜ, ನೀರಿನ ಅನುಕೂಲತೆ, ಸಾರಿಗೆಯ ವ್ಯವಸ್ಥೆ, ದ್ರವ್ಯ ಸಹಾಯ ಎಲ್ಲವೂ ಕೂಡಿಬಂದವು. ಗ್ರಾಮ ಸಂಘವು ಏರ್ಪಾಡಾಯಿತು. ಸಾಧ್ಯವಿದ್ದೆಡೆ ವಾಚನಾಲಯಗಳು, ಸಂಚಾರ

ಪುಸ್ತಕ ಭಂಡಾರಗಳು ಶಿಕ್ಷಣ ಕಾರ್ಯವನ್ನು ಮುಂದುವರಿಸಿದವು. ನಗರ ಯೋಜನೆಯು ಅತಿ ತೀವ್ರವಾಗಿ ನಡೆಯಿತು. ಕೈಗಾರಿಕೆಗಳು ರಭಸದಿಂದ ಬೆಳೆದವು. ಕನ್ನಂಬಾಡಿ ಆಣೆಕಟ್ಟು ನೀರಾವರಿಗೆ ಕಾರಣವಾಯಿತು. ನಾಡು ನಂದನವನವೇ ಆಯಿತು. ಗಂಧದ ಎಣ್ಣೆಯು ದೇಶ ವಿದೇಶಗಳಲ್ಲಿ ಬಳಕೆಗೆ ಬಂದಿತು. ಭದ್ರಾವತಿಯಲ್ಲಿ ಕಬ್ಬಿಣದ ಕಾರ್ಖಾನೆಯು ಸ್ಥಾಪಿತವಾಯಿತು. ಮೈಸೂರ ಬ್ಯಾಂಕು, ಮೈಸೂರು ಚೇಂಬರ ಆಫ್ ಕಾಮರ್ಸಗಳ ದೇಶಾಂತರ ವಾಣಿಜ್ಯ ವ್ಯವಹಾರಗಳು ಸುಲಭವಾದವು. ವಿದ್ಯೆಯ ಮಹತ್ವವನ್ನು ಚೆನ್ನಾಗಿ ಮನಗಂಡ ವಿಶ್ವೇಶ್ವರಯ್ಯನವರು. 1915 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಅಸ್ತಿತ್ವದಲ್ಲಿ ತಂದರು. ಕನ್ನಡ ಸಾಹಿತ್ಯ ಪರಿಷತ್ತು ಜನ್ಮತಾಳಿತು. ಒಂದೇ ಎರಡೇ ?

ಇವರ ಅಸಾಧಾರಣ ಪ್ರತಿಭೆ, ನಿಸ್ವಾರ್ಥಸೇವೆಗಳ ಕುರುಹನ್ನು ನಾಡಿನ ಮೂಲೆ ಮೂಲೆಯಲ್ಲಿಯೂ ಕಾಣುತ್ತೀರಿ.

ಅಭ್ಯಸನಗಳು

1. ಶ್ರೀ ವಿಶ್ವೇಶ್ವರಯ್ಯನವರ ಜೀವನ ಸೂತ್ರಗಳು ಯಾವವು?
2. ಅವರ ಚರಿತ್ರೆಯೊಳಗಿನ ಮುಖ್ಯ ಘಟನೆಗಳಲ್ಲಿ ಮೂರನ್ನು ಹೇಳಿರಿ.
3. ಇಂದಿನ ಮೈಸೂರನ್ನು ಮಾದರಿಯ ಮೈಸೂರನ್ನಾಗಿ ಶ್ರೀ ವಿಶ್ವೇಶ್ವರಯ್ಯನವರು ಹೇಗೆ ಮಾರ್ಪಡಿಸಿದ್ದಾರೆ ?

## 35. ಕರ್ನಾಡ ಸದಾಶಿವರಾಯರು

ಕರ್ಣನ ತ್ಯಾಗ, ಕರ್ಣನ ಸತ್ಯಸಂಧತೆ ದೇಶದಲ್ಲಿ ಗಾದೆಯ ಮಾತಾಗಿವೆ. ನಮ್ಮ ಕಾಲದಲ್ಲಿಯೇ ಈ ಮಾತಿನೆ ಕರ್ನಾಡ ಸದಾಶಿವರಾಯರು ಉಜ್ವಲ ಉದಾಹರಣೆಯಾಗಿದ್ದಾರೆ.

### ರಾಯರ ರಾಜಕೀಯ ಜೀವನ

ಇವರು ದಕ್ಷಿಣ ಕನ್ನಡ ( ಮಂಗಳೂರು ) ಜಿಲ್ಲೆಯವರು. ಬಿ. ಎ., ಎಲ್.ಎಲ್. ಬಿ. ಪರೀಕ್ಷೆ ಪಾಸಾಗಿ ವಕೀಲರಾದರು. ಆಗರ್ಭ ಶ್ರೀಮಂತರು, ಲಕ್ಷಾಧೀಶರು. ಹಣವನ್ನೆಲ್ಲ ಸ್ವರಾಜ್ಯ ಚಳುವಳಿಗಾಗಿ ನೀರಿನಂತೆ ಧಾರೆ ಎರೆದರು. ಲೋಕಮಾನ್ಯರ ಕಾಲದ ಹೋಂ ರೂಲ್ ಚಳುವಳಿಯು, ಗಾಂಧಿಜಿಯವರ ಸಕಲ ಚಳುವಳಿಗಳ ಎಲ್ಲ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅವಿಶ್ರಾಂತವಾಗಿ ದುಡಿದು ಕರ್ನಾಟಕವನ್ನು ಗಾಂಧಿ ಪ್ರಾಂತವನ್ನಾಗಿ ಮಾಡಿದರು.

ಅಸಹಕಾರ ಚಳವಳಿಯ ಕಾಲದಲ್ಲಿ ರಾಷ್ಟ್ರೀಯ ಶಾಲೆಗಳನ್ನು ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಸ್ಥಾಪಿಸಿ ಲಕ್ಷಾಂತರ ರೂಪಾಯಿಗಳ ಸ್ವಂತ ವೆಚ್ಚದಿಂದ ಅವನ್ನೆಲ್ಲ ನಡಿಸಿದರು. ಬ್ರಿಟಿಶರ ಉಗ್ರ ದಬ್ಬಾಳಿಕೆಗೆ ಅವೆಲ್ಲ ತುತ್ತಾದವು. 1923ರಲ್ಲಿ ಮಹಾತ್ಮಾಜಿ ಮಂಗಳೂರಿಗೆ ಬಂದಾಗ ತಮ್ಮ ಕಾರ್ಯದ ಪ್ರತ್ಯಕ್ಷ ವರದಿಯನ್ನು ಅವರಿಗೆ ಒಪ್ಪಿಸಿದರು. 1924ರಲ್ಲಿ ಬೆಳಗಾಂವಿ ಅಧಿವೇಶನವು ಮಹಾತ್ಮರ ಅಧ್ಯಕ್ಷತೆಯಲ್ಲಿ ಪ್ರಥಮ ಸಲ ಕರ್ನಾಟಕದಲ್ಲಿ ನೆರೆದಾಗ ಅದನ್ನು ಯಶಸ್ವಿಗೊಳಿಸಲು ಅಹೋರಾತ್ರಿ ದುಡಿದರು. ಬೆಳಗಾಂವಿಗಾಗಿ ಮಂಗಳೂರಿನ ಹಕ್ಕನ್ನು ತ್ಯಾಗ ಮಾಡಿದರು. ಮಂಗಳೂರಲ್ಲೇ ಆ ಅಧಿವೇಶನ ನಡೆಯುವುದೆಂದು ತೀರ ನಿರ್ಧಾರವಾಗಿತ್ತು. 36 ವರ್ಷಗಳ ಬಳಿಕ ಬೆಂಗಳೂರಿನಲ್ಲಿ ಜರುಗಿದ 1960ರ ಕಾಂಗ್ರೆಸ ಅಧಿ ವೇಶನದ ನಗರಕ್ಕೆ 'ಸದಾಶಿವನಗರ'ವೆಂದು ಹೆಸರಿಡಲಾಯಿತು.



ಕಾರ್ನಾಡು ಸದಾಶಿವರಾಯರು

1937ರ ಮಹಾ ಚುನಾವಣೆಯಲ್ಲಿ ಪ್ರಜಾಪ್ರತಿನಿಧಿಯಾಗಿ ಆರಿಸಿ ಬರಬೇಕೆಂಬ ಆಸೆ ಈಡೇರಲಿಲ್ಲ; ಅಷ್ಟು ಹೊತ್ತಿಗೆ ಅವರು ನಿರ್ಧನರಾಗಿದ್ದರು. ತುಸು ದಿನಗಳಲ್ಲಿಯೇ ಫೈಜಪುರದಲ್ಲಿ ವೀರ ಜವಾಹರರ ಅಧ್ಯಕ್ಷತೆಯಲ್ಲಿ ಜರುಗಿದ ಅಧಿವೇಶನಕ್ಕೆ ಹೋಗಿ ಬೊಂಬಾಯಿಗೆ ಮರಳುವಾಗ ವಿಮಾನ ಅಪಘಾತಕ್ಕೆ ಒಳಗಾದರು. 1881ರಲ್ಲಿ ಜನಿಸಿದ ಇವರು ತಮ್ಮ 56 ನೆಯ ವಯಸ್ಸಿನಲ್ಲಿ ದಿವಂಗತರಾದರು.

## ಅಭ್ಯಸನಗಳು

1. ಸದಾಶಿವರಾಯರ ತ್ಯಾಗದ ಬಗ್ಗೆ 10 ಸಾಲು ಬರೆಯಿರಿ.
2. 'ಕರ್ನಾಟಕವನ್ನು ಗಾಂಧಿ ಪ್ರಾಂತವನ್ನಾಗಿ ರಾಯರು ಮಾಡಿದರು' ಎಂಬ ಮಾತನ್ನು ವಿವರಿಸಿರಿ.
3. ಕನ್ನಡಿಗರು ಅವರ ಹೆಸರನ್ನು ಇಂದಿಗೂ ಮರೆತಿಲ್ಲವೆಂಬುದು ಹೇಗೆ ?

# ವಿಭಾಗ ೩

## ಮೈಸೂರು ರಾಜ್ಯದ ಆಡಳಿತ

ಸ್ವತಂತ್ರ ಭಾರತದಲ್ಲಿ ಪ್ರಜಾಪ್ರಭುತ್ವವು ಜಾರಿಯಲ್ಲಿ ಬಂದಿದೆ. ಮೈಸೂರು ರಾಜ್ಯವು ಭಾರತದ 15 ರಾಜಕೀಯ ವಿಭಾಗಗಳಲ್ಲಿ ಒಂದೆಂಬುದನ್ನು ಈಗಾಗಲೇ ಅರಿತಿದ್ದೀರಿ. ಇಲ್ಲಿಯವರೆಗೆ ನೀವು ಓದಿದ ಸ್ವಾತಂತ್ರ್ಯವೀರರ ತ್ಯಾಗದ ಫಲವಾಗಿ ನಾವು ಸ್ವರಾಜ್ಯವನ್ನು ಪಡೆದಿದ್ದೇವೆ; ಅಂದರೆ ನಮ್ಮ ರಾಜ್ಯದ ಒಡೆಯರು ನಾವಾಗಿದ್ದೇವೆ. ದೇಶದ ಸರಕಾರವು ಹೀಗೆ ಹೀಗೆ ಇಂಥ ಇಂಥ ನಿಯಮಗಳ ಪ್ರಕಾರವೇ ಆಡಳಿತವನ್ನು ನಡಿಸಬೇಕೆಂದು ನಾಡಿನ ಹಿರಿಯರು ಗೊತ್ತುಪಡಿಸಿ ಬರೆದಿಟ್ಟಿದ್ದಾರೆ. ಅದಕ್ಕೆ 'ರಾಜ್ಯ ಘಟನೆ' ಎನ್ನುವರು. ಅದರ ಪ್ರಕಾರ ದಿಲ್ಲಿಯಲ್ಲಿ ಇಡೀ ಭಾರತಕ್ಕಾಗಿ ಕೇಂದ್ರ ಸರಕಾರವೂ ಬೆಂಗಳೂರು-ಹೈದರಾಬಾದುಗಳಂಥ ರಾಜಧಾನಿಗಳಲ್ಲಿ ತಮ್ಮ ತಮ್ಮ ರಾಜ್ಯದ ಮಟ್ಟಿಗೆ ರಾಜ್ಯ ಸರಕಾರಗಳೂ ಆಡಳಿತದ ಹೊಣೆ ಹೊತ್ತಿವೆ. ನಮ್ಮ 'ಮೈಸೂರ ರಾಜ್ಯ'ದ ಆಡಳಿತವು ಹೇಗೆ ನಡೆಯುತ್ತದೆಂಬುದನ್ನು ಈಗ ಕಲಿಯೋಣ.

**ಮೈಸೂರು ಸರಕಾರ**

'ಮೈಸೂರು ಸರಕಾರ'ವೆಂಬ ಆಡಳಿತದ ಸಂಸ್ಥೆಯು ಮೈಸೂರು ರಾಜ್ಯವನ್ನು ಆಳುತ್ತದೆ. ಈ ಸರಕಾರದಲ್ಲಿ ಮೂರು ವಿಭಾಗಗಳನ್ನು ಅನುಕೂಲತೆಗಾಗಿ ಮಾಡಿಕೊಂಡು ಅದರ ಪರಿಚಯವನ್ನು ಮಾಡಿಕೊಳ್ಳೋಣ.

ರಾಜ್ಯಪಾಲ

ಮಂತ್ರಿಮಂಡಲ

ವಿಧಾನ ಸಭೆ ವಿಧಾನ ಪರಿಷತ್ತು

**ರಾಜ್ಯಪಾಲರು**

ಪ್ರತಿ ರಾಜ್ಯಕ್ಕೆ ಇರುವಂತೆ ನಮ್ಮ ನವಮೈಸೂರ ರಾಜ್ಯಕ್ಕೂ ಒಬ್ಬ ರಾಜ್ಯಪಾಲರಿದ್ದಾರೆ. ಸದ್ಯದ ರಾಜ್ಯಪಾಲರು ಯಾರೆಂದರೆ ಹಳೆಯ



ಜಯಚಾಮರಾಜ ಒಡೆಯರ

ಮೈಸೂರ ಸಂಸ್ಥಾನಕ್ಕೆ ಯಾರು ರಾಜರಾಗಿ ಮೊನ್ನೆ ಮೊನ್ನಿನ ವರೆಗೂ ಇದ್ದರೋ ಅವರೇ ಇಂದು ಪ್ರಜೆಗಳನ್ನು ರಾಜ್ಯಪಾಲರಾಗಿ ರಕ್ಷಿಸುತ್ತಾರೆ. ಇವರೇ ಮೈಸೂರ ಸರಕಾರದ ಹಿರಿಯ ಅಧಿಕಾರಿಗಳು. ಇವರನ್ನು ಭಾರತದ ರಾಷ್ಟ್ರಾಧ್ಯಕ್ಷ ಅಥವಾ ರಾಷ್ಟ್ರಪತಿಗಳು ಸಾಮಾನ್ಯವಾಗಿ 5 ವರ್ಷಗಳ ವರೆಗೆ ನೇಮಿಸುತ್ತಾರೆ. 'ವಿಧಾನ ಸಭೆ' ಮತ್ತು 'ವಿಧಾನ ಪರಿಷತ್ತು'ಗಳೆಂಬ ಪ್ರಜಾಪ್ರತಿನಿಧಿಗಳ ಶಾಸನ ಸಭೆಗಳ ಅಧಿವೇಶನಗಳನ್ನು ಬೆಂಗಳೂರಿನಲ್ಲಿ ಅಥವಾ ಮೈಸೂರಿನಲ್ಲಿ ಕರೆಯುವ ಅಧಿಕಾರವು ರಾಜ್ಯಪಾಲರಿಗೆ ಇದೆ. ಈ ಸಭೆಗಳು ವರ್ಷಕ್ಕೆ 2-3 ಸಲ ತಿಂಗಳು ಗಟ್ಲೆ ಕೆಲಸಮಾಡುತ್ತವೆ. ಮೈಸೂರ ರಾಜ್ಯದ ಮಟ್ಟಿಗೆ ಹೊಸ ಕಾನೂನುಗಳನ್ನು ರಚಿಸುವ ಇಲ್ಲವೆ ಇದ್ದವುಗಳಲ್ಲಿ ತಿದ್ದುಪಡೆ ಮಾಡುವ ಅಥವಾ ರದ್ದುಪಡಿಸುವ ಅಧಿಕಾರ ಈ ಸಭೆಗಳಿಗೆ ಉಂಟು. ರಾಜ್ಯಪಾಲರಿಗೆ ಇನ್ನೂ ಕೆಲವು ಅಧಿಕಾರಗಳು ಕೆಳಗಿನಂತೆ ಇವೆ:—

1) ಶಾಸನ ಸಭೆಗಳ ಅವಧಿಯನ್ನು ಹೆಚ್ಚಿಸುವದು.
2) ಜನತೆಯನ್ನು ಈ ಸಭೆಗಳು ಪ್ರತಿನಿಧಿಸುವದಿಲ್ಲವೆಂದು ಕಂಡಾಗ ಅವುಗಳನ್ನು ರದ್ದುಪಡಿಸುವದು.
3) ರಾಜ್ಯದ ಮುಖ್ಯ ಮಂತ್ರಿ ಮತ್ತು ಇತರ ಮಂತ್ರಿಗಳನ್ನು ನೇಮಿಸಿಕೊಳ್ಳುವದು.
4) ಮಂತ್ರಿಮಂಡಲದ ಕಾರ್ಯ ಸರಿಯಾಗಿ ನಡೆದಿದೆಯೋ ಎಂಬುದರ ಮೇಲ್ವಿಚಾರಣೆ ಮಾಡುವುದು ಹಾಗು ಸರಿಯಾಗಿ ನಡೆದಿಲ್ಲವೆಂದು ತನಗೆ ಅನಿಸಿದಾಗ ರಾಷ್ಟ್ರಪತಿಗಳ ಅಪ್ಪಣೆಯ ಮೇರೆಗೆ ಮಂತ್ರಿಮಂಡಲವನ್ನು ಕಿತ್ತಿ ಹಾಕುವದು.

5) ಒಟ್ಟಿನಲ್ಲಿ ಮಂತ್ರಿಮಂಡಲದ ಸಹಾಯದಿಂದ ರಾಜ್ಯ ಸರಕಾರದ ಯಾವತ್ತೂ ಹೊಣೆ ಹೊತ್ತು ಅದನ್ನು ನಿರ್ವಹಿಸುವದು.

**ಮಂತ್ರಿಮಂಡಲದ ರಚನೆ**

ಪ್ರತಿ ಐದು ವರ್ಷಕ್ಕೊಮ್ಮೆ ಮಹಾ ಚುನಾವಣೆ ನಡೆಯುತ್ತದೆ. ಪ್ರೌಢಮತದಾನ ಪದ್ಧತಿಯ ಮೇರೆಗೆ 21 ವರ್ಷದ ಪ್ರಬುದ್ಧ ನಾಗರಿಕರೆಲ್ಲ ಆರಿಸಿಕೊಟ್ಟ ಪ್ರಜಾಪ್ರತಿನಿಧಿಗಳು ತಮ್ಮ ತಮ್ಮ ರಾಜಕೀಯ ಪಕ್ಷದ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತರಲು ಪ್ರಯತ್ನಿಸುವದುಂಟು. ಯಾವ ರಾಜಕೀಯ ಪಕ್ಷಕ್ಕೆ ವಿಧಾನಸಭೆ (ಕೆಳಸಭೆ)ಯಲ್ಲಿ ಪ್ರಚಂಡ ಬಹುಮತವುಂಟೋ ಆ ಪಕ್ಷದ ನಾಯಕನು ಮಂತ್ರಿಮಂಡಲ ರಚಿಸುವ ಹೊಣೆ ಹೊರುತ್ತಾನೆ. ಎರಡೂ ಶಾಸನ ಸಭೆಗಳ ಬಹುಮತದ ಬೆಂಬಲವು ಇರುವ ವರೆಗೆ ಆಯಾ ಮಂತ್ರಿಮಂಡಲವು ಸಾಮೂಹಿಕ ಹೊಣೆಗಾರಿಕೆಯನ್ನರಿತು ಅಧಿಕಾರದಲ್ಲಿದ್ದು ಕಾರ್ಯ ಮಾಡುತ್ತದೆ.

ಮುಖ್ಯ ಮಂತ್ರಿಯನ್ನು ರಾಜ್ಯಪಾಲರೇ ನೇಮಿಸಿಕೊಳುತ್ತಾರೆ. ಅವನಿಗೆ ತನ್ನ ಸಹಕಾರಿಗಳ ಪಟ್ಟಿಯನ್ನು ಕೊಡಲು ರಾಜ್ಯಪಾಲರು ಕೇಳಿಕೊಳ್ಳುತ್ತಾರೆ.

**ಮಂತ್ರಿಮಂಡಲದ ಕರ್ತವ್ಯಗಳು**

1) ಇಡೀ ಮೈಸೂರ ರಾಜ್ಯದ ಆಡಳಿತ ಸೂತ್ರಗಳನ್ನು ವಹಿಸುವದು.

2) ಆಡಳಿತದ ಅನೇಕ ಇಲಾಖೆ ( ಖಾತೆ ) ಗಳನ್ನು ತನ್ನ ಸಹೋದ್ಯೋಗಿಗಳಲ್ಲಿ ಮುಖ್ಯಮಂತ್ರಿ ಹಂಚಿಕೊಟ್ಟ ಮೇಲೆ ಅವುಗಳನ್ನು ಆಯಾ ಮಂತ್ರಿ ಸರಕಾರಿ ನೌಕರರ ಮುಖಾಂತರ ನಡೆಸುವದು.

3) ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಆಯವ್ಯಯಗಳ ವಾರ್ಷಿಕ ಅಂದಾಜ ಪತ್ರಿಕೆಯನ್ನು ಮೊದಲೇ ಸಿದ್ಧಪಡಿಸಿ ಶಾಸನಸಭೆಗಳ ಸಮ್ಮತಿ ಪಡೆಯುವುದು. ಈ ಸಮ್ಮತಿ ದೊರೆತ ಮೇಲೆಯೇ ಆಯಾ ಇಲಾಖೆಗಳಿಗೆ ಖರ್ಚುಮಾಡಲು ಹಣವು ದೊರೆಯುವುದು.

4) ರಾಜ್ಯಕ್ಕೆ ಅವಶ್ಯವಿದ್ದ ಹೊಸ ಕಾನೂನುಗಳನ್ನು 'ವಿಧೇಯಕ' ಗಳ ( ಕಚ್ಚಾ ಕಾಯದೆ ) ರೂಪದಲ್ಲಿ ತಯಾರಿಸಿ ಎರಡೂ ಶಾಸನಸಭೆಗಳಲ್ಲಿ ಚರ್ಚೆಗೆ ತಂದು ಅವುಗಳನ್ನು ರಾಜ್ಯದ ಕಾಯದೆಗಳನ್ನಾಗಿ ಪಾಸು ಮಾಡಿಕೊಳ್ಳುವುದು.

ರಾಜ್ಯಪಾಲರ ಅಭಿಪ್ರಾಯಗಳನ್ನು ಶಾಸನಸಭೆಗಳಿಗೂ ಶಾಸನಸಭೆಗಳ ಅಭಿಪ್ರಾಯಗಳನ್ನು ರಾಜ್ಯಪಾಲರಿಗೂ ತಿಳಿಸುವುದು.

## ಎರಡು ಶಾಸನ ಸಭೆಗಳು

ನಮ್ಮ ಮೈಸೂರ ರಾಜ್ಯಕ್ಕೆ ಎರಡು ಶಾಸನ ಸಭೆಗಳುಂಟು. ಒಂದಕ್ಕೆ ವಿಧಾನ ಸಭೆ (ಕೆಳಮನೆ) ಯೆಂದೂ ಇನ್ನೊಂದಕ್ಕೆ ವಿಧಾನ ಪರಿಷತ್ತು (ಮೇಲ್ಮನೆ) ಎಂದೂ ಹೆಸರುಂಟು. ಒಂದು ಹೊಸ ಕಾನೂನು ರಾಜ್ಯದ ಕಾನೂನು ಅನಿಸಿಕೊಳ್ಳಬೇಕಾದರೆ ಈ ಎರಡೂ ಶಾಸನ ಸಭೆಗಳಲ್ಲಿ ಬಹು ಮತದಿಂದ ಪಾಸಾಗಬೇಕು; ಮತ್ತು ಕೊನೆಯಲ್ಲಿ ರಾಜ್ಯಪಾಲರ ಅಂಕಿತವನ್ನು ಪಡೆಯಬೇಕು.

### ಅ) ವಿಧಾನ ಸಭೆಯ ರಚನೆ ಮತ್ತು ಅಧಿಕಾರಗಳು

**1.** ರಚನೆ: ನಮ್ಮ ರಾಜ್ಯದ ವಿಧಾನ ಸಭೆಯಲ್ಲಿ 210 ಜನ ಸದಸ್ಯರು ಇರುವರು. ಪ್ರತಿ 75000 ಜನರಿಗೆ ಒಬ್ಬನಂತೆ ಆಯಾ ಜಿಲ್ಲೆಗಳಿಂದ ಪ್ರತಿನಿಧಿಗಳನ್ನು ನಾಗರಿಕರು 5 ವರ್ಷಕ್ಕೊಮ್ಮೆ ಆರಿಸಿಕೊಡುತ್ತಾರೆ. ಈ ವಿಧಾನ ಸಭೆಗೆ ಸದಸ್ಯರಾಗುವವರು ಮೈಸೂರು ರಾಜ್ಯದ ನಾಗರಿಕರಿರಬೇಕು, 25 ವರ್ಷ ಮೇಲ್ಪಟ್ಟವರಿರಬೇಕು. ಹುಚ್ಚರಾಗಲಿ ಶಿಕ್ಷೆಯಾದವರಾಗಲಿ ಇರಬಾರದು.

ಇವರು ತಮ್ಮೊಳಗಿನ ಒಬ್ಬರನ್ನು ಸ್ಪೀಕರ್ (ಅಧ್ಯಕ್ಷ) ಎಂದೂ ಇನ್ನೊಬ್ಬರನ್ನು ಡೆಪ್ಯೂಟಿ ಸ್ಪೀಕರ್ (ಉಪಾಧ್ಯಕ್ಷ) ಎಂದೂ ಆರಿಸಿಕೊಂಡು ವಿಧಾನ ಸಭೆಯ ಕಾರ್ಯ ಕಲಾಪಗಳನ್ನು ನಡೆಸುವುದುಂಟು. ಅಧ್ಯಕ್ಷನಾಗಿ ಆರಿಸಿ ಬಂದ ಮೇಲೆ ಆತನು ಪಕ್ಷಾತೀತ ಸದಸ್ಯನಾಗುವನು.

**2.** ಅಧಿಕಾರಗಳು: ವಿಧಾನಸಭೆಯ ಒಪ್ಪಿಗೆಯಿಲ್ಲದೆ ಯಾವ ವಿಧೇಯಕವೂ ಕಾನೂನು ಆಗಲಾರದು.

ವಿಧಾನಸಭೆಯು ಮಂತ್ರಿಮಂಡಲದಲ್ಲಿ ಅವಿಶ್ವಾಸದ ಗೊತ್ತುವಳಿಯನ್ನು ಪಾಸುಮಾಡಿದರೆ ಮಂತ್ರಿಮಂಡಲವು ರಾಜೀನಾಮೆ ಕೊಡಬೇಕು. ಆಗ ಹೊಸ ಚುನಾವಣೆಯಾದರೂ ಆಗಬೇಕು. ವಿಧಾನಸಭೆಯ ಬೆಂಬಲ ವಿದ್ದ ಇನ್ನೊಂದು ಪಕ್ಷವಾದರೂ ಮಂತ್ರಿಮಂಡಲವನ್ನು ರಚಿಸಬೇಕು. ಈ ಮಾತನ್ನು ರಾಜ್ಯಪಾಲನು ನಿರ್ಧರಿಸಬೇಕು.

ಪ್ರತಿವರ್ಷದ ಆಯವ್ಯಯಗಳ ಅಂದಾಜು ಪತ್ರಿಕೆಯನ್ನು ಪಾಸು ಮಾಡಬೇಕು. ಹೊಸ ಕರ ಹೇರುವ ಅಧಿಕಾರ ವಿಧಾನಸಭೆಗೆ ಇದೆ. ಯಾವುದೇ ಸಾರ್ವಜನಿಕ ಹಿತಸಂಬಂಧದ ಬಗ್ಗೆ ಹೊಸ ಕಾನೂನನ್ನು ರಚಿಸುವ ಅಧಿಕಾರವೂ ಉಂಟು.

## ಆ) ವಿಧಾನ ಪರಿಷತ್ತಿನ ರಚನೆ ಮತ್ತು ಅದರ ಅಧಿಕಾರಗಳು

**1. ರಚನೆ:** 2ನೆಯ ಶಾಸನಸಭೆಯೇ ವಿಧಾನ ಪರಿಷತ್ತು. ಇದರಲ್ಲಿ 70 ಸದಸ್ಯರಿದ್ದಾರೆ. ಇವರು ಜನರಿಂದ ನೇರವಾಗಿ ಆರಿಸಲ್ಪಟ್ಟವರಲ್ಲ. ನಗರಸಭೆಗಳು, ಜಿಲ್ಲಾ ಲೋಕಲ್ ಬೋರ್ಡುಗಳು, ಶಾಲೆ ಕಾಲೇಜುಗಳ ಶಿಕ್ಷಕರು, ಪದವೀಧರರು ಮೊದಲಾದವರು ಈ ಸದಸ್ಯರನ್ನು ಚುನಾಯಿಸಿ ಕೊಡುತ್ತಾರೆ. ಕೆಲವು ಹೆಸರಾಂತ ಜನಪದ ಚಿತ್ರಕರ್ತರನ್ನು ರಾಜ್ಯಪಾಲರು ನಾಮಕರಣ ಮಾಡುತ್ತಾರೆ. ಕೆಲವು ಸದಸ್ಯರನ್ನು ವಿಧಾನ ಸಭೆಯು ತನ್ನ ಪ್ರತಿನಿಧಿಗಳೆಂದು ನೇಮಿಸಬಹುದು. ಆದ್ದರಿಂದ ಅಪ್ರತ್ಯಕ್ಷ ಚುನಾವಣೆ ಪದ್ಧತಿಯಿಂದ ಆರಿಸಲ್ಪಟ್ಟ ಹಿರಿಯರ ಸಂಸ್ಥೆ ಇದು. ಈ ಶಾಸನಸಭೆಗೂ ಒಬ್ಬ ಚೇರಮನ್, ವೈಸ್ ಚೇರಮನ್‌ರನ್ನು ಸದಸ್ಯರೇ ಆರಿಸಿಕೊಳ್ಳುತ್ತಾರೆ. ಇವರೇ ಸಭೆಯ ಕಾರ್ಯಕಲಾಪ ನಡೆಸುತ್ತಾರೆ.

**2. ಅಧಿಕಾರಗಳು:** ವಿಧಾನಸಭೆಯಷ್ಟು ಹೆಚ್ಚಿನ ಅಧಿಕಾರಗಳು ಈ ವಿಧಾನಪರಿಷತ್ತಿಗೆ ಇಲ್ಲ. ಸಾಮಾನ್ಯವಾಗಿ ಈ ಪರಿಷತ್ತಿನ ಸಮ್ಮತಿ ಪ್ರತಿ ವಿಧೇಯಕಕ್ಕೇ ಬೇಕೇಬೇಕು. ಆದರೆ ವಿಶಿಷ್ಟ ಪ್ರಸಂಗದಲ್ಲಿ ವಿಧಾನ ಪರಿಷತ್ತು ಒಪ್ಪಿಗೆ ಕೊಡದಿದ್ದರೂ ವಿಧಾನ ಸಭೆಯು ಪಟ್ಟುಹಿಡಿದಲ್ಲಿ ಅದು ರಾಜ್ಯದ ಕಾನೂನು ಆಗಬಲ್ಲದು.

ಕೆಲವು ಸಂದರ್ಭಗಳಲ್ಲಿ ಈ ಎರಡೂ ಶಾಸನ ಸಭೆಗಳ ಸಂಯುಕ್ತ ಅಧಿವೇಶನಗಳನ್ನು ರಾಜ್ಯಪಾಲರು ಕರೆದು ಭಾಷಣ ಮಾಡುವದುಂಟು. ವಿಧಾನಸಭೆಯ ಅವಧಿ 5 ವರ್ಷವಾದರೆ, ವಿಧಾನ ಪರಿಷತ್ತು ಶಾಶ್ವತ ಸಭೆ. ಇದರಲ್ಲಿ ಪ್ರತಿ 2 ವರ್ಷಕ್ಕೊಮ್ಮೆ ಪರಿಷತ್ತಿನ ಮೂರರಲ್ಲಿ ಒಂದು ಪಾಲು ಸದಸ್ಯರು ನಿವೃತ್ತರಾಗಿ ಹೊಸ ಸದಸ್ಯರು ಆರಿಸಿ ಬರುತ್ತಾರೆ.

ಈ ಎರಡೂ ಶಾಸನಸಭೆಗಳ ಅಧಿವೇಶನಗಳು ನಡೆಯುವ ಕಟ್ಟಡಕ್ಕೆ 'ವಿಧಾನ ಸೌಧ' ಎಂಬ ಹೆಸರಿದೆ.

### ಅಭ್ಯಸನಗಳು

1. ಮೈಸೂರ ರಾಜ್ಯಪಾಲರನ್ನು ಯಾರು ನೇಮಿಸುತ್ತಾರೆ ? ರಾಜ್ಯಪಾಲರ ಅಧಿಕಾರಗಳು ಯಾವವು ?
2. ಮೈಸೂರ ರಾಜ್ಯದ ಮಂತ್ರಿ ಮಂಡಲವನ್ನು ಯಾರು ನೇಮಿಸುವರು ? ಎಂಥವರನ್ನು ನೇಮಿಸಿಕೊಳ್ಳಲಾಗುವದು ?

3. ಮೈಸೂರ ಮಂತ್ರಿ ಮಂಡಲದ ಕರ್ತವ್ಯಗಳು ಯಾವವು ?
4. ವಿಧಾನಸಭೆಯ ಸದಸ್ಯರಾಗಬೇಕಾದರೆ ಯಾವ ಅರ್ಹತೆಗಳು ಬೇಕು ?
5. ವಿಧಾನಸಭೆಯ ಹಾಗೂ ವಿಧಾನಪರಿಷತ್ತಿನ ಕಾಲಾವಧಿಯ ಬಗ್ಗೆ ನಿಮಗೇನು ಗೊತ್ತಿದೆ ?
6. ರಾಜ್ಯದ ಆಯವ್ಯಯಗಳ ಅಂದಾಜ ಪತ್ರಿಕೆಯನ್ನು ಯಾವ ಶಾಸನ ಸಭೆ ಸಿದ್ಧಪಡಿಸುವದು ? ಇದನ್ನು ಪಾಸು ಮಾಡುವವರುಯಾರು ?
7. ನಮ್ಮ ರಾಜ್ಯದ ಸದ್ಯದ ರಾಜ್ಯಪಾಲರು ಯಾರು ?

## ಉಪಸಂಹಾರ

ಬಾಲಕ ಬಾಲಕಿಯರೆ, ಈ ' ಅಭಿನವ ಸಾಮಾಜಿಕ ಅಭ್ಯಾಸಗಳು ' ಎಂಬೀ ಪುಸ್ತಕದ ಅಭ್ಯಾಸವನ್ನು ಮುಗಿಸಲು ಬಂದಿದ್ದೀರಿ. ನೀವು ನವ ಮೈಸೂರು ಅಥವಾ ಕರ್ನಾಟಕದ ಕಂದರು. ಈ ರಾಜ್ಯದ ನಿಸರ್ಗವನ್ನೂ ಜನಜೀವನವನ್ನೂ 1ನೇ ವಿಭಾಗದ ಭೂಗೋಲದಲ್ಲಿ ಅಭ್ಯಾಸ ಮಾಡಿರುವಿರಿ. 2ನೇ ವಿಭಾಗದಲ್ಲಿ ಈ ನಾಡಿನ ಅಮೌಲ್ಯ ಆಸ್ತಿಯಾದ ಧರ್ಮ ಸಂಸ್ಕೃತಿಗಳನ್ನು ಜೀವಂತವಾಗಿ ಉಳಿಸಿ ಬೆಳಿಸಿವಂಥ ಮಹಾ ಪುರುಷರ ಜೀವನ ಚರಿತ್ರೆಗಳನ್ನು ಕಲಿತಿರಿ; 3ನೇ ವಿಭಾಗದಲ್ಲಿ ಈ ಪ್ರದೇಶದಲ್ಲಿ ಸರಕಾರವು ಹೇಗೆ ಆಡಳಿತವನ್ನು ನಡೆಯಿಸುತ್ತದೆ ಎಂಬುದನ್ನೂ ಕಲಿತಿರಿ. ಈಗ ಕೆಳಗಿನ ಮಾತುಗಳನ್ನು ಗಮನಿಸಿರಿ.

1. ಇಲ್ಲಿ ಕಲಿತದ್ದು ರಕ್ತಗತವಾಗಬೇಕೆಂಬ ಉದ್ದೇಶದಿಂದ ಮಹಾ ಪುರುಷರ ಜಯಂತಿಗಳನ್ನು ನೀವು ಶಾಲೆಗಳಲ್ಲಿ ಆಗೀಗ ನಿಮ್ಮ ಗುರುಗಳ ಸಲಹೆ ಪಡೆದು ಆಚರಿಸಬೇಕು. ಆ ಕಾಲಕ್ಕೆ ಆಯಾ ಧರಿತ್ರಪುರುಷರ ಒಳ್ಳೇ ಭಾವಚಿತ್ರ, ಸಂಗ್ರಹಿಸಿ ಪ್ರದರ್ಶಿಸಬೇಕು. ಆಯಾ ಪುರುಷರ ಜೀವನಕ್ಕೆ ಸಂಬಂಧಿಸಿದ ಹೆಚ್ಚಿನ ಅಂಶಗಳನ್ನು ಕಲೆಹಾಕಬೇಕು. ಕತೆ–ಹಾಡು–ಲಾವಣಿಗಳನ್ನು ಜನಜೀವನದೊಳಗಿಂದ ಸಂಗ್ರಹಿಸಬೇಕು. ಆಯಾ ಪುರಷರ ಜನ್ಮ ಸ್ಥಳಗಳಿಗೆ ಭೆಟ್ಟಿಕೊಟ್ಟು ಚರಿತ್ರಪುರುಷರ ಬಗ್ಗೆ ಅಲ್ಲಿದ್ದ ದಂತಕಥೆ ಮೊದಲಾದವನ್ನು ಸಂಗ್ರಹಿಸಬೇಕು.

2. ರಾಷ್ಟ್ರೀಯ ಉತ್ಸವಗಳು : ಅಗಸ್ಟ 15, ಅಕ್ಟೋಬರ 2 ( ಚರಕಾ ಜಯಂತಿ ಅಥವಾ ಗಾಂಧಿ ಜಯಂತಿ ), ನವ್ಹೆಂಬರ 14 ( ಬಾಲ ದಿನಾಚರಣೆ ಅಥವಾ ನೆಹರೂ ಜಯಂತಿ ), ವೈಶಾಖ ಶುದ್ಧ 2 ಬಸವ ಜಯಂತಿ ಇತ್ಯಾದಿ ದಿನಗಳನ್ನು ಉತ್ಸಾಹದಿಂದ ಆಚರಿಸಿ ಆಯಾ

ಚರಿತ್ರಪುರುಷರ ಕಾಲದ ವಾತಾವರಣವನ್ನು ಹುಟ್ಟಿಸುವಂತೆ ಭಾಷಣ, ವಿಚಾರ ಸಂಕಿರಣಗಳನ್ನು ಏರ್ಪಡಿಸಬೇಕು.

3. ಶಾಲೆಯಲ್ಲಿ ಬಾಲಕರ ಮಂತ್ರಿಮಂಡಲ, ಶಾಲಾ ವಿಧಾನ ಸಭೆಗಳು ಇವುಗಳನ್ನು ಏರ್ಪಡಿಸಬೇಕು. ನಿಮ್ಮ ಭಾಗದ ಶಾಸನಸಭಾ ಸದಸ್ಯರನ್ನು ನಿಮ್ಮ ಮಧ್ಯದಲ್ಲಿ ಬರಮಾಡಿಕೊಂಡು ಶಾಸನ ಸಭೆಗಳ ಪರಿಚಯ ಮಾಡಿಕೊಳ್ಳಬೇಕು.

4. ವರ್ಗದಲ್ಲಿ ಬಾಲ ನಾಯಕರನ್ನು ಆಗೀಗ ಆರಿಸುತ್ತ ಚುನಾವಣೆಯ ಪದ್ಧತಿಯನ್ನು ಪ್ರತ್ಯಕ್ಷ ಅರಿಯಬೇಕು.

5. ರಾಷ್ಟ್ರಧ್ವಜವನ್ನು ಏರಿಸುವ ಇಳಿಸುವ ಸಮಾರಂಭದ ವಿಶಿಷ್ಟ ವಿವರಗಳನ್ನು ಬಲ್ಲವರಿಂದ ತಿಳಿದುಕೊಳ್ಳಿರಿ. ರಾಷ್ಟ್ರಗೀತೆಗಳಾದ ವಂದೇ ಮಾತರಂ, ಜನಗಣಮನ ಅಧಿನಾಯಕ ಜಯಹೇ ಭಾರತ ಭಾಗ್ಯವಿಧಾತಾ, ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು ಎಂಬೀ ಹಾಡುಗಳನ್ನು ಸುವ್ಯವಸ್ಥಿತವಾಗಿ ಸಾಮೂಹಿಕವಾಗಿ ಉಚ್ಚ ಧ್ವನಿಯಿಂದ ಹೇಳುವ ಸಾಂಪ್ರದಾಯವನ್ನು ಬೆಳೆಸಿಕೊಳ್ಳಬೇಕು. ಪ್ರತಿಯೊಬ್ಬ ಭಾರತೀಯನಿಗೆ ಈ ನಾಡಹಾಡುಗಳು ಕಂಠಪಾಠ ಬರಬೇಕು. ಹಾಡುಗಳನ್ನು ಹೇಳುವಾಗ ಗೌರವದಿಂದ ಶಾಂತವಾಗಿ ಎದ್ದು ನಿಲ್ಲಬೇಕು.

|| ಜಯ ಹಿಂದ–ವಂದೇ ಮಾತರಮ್ ||



“ ವಿಧಾನ ಸೌಧ ” ಬೆಂಗಳೂರು